# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ?




**ಚಿತ್ರಗಳು :** ತನು, ಷಣ್ಮುಖ, ಶ್ರೀಹರಿ, ರವಿ ಹೆಗ್ಗಡಿ, ಕಮಲಂ ಅರಸು, ವಿ. ಆರ್. ಸಿ. ಶೇಖರ್, ಗೋಪಿ, ಎನ್. ಆರ್. ಹೆಗಡೆ ಬೊಮ್ನಳ್ಳಿ

**ಮುಖಪುಟದ ಛಾಯಾಚಿತ್ರ :** ಕೆ. ನಲ್ಲತಂಬಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಕೇಂದ್ರದಲ್ಲಿ ಅಧಿಕಾರ ಗ್ರಹಣ ಮಾಡಿದ ಮೇಲೆ ನರೇಂದ್ರ ಮೋದಿ ಯೋಜನೆಗಳ ಮಹಾಪೂರವನ್ನೇ ಹರಿಸುತ್ತಿದ್ದಾರೆ. ಲೆಕ್ಕ ಹಾಕಿದರೆ ತಿಂಗಳಿಗೆ ಒಂದರಂತೆ ನಾಲ್ಕು ಭರ್ಜರಿ ಘೋಷಣೆಗಳನ್ನು ಮಾಡಿದ್ದಾರೆ. 'ಭಾರತದಲ್ಲೇ ತಯಾರಿಸಿ' ಎಂಬುದರಿಂದ ಪ್ರಾರಂಭವಾದ ಕರೆಯಿಂದ ಇತ್ತೀಚೆಗೆ ನಮ್ಮ ಪಾರ್ಲಿಮೆಂಟ್ ಸದಸ್ಯರಿಗೆ ತಲಾ ಮೂರು ಗ್ರಾಮಗಳನ್ನು ದತ್ತಿ ತೆಗೆದುಕೊಳ್ಳುವುದಕ್ಕೆ ಕರೆ ನೀಡಿದ್ದಾರೆ. ಇವುಗಳಲ್ಲಿ ದೇಶದ ಎಲ್ಲ ಜನರಿಗೂ ನೀಡಿರುವ, ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಧ್ಯಮಗಳಲ್ಲಿ ನಿತ್ಯ ಪ್ರಚಾರ ಕೈಗೊಂಡಿರುವ 'ಸ್ವಚ್ಛ ಭಾರತ ಅಭಿಯಾನ', ಈ ಎಲ್ಲವೂ ಕೂಡ ಜನಪ್ರಿಯ, ಜನಪರ ಯೋಜನೆಗಳೇನೋ ಸರಿ. ಇದಕ್ಕೆ ಯಾರೂ ಆಕ್ಷೇಪ ಮಾಡುವುದಿಲ್ಲ. ಇವನ್ನೆಲ್ಲ ಕಾರ್ಯಗತ ಮಾಡಿದರೆ ನಮೋ ಎನ್ನಲು ಅಡ್ಡಿಯಿಲ್ಲ. ಮೇಲ್ನೋಟಕ್ಕೆ ಎಲ್ಲ ಆಕರ್ಷಕವಾದ ಕಾರ್ಯಕ್ರಮಗಳೇ. ಆದರೆ ಇಚ್ಛಾಶಕ್ತಿ ಸರಕಾರಕ್ಕೂ ಸಾರ್ವಜನಿಕರಿಗೂ ಇರಬೇಕು. ಸದ್ಯಕ್ಕೆ ಜನರು ಒಂದು ರೀತಿಯ ಭ್ರಮೆಯಲ್ಲಿದ್ದಾರೆ. ಅದೇ ಮೋದಿ ಮೋಡಿ ಎಂದು ಕಾಣುತ್ತದೆ.

ಮೊದಲನೆಯದಾಗಿ, ಪಾರ್ಲಿಮೆಂಟ್ ಸದಸ್ಯರಿಗೆ ನೀಡಿರುವ ಕರೆಯನ್ನು ಗಮನಿಸೋಣ. ಪಾರ್ಲಿಮೆಂಟ್ ಸದಸ್ಯರಿಗೆ ತಮ್ಮ ಕ್ಷೇತ್ರಗಳ ಅಭಿವೃದ್ಧಿಗಾಗಿ ಒಂದಷ್ಟು ಹಣ ನೀಡುವ ಕ್ರಮ ಬಂದು ಹಲವು ವರ್ಷಗಳೇ ಆದುವು. ಈ ಹಣವನ್ನು ಇರುವ ಏಳುನೂರು ಚಿಲ್ಲರೆ ಎಂಪಿಗಳ ಪೈಕಿ ಪೂರ್ಣವಾಗಿ ವಿನಿಯೋಗಿಸಿರುವವರು ಶೇಕಡ ಹತ್ತರಷ್ಟು ಕೂಡ ಇಲ್ಲ, ಕೆಲ ದಿನಗಳ ಹಿಂದೆ ಲೋಕಸಭಾ ಸೆಕ್ರೆಟಾರಿಯಟ್ ಪ್ರಕಟಿಸಿದ ಒಂದು ವರದಿ ಪ್ರಕಾರ ಹತ್ತಿರ ಹತ್ತಿರ ಶೇಕಡ ೬೦ರಷ್ಟು ಮಂದಿ ಎಂಪಿಗಳು ಹಣವನ್ನು ಉಪಯೋಗಿಸಿಯೇ ಇಲ್ಲ. ಹೋದ ಕಡೆಯಲ್ಲೆಲ್ಲ ನಮ್ಮ ಎಂಪಿ ಮಹಾಶಯರುಗಳು ಸಂಘಸಂಸ್ಥೆಗಳಿಗೆ ಇಂತಿಷ್ಟು ಹಣ ನೀಡುವುದಾಗಿ ಆಶ್ವಾಸನೆ ನೀಡುತ್ತಾರೆ. ಆದರೆ ಈ ಸಂಸ್ಥೆಗಳು ಆ ಹಣ ಪಡೆದುಕೊಳ್ಳಲು ಸಾಕಷ್ಟು ಪರದಾಡಬೇಕು. ಕೆಲವೊಮ್ಮೆ ದಾನಿಗಳಿಗೇ ಒಂದು ಭಾಗ ಲಂಚ ನೀಡಬೇಕಾಗುವುದೂ ಉಂಟು. ಹಣ ಬಿಡುಗಡೆ ಮಾಡಲು ಸಾಕಷ್ಟು ರೀತಿ ರಿವಾಜುಗಳಿರುತ್ತವೆ, ಸಂಬಂಧಪಟ್ಟ ಡೆಪ್ಯೂಟಿ ಕಮೀಷನರ್ ಕಚೇರಿಯಿಂದ ಈ ಹಣ ಪಾವತಿಯಾಗಬೇಕು. ಪರಿಸ್ಥಿತಿ ಹಾಗಿರುವಾಗ, ಮತ್ತೆ ಯಾವ ಚುನಾಯಿತ ಪ್ರತಿನಿಧಿಯೂ ತನ್ನ ಕ್ಷೇತ್ರವನ್ನು ಸಂದರ್ಶಿಸುವುದು ಕೂಡ ಅಪರೂಪವೇ. ಅಲ್ಲದೆ ಪಾರ್ಲಿಮೆಂಟರಿ ಕ್ಷೇತ್ರ ಸುಮಾರು ಏಳೆಂಟು ಶಾಸನಸಭಾ ಕ್ಷೇತ್ರಗಳನ್ನೊಳಗೊಂಡಿರುವುದರಿಂದ ಅದು ಸುಲಭವೇನಲ್ಲ. ಇಚ್ಛಾಶಕ್ತಿ ಇರುವವರು ಮಾತ್ರ ಅದನ್ನು ಮಾಡಿಯಾರು. ಹಾಗಿರುವಾಗ, ಮೂರು ಗ್ರಾಮಗಳನ್ನು ಅಭಿವೃದ್ಧಿಗೊಳಿಸುವ, ದತ್ತಿ ಪಡೆಯುವ ಸಾಹಸ ಮಾಡಿಯಾರೇ. ಪಾಪ ಹಲವರಿಗೆ ಪಾರ್ಲಿಮೆಂಟ್ ಕಲಾಪಗಳಲ್ಲಿ ಕೂರುವುದೇ ಕಷ್ಟ. ಜರೂರಾದಾಗ ಮಾತ್ರ ಹಾಜರಿ ಇರುತ್ತದೆ ಅಷ್ಟೆ. ಇವೆಲ್ಲ ನಾವು ನೋಡಿರುವುದೇ. ಇವರು ಮೋದಿ ಯೋಜನೆಗೆ ಓಗೊಡುವರೋ ನೋಡೋಣ.

'ಭಾರತದಲ್ಲೇ ತಯಾರಿಸಿ' ಘೋಷಣೆ ಹೊರಡಿಸಿದ್ದು ಕೆಂಪುಕೋಟೆ ವೇದಿಕೆಯಿಂದ ಸ್ವಾತಂತ್ರ್ಯ ದಿನಾಚರಣೆ ದಿನ. ಇದೂ ಹೊಸದೇನಲ್ಲ. ಸ್ವಾತಂತ್ರ್ಯಾನಂತರದ ಕಾಲದಲ್ಲಿ ಎಲ್ಲ ಸರಕಾರಗಳೂ ಕೂಡ ಭಾರತೀಯ ಉದ್ಯಮಿಗಳಿಗೆ ಇದೇ ಬಗೆಯ ಕರೆ ನೀಡಿದ್ದಾರೆ. ಪೈಪೋಟಿ ನಡೆಸಿ, ತಯಾರಿಸುವ ವಸ್ತುಗಳ ಗುಣಮಟ್ಟ ವರ್ಧಿಸಿ, ನಮ್ಮ ಸರಕು ಅಂತರರಾಷ್ಟ್ರೀಯ ಮಟ್ಟದಲ್ಲಿರಲಿ. ಈ ಬಗೆಯ ಉದ್ಗಾರಗಳೆಲ್ಲ ನಿರಂತರವಾಗಿ ಎಲ್ಲ ರಾಜಕಾರಣಿಗಳ, ಅದರಲ್ಲೂ ಮಂತ್ರಿಗಳ ಬಾಯಲ್ಲಿ ಉದುರುತ್ತಿರುತ್ತವೆ. ಆದರೆ ಅದು ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಆಗಿದೆ. ನಮ್ಮ ಬಹುತೇಕ ಉದ್ಯಮಿಗಳಿಗೆ ಪೈಪೋಟಿ ನಡೆಸುವುದಕ್ಕೆ ಹಿಂಜರಿಕೆಯೇನೋ! ವಿದೇಶೀ ಸರಕುಗಳ ಪೈಪೋಟಿ ಎದುರಿಸಲಾಗದೆ ಎಷ್ಟೋ ಉದ್ಯಮಗಳು ಮುಚ್ಚಿಹೋಗಿವೆ. ಟೆಲಿವಿಷನ್ ಸೆಟ್‌ಗಳ ಉದಾಹರಣೆಯೊಂದೇ ಸಾಕು. ಸೋನಿ, ಎಲ್.ಜಿ., ಸ್ಯಾಮ್‌ಸಂಗ್ ಟಿ.ವಿ.ಗಳ

*(೬ನೇ ಪುಟಕ್ಕೆ)*






ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೪ ನವೆಂಬರ್ ೨೦೧೪

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

■ *ಹೊಸತು ಕಚೇರಿಯ ವಿಳಾಸ*





**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಸಂಪಾದಕೀಯ

## ಮಹಿಳೆ ಕುರಿತ ವಿದ್ಯಮಾನಗಳು

**ಕ**ಳೆದ ಕೆಲವು ದಿನಗಳಿಂದ ರಾಜ್ಯದಲ್ಲಿ ನಡೆಯುತ್ತಿರುವ ವಿದ್ಯಮಾನಗಳಿಗೆ ಮಹಿಳೆ ಕೇಂದ್ರಬಿಂದು ವಾಗಿದ್ದಾಳೆ. ತಮಿಳುನಾಡು ಮುಖ್ಯಮಂತ್ರಿ ಜಯಲಲಿತಾ ಜೈಲುವಾಸದಿಂದ ಮೈಸೂರಿನ ಐ.ಎ.ಎಸ್. ಅಧಿಕಾರಿ ರಶ್ಮಿಯವರ ಮೇಲಿನ ಹಲ್ಲೆಯವರೆಗೆ ನಡೆದ ಹಲವಾರು ವಿದ್ಯಮಾನಗಳಲ್ಲಿನ ಪ್ರಕರಣಗಳು ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡೇ ನಡೆದಿವೆ. ಜಯಲಲಿತಾ ಜೈಲಿನಿಂದ ಬಿಡುಗಡೆಯಾದ ಸಂಗತಿ, ಈ ಸಂದರ್ಭದಲ್ಲಿ ಕರ್ನಾಟಕ–ತಮಿಳುನಾಡಿನಲ್ಲಿ ನಡೆದ ವಿದ್ಯಮಾನಗಳು ಪ್ರಜಾಸತ್ತೆಗೆ ಶೋಭೆ ತರುವಂಥವಲ್ಲ. ಅಕ್ರಮ ಸಂಪತ್ತಿನ ಆರೋಪ ಹೊತ್ತಿರುವ ಒಬ್ಬ ಮಹಿಳೆ ಜೈಲುಪಾಲಾಗಿ ಜೈಲಿನಿಂದ ಬಿಡುಗಡೆಯಾಗುವವರೆಗೆ ನಡೆದ ವಿದ್ಯಮಾನಗಳು, ನಡೆದ ಅನಪೇಕ್ಷಿತ ಪ್ರಚಾರಗಳು ನ್ಯಾಯಾಂಗ ವ್ಯವಸ್ಥೆಯನ್ನೇ ಬೆಚ್ಚಿಬೀಳಿಸಿವೆ. ಒಬ್ಬ ಭ್ರಷ್ಟ ರಾಜಕಾರಣಿ ಜೈಲು ಪಾಲಾದರೆ ಕೆಲವರು ಆತ್ಮಹತ್ಯೆ ಮಾಡಿಕೊಳ್ಳುವ ಮಟ್ಟಕ್ಕೂ ಹೋಗುತ್ತಾರೆಂದರೆ ನಮ್ಮ ಪ್ರಜಾಸತ್ತೆ ಯಾವ ಮಟ್ಟದಲ್ಲಿದೆ ಎಂಬುದನ್ನು ತೋರಿಸುತ್ತದೆ. "ಅಮ್ಮ" ಜೈಲಿನಿಂದ ಬಿಡುಗಡೆಯಾಗುವಾಗ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಜೈಲಿಗೆ ಹೋಗಿ ಬಿಡುಗಡೆಯಾದ ಯಾವ ಸ್ವಾತಂತ್ರ್ಯ ಹೋರಾಟಗಾರನಿಗೂ ಸಿಗದಿದ್ದ ಗೌರವ ಜಯಲಲಿತಾ ಅವರಿಗೆ ಸಿಗುತ್ತದೆ. ಮಾತ್ರವಲ್ಲ, ಜಯಲಲಿತಾ ಅವರಿಗೆ ಶಿಕ್ಷೆ ವಿಧಿಸಿದ ನ್ಯಾಯಾಧೀಶರ ಮೇಲೂ ಬಹಿರಂಗವಾಗಿ ಆಕ್ರೋಶ ವ್ಯಕ್ತವಾಗುತ್ತದೆ. ಇದು ವ್ಯಕ್ತಿ ಕೇಂದ್ರಿತ ರಾಜಕಾರಣದಲ್ಲಿ ಪ್ರಜಾಸತ್ತೆ ತಲುಪಿದ ದುರಂತ. ಇನ್ನೊಂದೆಡೆ, ಒಬ್ಬ ಪ್ರಾಮಾಣಿಕ ಅಧಿಕಾರಿ ರಶ್ಮಿಯವರ ಮೇಲೆ ಬಹಿರಂಗವಾಗಿಯೇ ನಡೆದ ಹಲ್ಲೆ ಪ್ರಜಾಸತ್ತೆಯನ್ನೇ ಅಣಕಿಸುವಂತಿದೆ. ಆ ಮಹಿಳಾ ಅಧಿಕಾರಿಯ ಮೇಲೆ ಹಲ್ಲೆಗೆ ಇನ್ನೊಬ್ಬ ಮಹಿಳಾ ಅಧಿಕಾರಿಯ ಕುಮ್ಮಕ್ಕಿದೆ ಎಂಬ ಸಂಶಯ ಇನ್ನೂ ಆತಂಕಕಾರಿಯಾದದ್ದು. ಇದರ ಹಿಂದೆ ಭ್ರಷ್ಟಾಚಾರದಲ್ಲಿ ತೊಡಗಿರುವ ಮಾಫಿಯಾಗಳ ಕೈವಾಡವಿದೆ ಎಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸರಕಾರ ಸೂಕ್ತ ತನಿಖೆ ನಡೆಸಿ ಈ ಘಟನೆಯ ಹಿಂದಿರುವವರು ಎಂಥದೇ ಪ್ರಭಾವಶಾಲಿಗಳಾಗಿದ್ದರೂ ಅವರಿಗೆ ಶಿಕ್ಷೆಯಾಗುವಂತೆ ನೋಡಿಕೊಳ್ಳಬೇಕು. ಮೇಲಿನ ಎರಡು ಘಟನೆಗಳ ಹಿಂದಿರುವ ಒಂದು ಸೂಕ್ಷ್ಮತೆಯೇನೆಂದರೆ ಭ್ರಷ್ಟಾಚಾರದಲ್ಲಿ ಸಿಲುಕಿ ಜೈಲುಪಾಲಾದ ಒಬ್ಬ ಮಹಿಳಾ ರಾಜಕಾರಣಿ ನ್ಯಾಯಾಲಯದಿಂದ ಜಾಮೀನು ಪಡೆದು ಹೊರಬರುವಾಗ ಗೌರವ, ಆದರ, ಅಭಿಮಾನಗಳು ಉಕ್ಕಿ ಹರಿಯುತ್ತವೆ. ಭ್ರಷ್ಟಾಚಾರದ ವಿರುದ್ಧ ಧ್ವನಿಯೆತ್ತಿ ತನಿಖೆಗೆ ಆಗ್ರಹಿಸಿದ ಒಬ್ಬ ಮಹಿಳಾ ಅಧಿಕಾರಿ ಮಾಫಿಯಾಗಳಿಂದ ಏಟುತಿಂದು ಹಲ್ಲುದಿದುರಿಸಿಕೊಳ್ಳಬೇಕಾಗುತ್ತದೆ. ಇಂದೆಂಥ ಪ್ರಜಾಪ್ರಭುತ್ವ!

ಮೇಲೆ ಉದಾಹರಿಸಿದ ಎರಡು ಘಟನೆಗಳು ನಮ್ಮ ರಾಜಕೀಯ, ಆಡಳಿತಾತ್ಮಕ ಕ್ಷೇತ್ರದ ವಿದ್ಯಮಾನಗಳಾದರೆ ಮಹಿಳೆಗೇ ಸಂಬಂಧಿಸಿದ ನಮ್ಮ ಸಾಮಾಜಿಕ ಬದುಕಿನಲ್ಲಿ ನಡೆದ 'ಅತ್ಯಾಚಾರ'ಕ್ಕೆ ಸಂಬಂಧಿಸಿದ ಇನ್ನೊಂದು ಸೂಕ್ಷ್ಮವನ್ನು ಗಮನಿಸಬೇಕು. ರಾಮಚಂದ್ರಾಪುರ ಮಠದ ರಾಘವೇಶ್ವರ ಸ್ವಾಮಿ ತಮ್ಮ ಭಕ್ತೆ, ಮಠದ ಕಾರ್ಯಕ್ರಮ ಗಳಲ್ಲಿ ಗಾಯಕಿಯಾಗಿ ಕೆಲಸ ಮಾಡುತ್ತಿದ್ದ ಪ್ರೇಮಲತಾ ಎಂಬ ಮಹಿಳೆಯ ಮೇಲೆ ನಿರಂತರ ಅತ್ಯಾಚಾರ ಮಾಡಿದ್ದಾನೆ ಎಂಬ ಆರೋಪಕ್ಕೊಳಗಾಗಿದ್ದಾನೆ. ಹಿಂದಿನ ಬಿಜೆಪಿ ಸರಕಾರದಲ್ಲಿ ಸಚಿವನಾಗಿದ್ದ ರಾಮದಾಸ ಸರಕಾರಿ ನೌಕರಳಾದ ಪ್ರೇಮಕುಮಾರಿ ಎಂಬ ಮಹಿಳೆಯ ಮೇಲೆ 'ಅತ್ಯಾಚಾರ' ಮಾಡಿ ಮದುವೆಯಾಗುತ್ತೇನೆಂದು ಮೋಸ ಮಾಡಿದ್ದಾನೆ ಎಂಬ ಆರೋಪಕ್ಕೊಳಗಾಗಿದ್ದಾನೆ. ಇನ್ನೊಂದು ಪ್ರಕರಣದಲ್ಲಿ ನಮ್ಮ ರಾಜ್ಯದ ಮಾಜಿ ಮುಖ್ಯಮಂತ್ರಿ, ಕೇಂದ್ರದ ಹಾಲಿ ಸಚಿವ ಬಿಜೆಪಿಯ ಉನ್ನತ ನಾಯಕ ಸದಾನಂದಗೌಡರ ಪುತ್ರ ಮೈತ್ರಿಯಾ ಗೌಡ ಎಂಬ ಯುವತಿಯ ಮೇಲೆ 'ಅತ್ಯಾಚಾರ' ಮಾಡಿ, ಅರಿಷಿಣ ಕೊಂಬು ಕಟ್ಟಿ 'ಗಾಂಧರ್ವ ವಿವಾಹ'ವಾಗಿ ಈಗ ಮತ್ತೊಬ್ಬ ಯುವತಿಯ ಜೊತೆ ವಿವಾಹವಾಗಲು ಹೊರಟಿದ್ದಾನೆ ಎಂಬ ಆರೋಪ ಹೊತ್ತಿದ್ದಾನೆ. ಈ ಮೂರೂ ಪ್ರಕರಣಗಳಲ್ಲಿ 'ಅತ್ಯಾಚಾರ' ಮತ್ತು 'ಆರೋಪ' ಎಂಬ ಪದಗಳು ಬಳಕೆಯಾಗಿವೆ. ನ್ಯಾಯಾಂಗದ ಪರಿಭಾಷೆಯಲ್ಲಿ ಅವರು ಆರೋಪಿಗಳೇ ಹೊರತು ಅಪರಾಧಿಗಳಲ್ಲ. ಮುಂದಿನ ತನಿಖೆ, ವಿಚಾರಣೆಯಲ್ಲಿ ಸಾಕ್ಷಿ–ಪುರಾವೆಗಳ ಹಿನ್ನೆಲೆಯಲ್ಲಿ ಅವರ ಮೇಲಿನ ಆರೋಪ ಸಾಬೀತಾಗಬಹುದು. ಆಗದೆಯೂ ಇರಬಹುದು. ಆರೋಪ ಸಾಬೀತಾಗದೇ ಇದ್ದಾಗ ಅವರ ಮೇಲಿನ ಆರೋಪ ಸಾಬೀತಾಗಿಲ್ಲ ಎಂದು ಹೇಳಲಾಗುತ್ತಿದೆಯೇ ಹೊರತು ಅವರು ನಿರಪರಾಧಿಗಳು ಅಂತಾಗುವುದಿಲ್ಲ. ಮುಖ್ಯವಾಗಿ, ಈ ಮೇಲಿನ ಮೂರು ಪ್ರಕರಣಗಳಲ್ಲಿ ನಡೆದದ್ದು 'ಅತ್ಯಾಚಾರವೇ' ಎಂಬ ಪ್ರಶ್ನೆ ಈಗ ಚರ್ಚೆಯಾಗುತ್ತಿದೆ. ಮಾಧ್ಯಮಗಳು, ಅದರಲ್ಲೂ ದೃಶ್ಯಮಾಧ್ಯಮಗಳು ಅದೇ ಪ್ರಶ್ನೆಯನ್ನು ಎತ್ತಿ ಈ ಪ್ರಕರಣಗಳಲ್ಲಿ 'ಆರೋಪ' ಮಾಡಿರುವ ಮೂವರು ಮಹಿಳೆಯರನ್ನೇ ದಿನವಿಡೀ ಎಳೆದಾಡುತ್ತಿವೆ. ಆ ಪ್ರಶ್ನೆಗಳಲ್ಲಿ 'ನೀವು ಆ ಪುರುಷರ ಜೊತೆ ಲೈಂಗಿಕ ಕ್ರಿಯೆಯಲ್ಲಿ ತೊಡಗುವಾಗ ನಿಮ್ಮ ಸಹಮತವಿತ್ತು. ಈಗ ಅವರು ನಿಮ್ಮಿಂದ ದೂರವಾದಾಗ ಆರೋಪ ಮಾಡುತ್ತಿರುವಿರಿ. ಇದು ಹೇಗೆ ಅತ್ಯಾಚಾರವಾಗುತ್ತದೆ?' ಎಂಬುದೇ ಆ ಪ್ರಶ್ನೆ. ಈ ಪ್ರಶ್ನೆ ಎಲ್ಲಿಯವರೆಗೆ ಹೋಯಿತೆಂದರೆ ಆರೋಪ ಮಾಡಿದ್ದೇ ಮಹಾಪರಾಧ ಎಂದು ಆ ಮಹಿಳೆಯರು ಪರಿತಪಿಸುವಂತೆ ಮಾಡಿತ್ತು. ಈ ಮೂರೂ ಪ್ರಕರಣಗಳಲ್ಲಿ ಮಾಧ್ಯಮಗಳ ಕಟಕಟೆಯಲ್ಲಿ ನಿಂತವರು ಶೋಷಣೆಗೊಳಗಾದ ಮಹಿಳೆಯರೇ.

ಮಾಧ್ಯಮಗಳ ಈ ಒಮ್ಮುಖ ತನಿಖೆಯಿಂದಾಗಿ ಸಾಮಾನ್ಯ ಜನರ ಮನಸ್ಸಿನಲ್ಲಿ ಮೂಡಿದ ಪರೋಕ್ಷ ಪ್ರಶ್ನೆಯೆಂದರೆ 'ಲೈಂಗಿಕ ಚಟುವಟಿಕೆ ನಿರಂತರವಾಗಿ ನಡೆಯುವಾಗ ಈ ಮಹಿಳೆಯರು ಸುಮ್ಮನೆ ಏಕಿದ್ದರು' ಎಂಬುದು. ನಿಜ. ಇದು 'ಅತ್ಯಾಚಾರ' ಎಂಬ ಕ್ರಿಯೆಯ ವ್ಯಾಪ್ತಿಗೆ ಬರುವುದಿಲ್ಲ. 'ವಂಚನೆ'ಯ ವ್ಯಾಪ್ತಿಗೆ ಬರುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಇಂಥ ಘಟನೆಗಳು ನಡೆದಾಗ 'ಮಹಿಳೆ' ವಿದ್ಯಮಾನದ ಕೇಂದ್ರವಾಗುತ್ತಾಳೆಯೇ ಹೊರತು ಪುರುಷನಲ್ಲ ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಉನ್ನತ ಸ್ತರದಲ್ಲಿರುವ ವ್ಯಕ್ತಿಗಳು ತಮ್ಮ ಸಂಪರ್ಕಕ್ಕೆ ಬಂದ ಮಹಿಳೆಯರ ಜೊತೆ ಅಕ್ರಮ ಸಂಬಂಧ ಬೆಳೆಸಿ, ಲೈಂಗಿಕ ಸುಖ ಪಡೆದು ಅದು ಬಹಿರಂಗವಾದಾಗ ಆ ಸಂಬಂಧಗಳನ್ನೇ ನಿರಾಕರಿಸುತ್ತಾರೆ. ಮೊದಲನೆಯದು, ಇಂಥ ಸಂಬಂಧ ಹಾಗೂ ನಿರಾಕರಣೆ ಗಂಡಸಿನ ಹಕ್ಕೇ ? ಅದನ್ನು ಮಾಧ್ಯಮಗಳು, ಪುರುಷ ಪ್ರಧಾನ ವ್ಯವಸ್ಥೆಯಿಂದ ಪೀಡಿತವಾದ ಮನಸುಗಳು ಯಾಕೆ ಪ್ರಶ್ನಿಸಬಾರದು? ಹೆಣ್ಣು ಜಾಗರೂಕವಾಗಿರಬೇಕು ಎಂದು ಬೋಧಿಸುವ ಮನಸುಗಳು 'ಗಂಡಸು' ಹೇಗಿದ್ದರೂ ನಡೆಯುತ್ತದೆ ಎಂದು ಹೇಳಿದಂತಾಗುವುದಿಲ್ಲವೆ. ಒಮ್ಮುಖ ಪ್ರೇಮ–ಪ್ರೀತಿ, ಆಕರ್ಷಣೆ, ಅನಿವಾರ್ಯತೆ, ಸಂದರ್ಭ ಇಂಥ ಯಾವುದೋ ಒಂದು ಒತ್ತಡಕ್ಕೆ ಸಿಲುಕಿ, ಪುರುಷನಿಂದ ವಂಚನೆ ಗೊಳಗಾಗುವ ಮಹಿಳೆ ಮುಂದೆ ಅಸಹಾಯಕತೆಗೊಳಗಾಗುತ್ತಾಳೆ. ವಂಚನೆ ಮಾಡಿದ ಪುರುಷ ಸಮಯಸಾಧಕ ನಾಗುತ್ತಾನೆ. ಇಲ್ಲಿ ಸಮಯಸಾಧಕನನ್ನು ಪ್ರಶ್ನೆಗೆ ಗುರಿಪಡಿಸುವುದಕ್ಕಿಂತ ಹೆಚ್ಚಿನ ರೀತಿಯಲ್ಲಿ, ತೀವ್ರವಾದ ವಿಧಾನದಲ್ಲಿ ಅಸಹಾಯಕಳಾದ ಮಹಿಳೆಯೇ ಪ್ರಶ್ನೆಗಳಿಗೊಳಗಾಗುತ್ತಾಳೆ. ಸದಾನಂದಗೌಡರ ಮಗನನ್ನು, ಅವರ ಕುಟುಂಬದವರನ್ನು ಪ್ರಶ್ನಿಸದೇ ಮೈತ್ರಿಯಾ ಗೌಡ ಎಂಬ ಮಹಿಳೆಯನ್ನೇ 'ನಿನಗಾದ ವಂಚನೆಯನ್ನು ಸಾಬೀತುಮಾಡು' ಎಂದು ಕೇಳುವ ಮನಸಿನ ಹಿಂದೆ ಪುರುಷನ ವಂಚನೆಯನ್ನು ಮರೆಮಾಚುವ ಅಥವಾ ನಿರ್ಲಕ್ಷಿಸುವ ಅಥವಾ ಅದೇನು ಅಷ್ಟು ಮುಖ್ಯವಲ್ಲ ಎನ್ನುವ ಮನೋಭಾವವಿದೆ. ಇದೇ ಹಿನ್ನೆಲೆ ಇರುವ ಮನಸುಗಳು ನಮ್ಮ ಸಮಾಜದಲ್ಲಿರುವುದರಿಂದ ಆರೋಪ ಹೊತ್ತ ರಾಘವೇಶ್ವರ ಸ್ವಾಮಿ, ದೇವರ ಪೂಜೆ, ಧಾರ್ಮಿಕ ಆಚರಣೆಗಳನ್ನು ನಡೆಸುತ್ತ ನಿರಾತಂಕವಾಗಿ ಭಕ್ತರ ಮಧ್ಯೆ ಇರುತ್ತಾನೆ. ಆರೋಪ ಮಾಡಿದ ಪ್ರೇಮಲತಾ ಪ್ರತಿ ಆರೋಪ ಹೊತ್ತು ಜೈಲು ಪಾಲಾಗುತ್ತಾಳೆ. ಅದೇ ರೀತಿ ರಾಮದಾಸ ಬಿ.ಜೆ.ಪಿ.ಯ ನಾಯಕನಾಗಿ ತನ್ನ ಮೇಲಿನ ಆರೋಪವೆಲ್ಲ ಸುಳ್ಳು ಎಂದು ಹೇಳಿ ಮರ್ಯಾದಾ ಪುರುಷೋತ್ತಮನಾಗಿಯೇ ಇರುತ್ತಾನೆ. ಆರೋಪ ಮಾಡಿದ ಪ್ರೇಮಕುಮಾರಿ ರಾಮದಾಸ ಇಟ್ಟುಕೊಂಡವಳು ಎಂಬ ಕಳಂಕ ಹೊತ್ತು ಈ ಸಮಾಜವನ್ನೆದುರಿಸುತ್ತಾಳೆ. ಈ ಎಲ್ಲ ಪ್ರಕರಣಗಳು ಹೆಣ್ಣಿನ ಅಸಹಾಯಕತೆಯನ್ನೂ, ಗಂಡಿನ ಸಮಯಸಾಧಕತೆಯನ್ನೂ ತೋರಿಸುತ್ತವೆ. ಒಪ್ಪಿತ ಸಂಬಂಧಗಳಲ್ಲಿ ವಂಚನೆಗೊಳಗಾದವರಿಗೆ ಶಿಕ್ಷೆ, ಸಮಯಸಾಧಕರಿಗೆ ಪುರಸ್ಕಾರ. ಇದು ನಮ್ಮ ಪುರುಷ ಪರ ಸಾಮಾಜಿಕ ಸಂಬಂಧಗಳಲ್ಲಿ, ಮೌಲ್ಯಗಳಲ್ಲಿ ಒಡಮೂಡಿರುವ ತರ್ಕದ ಹಿನ್ನೆಲೆಯ ವರ್ತನೆ. ಇದೇ ಕಾರಣಕ್ಕೆ ಒಪ್ಪಿತ ಸಂಬಂಧಗಳಲ್ಲಾದ ವಂಚನೆಗಳು ಹೊರಬಾರದೇ ಹಲವಾರು ಮಹಿಳೆಯರು ತಮಗಾದ ಲೈಂಗಿಕತೆಯನ್ನೂ, ಸೇರಿ, ಪುರುಷನಿಂದಾಗುವ ಎಲ್ಲ ವಂಚನೆಗಳನ್ನು ಪ್ರಶ್ನಿಸದೆ, ಪ್ರತಿಭಟಿಸದೆ, ಸಹಿಸಲಾಗದೆ ಮಾನಸಿಕ ಕ್ಷೋಭೆಗೆ ಒಳಗಾಗಿದ್ದಾರೆ. ಕುಟುಂಬ, ರಾಜಕೀಯ ಕ್ಷೇತ್ರ, ಮಹಿಳೆ ದುಡಿಯುವ ಕ್ಷೇತ್ರ ಹೀಗೆ ಎಲ್ಲ ರಂಗಗಳಲ್ಲಿಯೂ ಪುರುಷರು, ಅದರಲ್ಲೂ ಪ್ರಭಾವಿ ಪುರುಷರು ನಡೆಸುವ ಇಂಥ ವಂಚನೆಗಳು ಮುಚ್ಚಿಹೋಗುತ್ತವೆ. ಅಷ್ಟು ಮಾತ್ರವಲ್ಲ, ಇಂಥ ಸಾಮಾಜಿಕ ಮನಸ್ಥಿತಿ ಇರುವಾಗ ನಿಜವಾದ ಅರ್ಥದಲ್ಲಿ ಅತ್ಯಾಚಾರಗಳು ನಡೆದರೂ ಬಹುತೇಕರು ಹೇಳಿಕೊಳ್ಳುವುದಿಲ್ಲ. ಬದುಕಿನಲ್ಲಿ ಒಂದು ಕೆಟ್ಟ ಕನಸೆಂದು ಸಹಿಸಿಕೊಂಡು ಸುಮ್ಮನಾಗುತ್ತಾರೆ. ಆದರೆ ಬದುಕಿನುದ್ದಕ್ಕೂ ಅವರು ಆ ಘಟನೆಗಳನ್ನು ಮರೆಯುವುದಿಲ್ಲ. ನಿರಂತರವಾಗಿ ಆ ನೋವನ್ನು ಹೊತ್ತುಕೊಂಡೇ ಬದುಕುತ್ತಾರೆ.

ಅತ್ಯಾಚಾರಗಳು, ಲೈಂಕಿಕ ಕ್ರಿಯೆಗಳು : ಸಹಮತ, ಪ್ರತಿರೋಧ ಹೇಗೇ ನಡೆದಿರಲಿ ಅದು ವಂಚನೆಯಾದಾಗ ಧೈರ್ಯದಿಂದ ಬಹಿರಂಗಪಡಿಸಿ, ವಂಚಕರು ಎಷ್ಟೇ ಪ್ರಭಾವಶಾಲಿಗಳಿರಲಿ, ಹಿಂಜರಿಯದೇ ಅವರನ್ನೆದುರಿಸುವ ದಿಟ್ಟತನ ನಮ್ಮ ಮಹಿಳೆಯರಿಗೆ ಬರಬೇಕು. ಎಲ್ಲ ಸಂದರ್ಭದಲ್ಲೂ ನ್ಯಾಯ ಸಿಗಲಿಕ್ಕಿಲ್ಲ. ಆದರೆ ಗೋಮುಖವ್ಯಾಘ್ರರ ಮುಖವಾಡ ಕಿತ್ತೊಗೆವ ಕೆಲಸ ಖಂಡಿತ ಆಗುತ್ತದೆ. ಇಂಥ ಸಂದರ್ಭದಲ್ಲಿ ಪುರುಷ ಹಿತಾಸಕ್ತಿಗೆ ಪೂರಕವಾದ ತರ್ಕ, ಚಿಂತನೆಗಳನ್ನು ದೂರ ಮಾಡುವ, ಮಾನವೀಯ ಸಾಮಾಜಿಕ ವಾತಾವರಣ ನಿರ್ಮಾಣ ಮಾಡುವ ಪ್ರಯತ್ನಗಳು ಪ್ರಜ್ಞಾಪೂರ್ವಕವಾಗಿ ನಡೆಯಬೇಕು.

ಸಿದ್ಧನಗೌಡ ಪಾಟೀಲ

## ಪ್ರಕೃತಿ ವಿಕೋಪದ ಅಬ್ಬರ - ಅಪಾರ ಹಾನಿ

ನಮ್ಮ ದೇಶದಲ್ಲಿ ಪ್ರಕೃತಿ ವಿಕೋಪ ಒಂದಲ್ಲ ಒಂದು ಕಡೆ ಸಂಭವಿಸುತ್ತಲೇ ಇರುತ್ತವೆ. ಇದರ ಜೊತೆಗೆ ಮಾನವನಿರ್ಮಿತ ದುರಂತಗಳೂ ಇರುತ್ತವೆ. ಸಾವುನೋವುಗಳು, ಅಪಾರವಾದ ನಷ್ಟ ಇವೆಲ್ಲ ನಮಗೆ ಮಾಮೂಲಾಗಿ ವರ್ಷ ವರ್ಷ ಆಗುತ್ತಿರುವಂಥವು. ಕೆಲವೊಮ್ಮೆ ಇದಕ್ಕೆಲ್ಲ ನಾವು ಹೊಂದಿಕೊಂಡುಬಿಟ್ಟಿದ್ದೇವೆಯೋ ಎನ್ನಿಸುವುದೂ ಉಂಟು. ದುರಂತವಾದ ಮೇಲೆ ಕೆಲ ದಿನಗಳು ಇರುವ ಪ್ರಚಾರ ಆಮೇಲೆ ಸ್ತಬ್ಧ. ಮತ್ತೆ ಇನ್ನೊಂದು ಅವಘಡ ಸಂಭವಿಸಿದಾಗಲೇ ಹಿಂದಿನ ನೆನಪು ಬರುವುದು. ಇಂಥ




ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

■ ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ

■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ – ೫೮೫ ೧೦೨
✆ : ೦೮೪೭೨-೨೨೪೩೦೨

ಅಪಘಾತಗಳಲ್ಲಿ ಪರಿತಪಿಸುವವರು ಬಡಜನರೆ. ಅತಿವೃಷ್ಟಿ, ಅನಾವೃಷ್ಟಿ, ಪ್ರವಾಹ ಹಾಗೂ ಇನ್ನಿತರ ವಿಕೋಪಗಳನ್ನು ತಡೆಯುವುದು ಸಾಧ್ಯವಾಗದು. ಆದರೆ ಅವುಗಳಿಂದ ಆಗುವ ಹಾನಿಯನ್ನು ಖಂಡಿತ ಕಡಿಮೆಮಾಡಲು ಸಾಧ್ಯ. ಸರಕಾರ ಮಾಡಬೇಕಾದ ಕೆಲಸ ಇದು. ಆದರೆ ದುರ್ಘಟನೆ ಸಂಭವಿಸಿದಾಗ ಎಚ್ಚೆತ್ತುಕೊಳ್ಳುವ ನಮ್ಮ ಸರಕಾರಿ ಆಡಳಿತ ಪರಿಹಾರ ಘೋಷಿಸಿ ತೆಪ್ಪಗಾಗುತ್ತವೆ. ಸಚಿವರುಗಳು ಆರಾಮವಾಗಿ ಹೆಲಿಕಾಪ್ಟರ್‌ಗಳಲ್ಲಿ ಕುಳಿತು ಸಮೀಕ್ಷೆ ನಡೆಸಿದ ಮೇಲೆ ಎಲ್ಲ ಮುಗಿಯಿತು. ಹಾನಿಗೊಳಗಾದವರನ್ನು ಆಮೇಲೆ ಕೇಳುವವರೇ ಇಲ್ಲ. ಪರಿಹಾರ ಪಡೆಯಲು ನೂರೆಂಟು ತಕರಾರು. ಇವೆಲ್ಲ ನಮ್ಮ ವ್ಯವಸ್ಥೆಯಲ್ಲಿ ಭದ್ರವಾಗಿ ನೆಲೆಯೂರಿಬಿಟ್ಟಿವೆ. ನಾವೂ ಅದನ್ನು ಒಪ್ಪಿಕೊಂಡುಬಿಟ್ಟಿದ್ದೇವೆ ಎನಿಸುತ್ತದೆ. ಈ ಪ್ರವೃತ್ತಿ ಬದಲಾಗಬೇಕು.

ಸದ್ಯ ವಿಜ್ಞಾನದ ಪ್ರಗತಿಯಿಂದ, ದೊರಕುತ್ತಿರುವ ಮಾಹಿತಿಯಿಂದ ಪ್ರಕೃತಿ ವಿಕೋಪವನ್ನು ತಡೆಯಲಾಗದಿದ್ದರೂ, ಅದರಿಂದಾಗುವ ಹಾನಿಯನ್ನು ನಿಯಂತ್ರಿಸಬಹುದಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಪ್ರಾಣಹಾನಿಯನ್ನು ತಪ್ಪಿಸಬಹುದಾಗಿದೆ. ಇತ್ತೀಚೆಗೆ ಆಂಧ್ರ ರಾಜ್ಯದ ವಿಶಾಖಪಟ್ಟಣಕ್ಕೆ ಅಪ್ಪಳಿಸಿದ ಚಂಡಮಾರುತ ಅದಕ್ಕೊಂದು ಉದಾಹರಣೆ. ಉಪಗ್ರಹಗಳಿಂದ ದೊರೆತ ಮಾಹಿತಿಯಿಂದಾಗಿ ತೀರಪ್ರದೇಶದಲ್ಲಿದ್ದ ಲಕ್ಷಾಂತರ ಜನರನ್ನು ಸುರಕ್ಷಿತ ಸ್ಥಳಗಳಿಗೆ ಸ್ಥಳಾಂತರಿಸಿದ್ದರಿಂದ ಸಾವಿನ ಸಂಖ್ಯೆ ಕನಿಷ್ಠ ಪ್ರಮಾಣದ್ದಾಗಿತ್ತು. ೧೯೦ ಕಿಲೋಮೀಟರ್ ವೇಗದ ಚಂಡಮಾರುತದ ಚಲನೆಯನ್ನು ಅಹರ್ನಿಶಿ ದಾಖಲಿಸುತ್ತಿದ್ದ ಉಪಗ್ರಹಗಳು ನೀಡಿದ ಮಾಹಿತಿ ಸಾಕಷ್ಟು ಪ್ರಯೋಜನಕ್ಕೆ ಬಂದಿತು. ವಿಜ್ಞಾನ ಹೇಗೆ ಜನಜೀವನವನ್ನು ನಿಯಂತ್ರಿಸುವುದರಲ್ಲಿ ಹಾಸುಹೊಕ್ಕಾಗಿದೆ ಎನ್ನುವುದನ್ನು ಇದು ತೋರಿಸಿದೆ. ಅಂತಿಮವಾಗಿ ಆಂಧ್ರ ರಾಜ್ಯದ ವಿಶಾಖಪಟ್ಟಣಕ್ಕೆ ಬಡಿದಾಗ ಅದರ ವೇಗ ತಕ್ಕಮಟ್ಟಿಗೆ ಕಡಿಮೆಯಾಗಿತ್ತು. ನೆರೆಯ ಒಡಿಶಾ ರಾಜ್ಯ ಈ ಸಲ ಬಚಾವಾಯಿತು. ಎರಡೂ ರಾಜ್ಯಗಳು ಪರಿಸ್ಥಿತಿಯನ್ನು ಎದುರಿಸಲು ಸಿದ್ಧವಾಗಿದ್ದುವು. ಹೆಚ್ಚು ಕಡಿಮೆ ಎರಡು ಮೂರು ಲಕ್ಷ ಜನರನ್ನು ಸ್ಥಳಾಂತರಿಸಿ ಸುರಕ್ಷಿತ ಪ್ರದೇಶಗಳಿಗೆ ವರ್ಗಾಯಿಸಲಾಗಿತ್ತು. ಆದರೂ 'ಹುಡ್ ಹುಡ್' ನಾಮಾಂಕಿತ ಈ ಚಂಡಮಾರುತದಿಂದ ವಿಶಾಖಪಟ್ಟಣ ತತ್ತರಿಸಿದೆ, ಉಂಟಾಗಿರುವ ನಷ್ಟ ಹತ್ತಾರು ಸಾವಿರ ಕೋಟಿ ರೂಪಾಯಿಗಳಾಗಿವೆ. ಬಿರುಗಾಳಿಯ ಹೊಡೆತಕ್ಕೆ ೧೬ ಸಾವಿರ ವಿದ್ಯುತ್ ಕಂಬಗಳು ಉರುಳಿಬಿದ್ದು, ೬೦೦೦ ವಿದ್ಯುತ್ ಪರಿವರ್ತಕಗಳು ಧ್ವಂಸವಾಗಿವೆ ಒಂದು ಅಂದಾಜಿನ ಪ್ರಕಾರ. ಇಲ್ಲಿನ ವಿಮಾನ ನಿಲ್ದಾಣ ಸಂಪೂರ್ಣವಾಗಿ ಹಾಳಾಗಿದ್ದು ವಿಮಾನ ಹಾರಾಟ ಪ್ರಾರಂಭವಾಗಲು ಒಂದು ವಾರ ಹಿಡಿಯಿತು. ಆಗಿರುವ ನಷ್ಟವನ್ನು ಪೂರ್ತಿಯಾಗಿ ಇನ್ನೂ ಅಂದಾಜು ಮಾಡಿಲ್ಲ. ಪ್ರಧಾನಿ ನರೇಂದ್ರ ಮೋದಿ ವೈಮಾನಿಕ ಸರ್ವೇಕ್ಷಣೆ ನಡೆಸಿ ಒಂದು ಸಾವಿರ ಕೋಟಿ ರೂ.ಗಳ ತಕ್ಷಣದ ಪರಿಹಾರ ಘೋಷಣೆ ಮಾಡಿದ್ದಾರೆ. ನಗರ ಸಂಪೂರ್ಣವಾಗಿ ಸಹಜಸ್ಥಿತಿಗೆ ಮರಳಿ, ಪುನರ್ನಿರ್ಮಾಣಗೊಳ್ಳಲು ಸಾಕಷ್ಟು ದಿನ ಹಿಡಿಯುತ್ತದೆ. ಆಂಧ್ರ ಮತ್ತು ಒಡಿಶಾ ತೀರ ಪ್ರದೇಶಗಳು ಯಾವತ್ತೂ ಚಂಡಮಾರುತಕ್ಕೆ ಬಲಿಯಾಗುತ್ತಿವೆ. ಈ ಸಲ ಬಂದ ಹುಡ್ ಹುಡ್ ಎಪ್ಪತ್ತೈದನೆಯದು ಸುಮಾರು ನೂರೈವತ್ತು ವರ್ಷಗಳಲ್ಲಿ. ಪದೇ ಪದೇ ಇಂಥ ಅನಾಹುತಕ್ಕೆ ಈಡಾಗುತ್ತಿರುವ ಈ ಪ್ರದೇಶದಲ್ಲಿ ಹಾನಿಯ ಪ್ರಮಾಣ ತಗ್ಗಿಸಲು ಸೂಕ್ತ ಯೋಜನೆ ರೂಪಿಸುವುದು ಅಗತ್ಯವಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಈ ಬಗ್ಗೆ ಆಲೋಚಿಸುವುದು ಒಳಿತು. ಮತ್ತೊಂದು ಚಂಡಮಾರುತಕ್ಕೆ ಕಾಯದೆ ಮುನ್ನೆಚ್ಚರಿಕೆ ವಹಿಸುವುದು ಅತ್ಯಗತ್ಯ.

ಕಾಶ್ಮೀರದಲ್ಲಿ ಪ್ರವಾಹದ ಪೀಡೆ ಕಳೆದು ತಿಂಗಳೊಳಗೇ ಹೊಸದಾಗಿ ಅಸ್ತಿತ್ವಕ್ಕೆ ಬಂದ ಆಂಧ್ರ ರಾಜ್ಯದಲ್ಲಿ ದುರಂತ ಸಂಭವಿಸಿದೆ. ಎರಡೂ ರಾಜ್ಯಗಳಲ್ಲಿ ಸಂಭವಿಸಿರುವ ಹಾನಿ ಅಪಾರ. ಕಳೆದ ವರ್ಷ ಉತ್ತರಾ ಖಂಡದಲ್ಲಿ ಆದ ದುರಂತದಲ್ಲಿ ಸಾವಿಗೀಡಾದವರ ಸಂಖ್ಯೆ ಸಾಕಷ್ಟು ಅಧಿಕವಾಗಿತ್ತು. ಈ ಅಪಘಾತದಲ್ಲಿ ಯದ್ವಾತದ್ವಾ ಮುಂದಾಲೋಚನೆಯಿಲ್ಲದೆ ಕಟ್ಟಡಗಳ ನಿರ್ಮಾಣ ಹಾಗೂ ನದೀ ತೀರದ ಪ್ರದೇಶಗಳಲ್ಲಿ ಒತ್ತುವರಿಯಿಂದ ಸಂಭವಿಸಿದ ಹಾನಿಯೇ ಹೆಚ್ಚು. ಕಾಶ್ಮೀರದಲ್ಲಿ ಸಂಭವಿಸಿದ ಪ್ರವಾಹದಲ್ಲೂ ಅಷ್ಟೆ. ಮುಂದೆಯಾದರೂ ಸರಕಾರ ಇಂಥ ಅತಿಕ್ರಮಣಗಳ ವಿರುದ್ಧ ಕ್ರಮ ತೆಗೆದುಕೊಳ್ಳಬೇಕಾಗಿದೆ. ಇದರಲ್ಲಿ ಮುಖ್ಯವಾಗಿ ಕೇಂದ್ರ ಸರಕಾರದ ಹೊಣೆಯೂ ಇದೆ. ಇಂಥ ದುರಂತಗಳು ಸಂಭವಿಸಿದಾಗ ಸಂತಾಪ ವ್ಯಕ್ತಪಡಿಸಿದರೆ ಸಾಲದು, ಇಂಥವನ್ನು ರಾಷ್ಟ್ರೀಯ ದುರಂತ ಎಂದು ಪರಿಗಣಿಸಿ ಸರಕಾರ ಸೂಕ್ತಕ್ರಮ ಕೈಗೊಳ್ಳುವಂತೆ ಒತ್ತಾಯ ತರಲು ದೊಡ್ಡ ರೀತಿಯಲ್ಲಿ ಜನಾಂದೋಳನ ನಡೆಯಬೇಕು. ಕೆಲವು ಕೋಟಿ ಪರಿಹಾರ ನೀಡುವುದರಿಂದ ಸಮಸ್ಯೆ ಬಗೆಹರಿಯದು. ಇನ್ನು ಮುಂದಾದರೂ ಇಂಥ ದುರಂತಗಳು ಸಂಭವಿಸಿದಾಗ ನಷ್ಟದ ಪ್ರಮಾಣವನ್ನು ಆದಷ್ಟು ತಗ್ಗಿಸಿ, ಜನಸಮುದಾಯದ ತೊಂದರೆಯನ್ನು ನಿವಾರಿಸಲು ಕ್ರಮ ಕೈಗೊಳ್ಳುವುದು ಅಗತ್ಯ. ನೊಂದವರ ನೆರವಿಗೆ ನಾವೆಲ್ಲ ಕೈ ಜೋಡಿಸೋಣ.

---

***ಈ ತಿಂಗಳು (೩ನೇ ಪುಟದಿಂದ)***

ಭರಾಟೆಯಲ್ಲಿ ಭಾರತೀಯ ಟಿ.ವಿ. ಕಂಪನಿಗಳೆಲ್ಲ ಅದೃಶ್ಯಗೊಂಡಿದ್ದು ಎಲ್ಲರಿಗೂ ಗೊತ್ತು. ತಯಾರಾದ ವಸ್ತುಗಳ ಮಟ್ಟಿಗೆ ಚೀಣಾದ ಸ್ಪರ್ಧೆಯ ಮುಂದೆ ನಮ್ಮ ಸರಕುಗಳು ಸೊರಗುತ್ತಿವೆ. ಉತ್ತಮ ಗುಣಮಟ್ಟದ ಚೀಣೀ ಸರಕುಗಳು ನಮ್ಮ ಎಲ್ಲ ಮಳಿಗೆಗಳಲ್ಲೂ, ಮಾಲ್‌ಗಳಲ್ಲೂ ತುಂಬಿವೆ. ಚೀಣೀಯರು ಸ್ಟೀಲ್ ತಟ್ಟೆ, ಬಟ್ಟಲುಗಳನ್ನು ಕೂಡ ತಂದು ನಮ್ಮ ಮಾರುಕಟ್ಟೆಯಲ್ಲಿ ಸುರಿಯುತ್ತಿರುವಾಗ ಏನು ಮಾಡುವುದು. ಮೋದಿ ಕರೆ ಬಹುಶಃ ಈಗಾಗಲೇ ಮಾರುಕಟ್ಟೆಯನ್ನಾವರಿಸಿ ಕೊಂಡಿರುವ ಬಹುರಾಷ್ಟ್ರೀಯ ಸಂಸ್ಥೆಗಳ ಸರಕುಗಳಿಗಿರಬಹುದೇನೋ. ಪ್ರಾಯಶಃ ಭಾರತೀಯರಿಗೆ ಉದ್ಯೋಗ ಸೃಷ್ಟಿಯಾದೀತೆಂಬ ಹಂಬಲ. ನಮಗಿಂತ ಕಡಿಮೆ ದರದಲ್ಲಿ, ಕಡಿಮೆ ಕೂಲಿಯಲ್ಲಿ ದುಡಿಯಲು ಮುಂದೆ ಬರುವ ದೇಶಗಳಿರುವಾಗ ಲಾಭವನ್ನೇ ನೋಡುವ ಕಾರ್ಪೊರೇಟುಗಳು ಇಲ್ಲಿಗೇ ಬಂದಾವು. ಅಗ್ಗ ದರದಲ್ಲಿ ಅನ್ಯದೇಶಗಳ ಸರಕುಗಳು ಲಭ್ಯವಾಗಿರುವಾಗ ಇಲ್ಲೇ ತಯಾರಾಗುವ ವಸ್ತುಗಳಿಗೆ ಬೇಡಿಕೆ ಎಲ್ಲಿಂದ ಬರಬೇಕು? ನಮಗಿಂತ ಬೇರೆಯವರು ಮುಂದಿರುವಾಗ ನಾವೇನು ಮಾಡಬೇಕು? ಇದಕ್ಕೆ ಸರಕಾರ, ಉದ್ಯಮಿಗಳು ಉತ್ತರ ಕೊಡಬೇಕು. ತುಂಬ ತಡವಾಯಿತು. ಮಾರುಕಟ್ಟೆ ಪ್ರವೇಶಕ್ಕೆ ಭಾರತದಲ್ಲೇ ತಯಾರಾಗುವ ಸರಕುಗಳು, ಅಲ್ಲವೆ?

* * *

ಸ್ವಚ್ಛ ಭಾರತ ಅಭಿಯಾನ, ಪ್ರಧಾನಮಂತ್ರಿ ಜನ ಧನ್ ಯೋಜನೆ ಭಾರಿ ಪ್ರಚಾರದಲ್ಲಿರುವಂಥವು. ಎರಡರ ಉದ್ದೇಶವೂ ಒಳ್ಳೆಯದೆ. ಆದರೆ ಕಾರ್ಯಸಾಧ್ಯವಲ್ಲದವು. ಸ್ವಚ್ಛತೆ ಅಭಿಯಾನ ಶುರುವಾದ್ದು ಗಾಂಧಿ ಜಯಂತಿ ದಿನ. ದೇಶದಲ್ಲಿ ಎಲ್ಲ ಕಡೆ ಪ್ರಧಾನಮಂತ್ರಿಯಿಂದ ಹಿಡಿದು ದೇಶದ ಎಲ್ಲ ರಾಜ್ಯಗಳಲ್ಲೂ ಮಂತ್ರಿಗಳು ಪೊರಕೆ ಹಿಡಿದು ಗುಡಿಸಿದ್ದೇ ಗುಡಿಸಿದ್ದು. ಮಾಧ್ಯಮಗಳಲ್ಲೆಲ್ಲ ಅದೇ ದೃಶ್ಯ. ಆಮೇಲೆ ಎಲ್ಲ ಯಥಾಪ್ರಕಾರ. ಬೆಂಗಳೂರಿನ ರಸ್ತೆ ಬದಿಗಳತ್ತ ಕಣ್ಣು ಹಾಯಿಸಿದರೆ ಕಾಣುವುದು ಕಸದ ರಾಶಿ ರಾಶಿ. ಉಳಿದ ನಗರಗಳಲ್ಲೂ ಪರಿಸ್ಥಿತಿ ಭಿನ್ನವೇನಲ್ಲ. ಅಲ್ಲಲ್ಲಿ ಕೆಲವು ತಂಡಗಳು ಪ್ರಯತ್ನ ನಡೆಸಿವೆ. ರಾಜಕಾರಣಿಗಳಿಗೆ ಹೇಗೆ ಇಚ್ಛಾಶಕ್ತಿ ಇಲ್ಲವೋ ಹಾಗೆ ಜನಕ್ಕೂ. ಎಲ್ಲ ಆರಂಭ ಶೂರತ್ವ. ಸರಕಾರದ ಪ್ರಯತ್ನದ ಜೊತೆಗೆ ಸಾರ್ವಜನಿಕರೂ ಕೈಜೋಡಿಸಬೇಕು ತಾನೆ. ಅದೊಂದು ಮಾತ್ರ ನಮ್ಮ ದೇಶದಲ್ಲಿ ಇದುವರೆಗೆ ಸಾಧ್ಯವಾಗಿಲ್ಲ. ಕಂಡಲ್ಲಿ ಕಸ ಎಸೆಯುವ ಮನೋಭಾವ ಹೋಗುವುದು ಸುಲಭವೇನಲ್ಲ. ಇನ್ನು ಸರಕಾರದ ಮಟ್ಟಿಗೆ ಹೇಳಬೇಕಾದರೆ ಸರಕಾರಿ ಆಸ್ಪತ್ರೆಗಳು ಮತ್ತು ಸರಕಾರಿ ಶಾಲೆಗಳ ಸ್ಥಿತಿ ನೋಡಿದರೆ ಸಾಕು.

ಪ್ರಧಾನ ಮಂತ್ರಿ ಧನ ಯೋಜನೆ ಹಿಂದೆ ಇಂದಿರಾ ಗಾಂಧಿ ಕಾಲದಲ್ಲಿ ನಡೆದ ಸಾಲದ ಮೇಳದ ನೆನಪಾಗುತ್ತದೆ. ಇದರಲ್ಲಿ ಉಂಡವನೇ ಜಾಣ. ಸಾಕಷ್ಟು ಹಣವನ್ನು ಬ್ಯಾಂಕುಗಳು ಕಳೆದುಕೊಳ್ಳಬೇಕಾಗುತ್ತದೆ. ರಿಸರ್ವ್ ಬ್ಯಾಂಕ್ ಅಂದಾಜಿನ ಪ್ರಕಾರ ಬ್ಯಾಂಕುಗಳು ೭೫,೦೦೦ ಕೋಟಿ ರೂ.ಗಳನ್ನು ಇದಕ್ಕಾಗಿ ವ್ಯಯ ಮಾಡಬೇಕಾದೀತು. ಈಗಾಗಲೇ ಕೋಟಿಗಟ್ಟಲೆ ಜನ ಖಾತೆ ತೆರೆದಿದ್ದಾರೆ ಈ ಯೋಜನೆ ಅಡಿಯಲ್ಲಿ. ಗ್ರಾಹಕ ಯಾವುದೇ ಠೇವಣಿ ಹಣ ನೀಡಬೇಕಿಲ್ಲ. ಜೀರೋ (೦) ಬ್ಯಾಲನ್ಸ್ ಖಾತೆಯೇ ಎಲ್ಲ. ಆರು ತಿಂಗಳಾದ ಮೇಲೆ ೫೦೦೦ ರೂ. ಓವರ್ ಡ್ರಾಫ್ಟ್ ಪಡೆಯಬಲ್ಲ ಗ್ರಾಹಕ. ಇದರಲ್ಲಿ

ಸೋರಿಹೋಗುವ ಹಣ ಎಷ್ಟೋ, ಬೇನಾಮಿ ವ್ಯವಹಾರ ಎಷ್ಟೋ, ಮಧ್ಯವರ್ತಿಗಳು ತಿಂದು ತೇಗುವುದೆಷ್ಟೋ! ರಿಸರ್ವ್ ಬ್ಯಾಂಕ್ ಅಂದಾಜಿನ ಪ್ರಕಾರ ನಮ್ಮ ದೇಶದ ನಗರವಾಸಿಗಳಲ್ಲಿ ಶೇ. ೫೮.೭ರಷ್ಟು ಕುಟುಂಬಗಳು ಬ್ಯಾಂಕ್ ಖಾತೆ ಹೊಂದಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಮಾಣ ಶೇ. ೫೪.೪. ಇದರಲ್ಲಿ ಶೇ. ೫೦ರಷ್ಟು ಖಾತೆಗಳಲ್ಲಿ ವ್ಯವಹಾರವೇ ಇರುವುದಿಲ್ಲ. ಇವೆಲ್ಲ ೨೦೧೧ರ ಅಂಕಿ-ಅಂಶಗಳು, ಮಾರ್ಚ್ ೨೦೧೪ರ ವರೆಗೆ ದೇಶದಲ್ಲಿರುವ ೬೪೦,೮೬೭ ಗ್ರಾಮಗಳಲ್ಲಿ ೪೬,೧೨೬ ಗ್ರಾಮಗಳಲ್ಲಿ ಮಾತ್ರ ಬ್ಯಾಂಕುಗಳು ವ್ಯವಹರಿಸುತ್ತವೆ. ಸುಮಾರು ೩೩೭,೬೭೮ ಗ್ರಾಮಗಳನ್ನು ಬ್ಯಾಂಕಿಂಗ್ ಕರೆಸ್ಪಾಂಡೆಂಟ್‌ಗಳು ನೋಡಿಕೊಳ್ಳುತ್ತಾರೆ. ಈ ವ್ಯವಸ್ಥೆ ಅಸಮರ್ಪಕವಾಗಿದೆ. ಹಾಗಿರುವಾಗ ಇನ್ನು ಐದಾರು ವರ್ಷದಲ್ಲಿ ದೇಶದ ಎಲ್ಲ ಕುಟುಂಬಗಳೂ ಬ್ಯಾಂಕ್ ಖಾತೆ ಹೊಂದುವುದು ಹೇಗೆ? ಖಾತೆದಾರ ಆಕಸ್ಮಿಕ ಅವಘಡದಲ್ಲಿ ಸತ್ತರೆ ಒಂದು ಲಕ್ಷ ರೂ. ಪರಿಹಾರ ಪಡೆಯಬಲ್ಲ. ಅದು ಯಾರ ಬಾಯಿಗೆ ಹೋಗುತ್ತೋ ಯಾರು ಬಲ್ಲರು.

* * *

ಜಯಲಲಿತಾಗೆ ಸರ್ವೋಚ್ಚ ನ್ಯಾಯಾಲಯ ಜಾಮೀನು ನೀಡಿದೆ. ತಮಿಳುನಾಡಿನಲ್ಲಿ ಖುಷಿಯೋ ಖುಷಿ. ಎಐಎಡಿಎಂಕೆ ಕಾರ್ಯಕರ್ತರು ಅಮ್ಮನವರ ಸ್ವಾಗತಕ್ಕೆ ಅಣಿಮಾಡಿಕೊಂಡಿದ್ದಾರೆ. ಒಂದಲ್ಲ, ಎರಡಲ್ಲ, ಹದಿನೆಂಟು ವರ್ಷ ಹಗ್ಗಜಗ್ಗಾಟ ನಡೆದ ಮೇಲೆ ಕೊನೆಗೂ ಈ ಮುಖ್ಯಮಂತ್ರಿಗೆ ಶಿಕ್ಷೆಯಾಯಿತು. ಪರಪ್ಪನ ಅಗ್ರಹಾರ ಈಗಾಗಲೆ ಇತಿಹಾಸ ಸೃಷ್ಟಿಸಿಬಿಟ್ಟಿದೆ. ಭ್ರಷ್ಟ ರಾಜಕಾರಣಿಗಳಿಗೆ ಕೊನೆಗೆ ಈ ಅಗ್ರಹಾರವೇ ಗತಿ ಏನೋ. ಜಯಲಲಿತ ಬಂಧನವಾದಾಗ ತಮಿಳುನಾಡು ಹತ್ತಿ ಉರಿಯಿತು. ಸಾಕಷ್ಟು ಗೋಳಾಟವನ್ನು ನೋಡಿದೆವು ಮಾಧ್ಯಮಗಳಲ್ಲಿ. ಈಗ ಬಿಡುಗಡೆ ಸಂಭ್ರಮವನ್ನು ನೋಡಿದ್ದಾಯಿತು. ಇವೆಲ್ಲ ಏನು ತೋರಿಸುತ್ತವೆ? ಭ್ರಷ್ಟಾಚಾರದ ವಿಚಾರದಲ್ಲಿ ನಮ್ಮ ಜನರಲ್ಲಿರುವ ಸಹನೆ. ದೇವರಿಗೆ ಲಂಚಕೊಡುವ ನಮಗೆ ಹುಲುಮಾನವರು ಸ್ವಲ್ಪ ಮೇಯ್ದರೇನಂತೆ ಎನ್ನುವ ಮನೋಭಾವ. ಪ್ರತಿ ರಾಜಕಾರಣಿ ಶಿಕ್ಷೆಗೆ ಗುರಿಯಾದಾಗಲೂ ಇಂಥ ಸನ್ನಿವೇಶಗಳನ್ನು ನೋಡಿದ್ದೇವೆ. ಅವರೆಲ್ಲ ಹಿಂಬಾಲಕರಿಗೆ ಹೀರೋಗಳಾಗಿ ಬಿಡುತ್ತಾರೆ. ಇನ್ನೊಂದು ವಿಚಾರವೆಂದರೆ ಜೈಲು ಸೇರಿದ ಕೂಡಲೇ ಭ್ರಷ್ಟರಿಗೆ ಇಲ್ಲದ ಕಾಯಿಲೆಗಳು ಮನೆಮಾಡಿಕೊಂಡುಬಿಡುತ್ತವೆ. ಅದುವರೆಗೆ ಲವಲವಿಕೆಯಿಂದ ಇರುವ ಇವರಿಗೆ ಬರಲಾರದ ರೋಗ ಬಡಿದುಕೊಳ್ಳುತ್ತದೆ. ಜಯಲಲಿತಾಗೆ ಜಾಮೀನು ದೊರಕಿರುವುದು ಕೂಡ ಅನಾರೋಗ್ಯದ ಕಾರಣದಿಂದಲೆ.

ಹಣ ಚೆಲ್ಲುವ ಇಂಥವರೇನೋ ಹೇಗಾದರೂ ಮಾಡಿ ಹೊರಗೆ ಬರುತ್ತಾರೆ. ಆದರೆ ಬಡಪಾಯಿಗಳು ಮಾತ್ರ ನ್ಯಾಯಾಲಯದ ಮುಖವನ್ನೂ ಕಾಣದೆ ವಿಚಾರಣಾ ಖೈದಿಗಳಾಗೇ ವರ್ಷಗಟ್ಟಲೆ ಕಂಬಿ ಎಣಿಸುತ್ತಿರುತ್ತಾರೆ. ನ್ಯಾಷನಲ್ ಕ್ರೈಮ್ ರಿಕಾರ್ಡ್ಸ್ ಬ್ಯೂರೋ ಎಂಬ ಸಂಸ್ಥೆ ೨೦೧೨ರಲ್ಲಿ ಈ ವಿಚಾರಣಾ ಖೈದಿಗಳ ಕುರಿತು ಅಂಕಿ-ಅಂಶಗಳನ್ನು ಪ್ರಕಟಿಸಿದೆ. ಅದನ್ನು ನೀವೇ ನೋಡಿ ಪರಿಸ್ಥಿತಿ ಅರಿತುಕೊಳ್ಳಿ. ಈ ವರದಿ ಪ್ರಕಾರ ೨೦೧೨ರ ವೇಳೆಗೆ ದೇಶದಲ್ಲಿನ ವಿವಿಧ ಕಾರಾಗಾರಗಳಲ್ಲಿ ೨,೫೪,೮೫೭ ಮಂದಿ ವಿಚಾರಣಾಧೀನ ಖೈದಿಗಳಿದ್ದಾರೆ. ಇದು ಒಟ್ಟು ಖೈದಿಗಳ ಸಂಖ್ಯೆಯಲ್ಲಿ ಶೇ. ೬೬.೨ ರಷ್ಟಾಗುತ್ತದೆ. ಇದರಲ್ಲಿ ಹೆಂಗಸರು ಮಕ್ಕಳು ಎಲ್ಲ ಸೇರಿದ್ದಾರೆ. ಈ ಅಂಕಿ-ಅಂಶಗಳ ಪ್ರಕಾರ ೨೦೨೮ ಮಂದಿ ವಿಚಾರಣೆಯೇ ಇಲ್ಲದೆ ೫ ವರ್ಷಗಳಿಂದ ಸೆರೆಮನೆ ವಾಸದಲ್ಲಿದ್ದಾರೆ!

* * *

ಮಗುವನ್ನು ಜಿಗುಟುತ್ತಿರುವುದು ಮತ್ತು ಅದೇ ಸಮಯದಲ್ಲಿ ತೊಟ್ಟಿಲು ತೂಗುತ್ತಿರುವುದು ನಮ್ಮ ದೇಶದ ರಾಜಕೀಯದಲ್ಲಿ ಹೊಸದೇನಲ್ಲ. 'ಒಳ್ಳೆಯ ದಿನಗಳು ಬರಲಿವೆ' ಎಂದು ಹೇಳುತ್ತಾ ಇಂದಿನ ದಿನಗಳನ್ನು ಘೋರವಾಗಿಸುವುದಿಲ್ಲವೇ ಹಾಗೆ. ತೊಟ್ಟಿಲು ತೂಗುವ ಕೆಲಸ ಬೇಡವೆನಿಸಿ ಅದರಿಂದ ತಪ್ಪಿಸಿಕೊಳ್ಳಲು ಮಗುವನ್ನು ಜಿಗುಟುತ್ತಿದ್ದರೆ ತಾಯಿ ಬಂದು ಮಗುವನ್ನು ಸುಧಾರಿಸುತ್ತಾಳೆ. ಆದರೆ ದೇಶದ ಜನರನ್ನು ಸುಧಾರಿಸಲು ಯಾವ ತಾಯಿಯನ್ನು ಕರೆತರೋಣ. ಸರ್ಕಾರದ ನೇತಾರ ಒಂದು ಹೇಳುತ್ತಾನೆ, ಪಕ್ಷದ ಕಾರ್ಯಕರ್ತ ಬೇರೊಂದು ಮಾಡುತ್ತಾನೆ. ನೇತಾರನನ್ನು ಟೀಕಿಸುವಂತಿಲ್ಲ, ಏಕೆಂದರೆ ಆತ ಸವಿಮಾತಿನ ಸರದಾರ; ಅದೇ ಸಮಯದಲ್ಲಿ ಪಕ್ಷದ ಕಾರ್ಯಕರ್ತನನ್ನು ರಕ್ಷಿಸುವುದೂ ಅದೇ ಸರದಾರನ ಜವಾಬ್ದಾರಿ. ಮೋದಿ ಮತ್ತು ಅಮಿತ್ ಷಾ ಒಂದರ್ಥದಲ್ಲಿ ದುಡಿಮೆಯನ್ನು ಹಂಚಿಕೊಂಡಿದ್ದಾರೆ: ತೂಗುವವನು ಲಾಲಿ ಹಾಡುವುದು, ಜಿಗುಟುವವನು ಉಗುರು ಬೆಳೆಸಿಕೊಂಡು ಬೇಕಾದಾಗೆಲ್ಲಾ ಚೆನ್ನಾಗಿ ಬಳಸುವುದು. ಮೋದಿ ಮತ್ತು ಷಾ ಒಂದು ಜೋಡಿ; ಮೋದಿ ಮತ್ತು ಸುಬ್ರಹ್ಮಣ್ಯಸ್ವಾಮಿ ಇನ್ನೊಂದು ಜೋಡಿ. ಮೋದಿಯವರು ಗಾಂಧಿ ಸಮಾಧಿಗೆ ಹೋಗಿ ದೇಶವನ್ನು ಸ್ವಚ್ಛಗೊಳಿಸಲು ಕರೆ ಕೊಡುತ್ತಾರೆ; ಅದೇ ಸಮಯದಲ್ಲಿ ಸ್ವಾಮಿ ಕೆಲವು ಪುಸ್ತಕಗಳನ್ನು ಸುಟ್ಟು ಹಾಕಬೇಕೆಂದು ಆರ್ಭಟಿಸುತ್ತಾನೆ. ಹಾರ್ವರ್ಡ್‌ನಲ್ಲಿ ಪಾಠ ಹೇಳುತ್ತಿದ್ದವನು ತಾನೆಂದು ಹೇಳಿಕೊಳ್ಳುವ ಈ ಮನುಷ್ಯ ಭಾರತದಲ್ಲಿ ಒಂದು ಅಲೆಕ್ಸಾಂಡ್ರಿಯಾ ಕೃತ್ಯಕ್ಕೆ ನಾಯಕನಾಗಬಯಸುತ್ತಾನೆ. ಆತನ ಪ್ರಕಾರ ಬಿಪನ್ ಚಂದ್ರ, ರೋಮಿಲಾ ಥಾಪರ್, ಇರ್ಫಾನ್ ಹಬೀಬ್, ಮುಂತಾದ ಚರಿತ್ರಕಾರರು ನೆಹರು ನೀತಿಗಳನ್ನು ಖಂಡಿಸದೆ ಅವಕ್ಕೆ ಬೆಂಬಲ ನೀಡಿ ಘಾತುಕರೆನಿಸಿದ್ದಾರೆ, ಅವರು ಆಧುನಿಕ ಇತಿಹಾಸಕ್ಕೆ ಅಪಚಾರ ಬಗೆದಿದ್ದಾರೆ. ನಿಜಕ್ಕೂ ಹಾಗೆಯೇ ಆಗಿದೆಯೆಂದು ಭಾವಿಸಿಕೊಳ್ಳೋಣ, ಆಗ ಮಾಡಬೇಕಾದ್ದೇನು? ಆ ಚರಿತ್ರೆಕಾರರ ನಿಲುವನ್ನು ಪ್ರಶ್ನಿಸುವಂತಹ ಗ್ರಂಥಗಳನ್ನು ರಚಿಸಿ ಅವರನ್ನು ವಾಗ್ವಾದಕ್ಕೆ ಎಳೆಯಬೇಕು, ಅವರು ನೀಡಿರುವ ಮಾಹಿತಿಯು ಪ್ರಶ್ನಾರ್ಹವಾದರೆ ಅದನ್ನು ಬಹಿರಂಗವಾಗಿ ಪ್ರಶ್ನಿಸಬೇಕು. ಸ್ವಾಮಿ ಮಹಾಶಯ ಅಮೆರಿಕಾದ ಪರಮ ಭಕ್ತ. ಭಕ್ತರಿಗೆ ಭಗವಂತ ಸಂಪತ್ತು ಕರುಣಿಸುತ್ತಾನೆಂಬ ನಂಬಿಕೆ ಇದೆ. ಪ್ರಜಾಪ್ರಭುತ್ವದ ಮೂಲಭೂತ ನಿಯಮಗಳಿಗೆ ಕೊಳ್ಳಿಯಿಟ್ಟು ಬೌದ್ಧಿಕ ಸರ್ವಾಧಿಕಾರವನ್ನು ಸ್ಥಾಪಿಸಿಕೊಳ್ಳುವ ಇರಾದೆ ಸ್ವಾಮಿಯದು. ಸ್ವಾಮಿಯ ಸ್ವಾಮಿಯದೂ ಇದಕ್ಕೆ ಸಮ್ಮತಿ ಇರಬೇಕು: ಸ್ವಾಮಿ ಇತ್ತೀಚೆಗೆ "ದಿ ಹಿಂದು" ಪತ್ರಿಕೆಯಲ್ಲಿ ದೀರ್ಘ ಲೇಖನ ಬರೆದು ಕಡೆಗೆ ಕೊಟ್ಟಿರುವ ಅಮೋಘ ಸಲಹೆಯೇನೆಂದರೆ "ಈ ನೆಹರು ನೀತಿಯ ಬಗ್ಗೆ ಒಲವಿರುವ ಚರಿತ್ರಕಾರರ ಪುಸ್ತಕಗಳನ್ನು ಸಾರ್ವಜನಿಕವಾಗಿ ಸುಡಬೇಕು" ಎಂದು. ಸುಡುವ "ಪವಿತ್ರ" ಕೆಲಸವನ್ನು ಯಾರು ಮಾಡಬೇಕೆಂದು ಸ್ವಾಮಿ ಹೇಳಿಲ್ಲ, ಆದರೆ ಅಂತಹ ನೀಚ ಕೆಲಸವನ್ನು ಮಾಡುವಂತಹ ದಂಡನ್ನು ಬಹುಶಃ ಅವರೇ ಬೆಳೆಸಿಟ್ಟುಕೊಂಡಿದ್ದಾರೆ. ಬೌದ್ಧಿಕ ಕ್ಷೇತ್ರವನ್ನು ಬೂದಿ ಮಾಡಲು ಸ್ವಾಮಿ ತುದಿಗಾಲ ಮೇಲೆ ನಿಂತಿದ್ದಾರೆ. ಹಲವು ಶತಮಾನಗಳ ಹಿಂದೆ ಈಜಿಪ್ಟಿನ ಬೌದ್ಧಿಕ ಕೇಂದ್ರವಾಗಿದ್ದ ಅಲೆಕ್ಸಾಂಡ್ರಿಯಾದಲ್ಲಿ ಒಂದು ದೊಡ್ಡ ಉತ್ಕೃಷ್ಟ ಪುಸ್ತಕ ಭಂಡಾರಕ್ಕೆ ಬೆಂಕಿಯಿಟ್ಟು ಸಂಪೂರ್ಣವಾಗಿ ಸುಟ್ಟುಹಾಕಲಾಗಿತ್ತು. ಸುಬ್ರಹ್ಮಣ್ಯಸ್ವಾಮಿ ಅದನ್ನು ಭಾರತದಲ್ಲಿ ಮಾಡಲು ಉತ್ಸುಕರಾಗಿದ್ದಾರೆ. ಈ ಜಿಗುಟುವ ಮನುಷ್ಯನನ್ನು ತೊಟ್ಟಿಲು ತೂಗುವ ಪ್ರಧಾನಿ ಮೋದಿಯವರು ನೋಡಿಯೂ ನೋಡದಂತೆ ಕೂತಿದ್ದರೆ ಅರ್ಥವೇನು? "ನಾನೇನೂ ಹೇಳುವುದಿಲ್ಲ, ನಿಮ್ಮ ಕೆಲಸ ನೀವು ಮಾಡಿ" ಎಂದು ಸ್ವಾಮಿಯಂಥವರಿಗೆ ಮೌನ ಸಮ್ಮತಿ ಸೂಚಿಸಿದ್ದಾರೆಂದೆ?

* * *

ಮೋದಿಯವರ ಬಣದ ಬೌದ್ಧಿಕ ಚಟುವಟಿಕೆ ಬಹುಮುಖವಾದ್ದು. ಗುಜರಾತಿನ ಒಬ್ಬ ಮೇಧಾವಿಯು ಸಿದ್ಧಗೊಳಿಸಿರುವ ಶಾಲಾ ಪಠ್ಯಪುಸ್ತಕಗಳ ಬಗ್ಗೆ ಹಿಂದೆಯೇ ಚರ್ಚಿಸಿದ್ದೆವು. ಈಗ ಇನ್ನೊಬ್ಬ ಮೇಧಾವಿ ಅವತರಿಸಿದ್ದಾನೆ. ಅವನ ಹೆಸರು ಹೇಳುವ ಬದಲು "ಸ್ಲಂ-ಶೋಧಕ ಅನಾಮಧೇಯ" ಎಂದು ಆತನನ್ನು ಗುರುತಿಸೋಣ. ಆತನ ಅದ್ಭುತ ಸಂಶೋಧನೆಯು ಹಲವು ಶತಮಾನಗಳಿಂದ ಬೆಳೆಯುತ್ತಾ ಬಂದಿರುವ ಮಾನವಶಾಸ್ತ್ರಕ್ಕೆ ಸಂಬಂಧಿಸಿದ್ದು. 'ಆಂತ್ರೋಪೊ' ಎಂದರೆ ಮಾನವ; ಅವನ ಉಗಮ ಮತ್ತು ವಿಕಾಸವನ್ನು ಅಭ್ಯಸಿಸುವ ಶಿಸ್ತನ್ನು 'ಆಂತ್ರೊಪಾಲಜಿ' ಎನ್ನುತ್ತಾರೆ. ಲೂಯಿ ಮೋರ್ಗನ್, ಫ್ರೇಸರ್, ಬ್ರಿಫೋ, ಭಟ್ಟಾಚಾರ್ಯ, ಇಂತಹ ನೂರಾರು ಮಂದಿ ಈ ಶಿಸ್ತಿನಲ್ಲಿ ಅಗ್ರರೆನಿಸಿದ್ದಾರೆ. ಪ್ರಸ್ತುತ ಮೇಧಾವಿಯು ಭಾರತದ ಕಾಡು-ಮೇಡುಗಳಲ್ಲಿ ಹಲವು ಶತಮಾನಗಳಿಂದ ವಾಸಿಸುತ್ತಾ ಬಂದಿರುವ ಬುಡಕಟ್ಟು ಜನಾಂಗಗಳ ಚರಿತ್ರೆಯನ್ನು ಕಲ್ಪಿಸಿಕೊಟ್ಟಿದ್ದಾನೆ. ತೊದವರು, ನಾಗಾಗಳು, ಗೊಂಡಿಗಳು, ಸಂತಾಲರು, ಭಿಲ್ಲರು, ಹೀಗೆ ನಮ್ಮಲ್ಲಿ ನೂರಾರು ಬುಡಕಟ್ಟುಗಳ ಜನರಿದ್ದಾರೆ. ಅವರನ್ನು ಕುರಿತ ನಮ್ಮ ಅನಾಮಧೇಯ ವಿದ್ವಾಂಸನ ಸಂಶೋಧನೆ ಇದು: ನಮ್ಮ ದೇಶದಲ್ಲಿ ಮೊದಲಿನಿಂದಲೂ ನಾಗರಿಕ ಸಮಾಜವು ಉಚ್ಚಮಟ್ಟದಲ್ಲೇ ಇದ್ದಿತು. ಬುಡಕಟ್ಟು ಜನ, ಕಾಡಿನ ಜನ, ಬೆಟ್ಟದ ಜನ, ಹೀಗೆ ಯಾರೂ ಇರಲಿಲ್ಲ. ವೇದಕಾಲದಿಂದಲೂ

ನಮ್ಮಲ್ಲಿ ಉಚ್ಚಮಟ್ಟದ ನಾಗರಿಕತೆ ನೆಲೆಸಿದ್ದಿತು. ಈಗ ಬುಡಕಟ್ಟಿನ ಜನ, ಕಾಡುಜನ, ಬೆಟ್ಟಗುಡ್ಡಗಳ ನಿವಾಸಿಗಳು, ಎಂದು ನಾವು ಯಾರನ್ನು ಕರೆಯುತ್ತೇವೋ ಅವರೆಲ್ಲಾ ನಮ್ಮ ನಾಗರಿಕ ಸಮಾಜದ ಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ ಇದ್ದವರೇ. ಕ್ರಿಸ್ತಶಕ ೯–೧೧ನೆಯ ಶತಮಾನಗಳಲ್ಲಿ ಪರಕೀಯ ಮುಸಲ್ಮಾನರು ನಮ್ಮ ದೇಶದ ಮೇಲೆ ಧಾಳಿ ನಡೆಸಿ ಬಲವಂತವಾಗಿ ಮತಾಂತರ ಮಾಡುವುದನ್ನು ಆರಂಭಿಸಿದಾಗ ಅಂತಹ ಪಾಡಿನಿಂದ ಪಾರಾಗಲು ಸಹಸ್ರ ಸಂಖ್ಯೆಯಲ್ಲಿ ನಾಗರಿಕರು ಬೆಟ್ಟಗುಡ್ಡಗಳಿಗೆ ಓಡಿಹೋಗಿ ಅಲ್ಲಿ ನೆಲೆಸಿದರು. ಅವರು ಹಿಂದು ಧರ್ಮವನ್ನು ಈ ಮೂಲಕ ಉಳಿಸಿದರು. ಆದ್ದರಿಂದ "ಗುಡ್ಡಗಾಡು ಜನ" ಎಂಬುವವರು ಯಾರೂ ನಮ್ಮ ದೇಶದಲ್ಲಿಲ್ಲ!

ಈಗೇಕೆ ಈ "ಸ್ಲಂ–ಶೋಧನೆ" ಬೇಕಾಯಿತು? ಗುಡ್ಡಗಾಡಿನ ಜನರಿಗೆ ನೀಡಲಾಗುವ ವಿಶೇಷ ಸವಲತ್ತುಗಳನ್ನು ರದ್ದುಮಾಡಲು ಇರಬೇಕು. "ಭಾರತೀಯ ಸಂಸ್ಕೃತಿ"ಯ ಪ್ರಸಾರಕ್ಕೆ ಈ ಜನರನ್ನು ಗುರಿಯಾಗಿಸಬೇಕೆನ್ನುವ ಉದ್ದೇಶವೂ ಇದೆ. ಭಾರತೀಯ ಇತಿಹಾಸ ಸಂಶೋಧನಾ ಸಂಸ್ಥೆಯು ಇಂತಹ ಕಳಂಕಪೂರಿತ, ಅಸಂಬದ್ಧ, ಬೇಜವಾಬ್ದಾರಿ ಹೇಳಿಕೆಗಳನ್ನು ಖಂಡಿಸುವ ಮತ್ತು ನಿಜವಾದ ಇತಿಹಾಸವನ್ನು ಪ್ರತಿಪಾದಿಸುವ ಕೆಲಸ ಮಾಡಬೇಕಾಗಿತ್ತು, ಆದರೆ ಮಾಡುವ ಗೋಜಿಗೆ ಹೋಗಿಲ್ಲ. ಆದರೆ ಇಂತಹ ವ್ಯಾಖ್ಯಾನಗಳ ರಾಜಕೀಯ ಉದ್ದೇಶವೇನೆಂಬುದನ್ನು ನಮ್ಮ ಇತಿಹಾಸ ಪರಿಣತರು ತಿಳಿಸಿಕೊಡಬೇಕು. ಏಕವ್ಯಕ್ತಿ ಕೇಂದ್ರಿತ ಪ್ರಭುತ್ವಕ್ಕೆ "ಏಕಮಾದರಿಯ ಸಮಾಜ" ಅಗತ್ಯವೆನಿಸಿದೆ. ನಮ್ಮದು ಬಹುಮಾದರಿಗಳ ಸಮಾಜ. ಅದನ್ನು "ಏಕ" ಮಾಡಲು ಈಗ ಬೌದ್ಧಿಕ ಬುಲ್‌ಡೋಜರ್ ಬಂದಿದೆ! ಬೌದ್ಧಿಕವಾಗಿ ಕುಸ್ತಿ ಅಖಾಡದ ನಿರ್ಮಾಣ ಮಾಡಿದ ನಂತರ ದೈಹಿಕ ಜಟಾಪಟಿಯನ್ನು ಸಂಘಟಿಸಬಹುದು!

* * *

ಜಯಲಲಿತಾ ಪರಪ್ಪನ ಅಗ್ರಹಾರದಿಂದ ಪೋಯೆಸ್ ಗಾರ್ಡನ್‌ಗೆ ಮರಳಿದ್ದಾರೆ. ಇನ್ನೆರಡು ವರ್ಷಗಳಾದರೂ ಮೊಕದ್ದಮೆಯನ್ನು ಮುಂದುವರಿಸುತ್ತಾ ವೈಭೋಗವನ್ನು ಅನುಭವಿಸಲು ಅಡ್ಡಿಯಿಲ್ಲ. ಮೊಕದ್ದಮೆಯನ್ನು ಇನ್ನೂ ಹೆಚ್ಚು ಕಾಲ ನಡೆಯುವಂತೆ ತಂತ್ರಗಳನ್ನು ರೂಪಿಸಿದರೆ ಇನ್ನೊಂದು ದಶಕ ಕಳೆಯುವವರೆಗೆ 'ಗಾರ್ಡನ್ ಬಂಗಲೆ'ಯನ್ನು ಬಿಡಬೇಕಾಗುವುದಿಲ್ಲ. ನಮ್ಮ ರಾಜ್ಯದ ಹಿರಿಯ ಮುತ್ಸದ್ದಿಗಳು ಕೆಲವರು ಅದೇ ಪರಪ್ಪನ ಅಗ್ರಹಾರಕ್ಕೆ ಹೋಗಿ, ಕಾನೂನಿನ ನೆರವಿನಿಂದಾಗಿ ಅಲ್ಲಿಂದ ತಪ್ಪಿಸಿಕೊಂಡು ಬಂದಿದ್ದಾರೆ. ಅವರ ಪ್ರತಿಷ್ಠೆಗೇನೂ ಕುಂದುಂಟಾಗಿಲ್ಲ. ಇನ್ನೂ ಹೋಗಿ ಬರಬೇಕಾದವರ ಸಂಖ್ಯೆ ದೊಡ್ಡದಿದೆ. ಇವರ ಮೇಲಿರುವ ಆಪಾದನೆಗಳ ವಿಚಾರಣೆ ನಡೆಯಲು ಇನ್ನೆಷ್ಟು ಕಾಲ ತಗಲುತ್ತದೆ? ಹದಿನೈದು–ಇಪ್ಪತ್ತು ವರ್ಷಗಳೆ? ಕಟ್ಟಾ ಸುಬ್ರಹ್ಮಣ್ಯ ನಾಯಿಡು, ಬಳ್ಳಾರಿ ರೆಡ್ಡಿ ಬಳಗ, ಯಡಿಯೂರಪ್ಪ, ಮುಂತಾದವರ ಮೇಲಿನ ಕಾನೂನುಕ್ರಮವು ಮೊಕದ್ದಮೆಗಳ ಮುಂದೂಡಿಕೆಯಿಂದ ಸ್ಥಗಿತಗೊಂಡಿದೆ. ಸರ್ವೋಚ್ಚ ನ್ಯಾಯಾಲಯಕ್ಕೆ ಇದು ತಿಳಿದಿಲ್ಲವೆ? ಅಕಸ್ಮಾತ್ ತಿಳಿದಿಲ್ಲದಿದ್ದರೆ ರಾಜ್ಯ ಸರ್ಕಾರವು ತಿಳಿಸ ಬೇಕಲ್ಲವೆ? ಮೊಕದ್ದಮೆಗಳೂ ಇನ್ನೂ ನಡೆಯದೆ ಉಳಿದಿರುವ "ಖ್ಯಾತನಾಮ"ರ ಭ್ರಷ್ಟಧರ್ಮಕ್ಕೆ ಸೇರಿದ, ಆದರೆ ಇನ್ನೂ ಪರಪ್ಪನ ಅಗ್ರಹಾರಕ್ಕೆ ಹೋಗಿಲ್ಲದ ಹಾಲಿ ಸಚಿವರು, ಸರ್ಕಾರಿ ಅಧಿಕಾರಿಗಳು, ಭೂಗಳ್ಳರು, ಮುಂತಾದವರು ಬಹಳಷ್ಟಿದ್ದಾರೆ. ಅವರನ್ನೆಲ್ಲಾ ನಮ್ಮ ನ್ಯಾಯಾಲಯಗಳು ಕಣ್ಣುಬಿಟ್ಟು ನೋಡಲಿ. ಜಯಲಲಿತಾ ಪ್ರಸಂಗವು ಆಗ ಸ್ವಲ್ಪಮಟ್ಟಿಗೆ ಸಾರ್ಥಕವಾಗುತ್ತದೆ.

* * *

ನಮ್ಮ ರಾಜ್ಯದ ಸರ್ವೋದಯ ಕಾರ್ಯಕರ್ತರಾದ ಶ್ರೀ. ಅಶ್ವತ್ಥನಾರಾಯಣ ಅವರು ಕೇರಳದ ಸರ್ಕಾರವು ಜಾರಿಗೊಳಿಸಲು ಮುಂದಾಗಿರುವ ಮದ್ಯಪಾನ ನಿಷೇಧದ ಕ್ರಮವನ್ನು ಸ್ವಾಗತಿಸಿ ನಮ್ಮ ರಾಜ್ಯದಲ್ಲೂ ಅಂತಹ ನಿಷೇಧವನ್ನು ಜಾರಿಗೊಳಿಸಬೇಕೆಂದು ಆಗ್ರಹಿಸಿದ್ದಾರೆ. ಕೇರಳ ಸರ್ಕಾರವು ವಾರ್ಷಿಕ ಏಳುಕೋಟಿ ರೂಪಾಯಿಗಳ ಆದಾಯವನ್ನು ಕಳೆದುಕೊಳ್ಳಲು ಸಿದ್ಧವಾಗಿದೆಯೆಂದು ಹೇಳಲಾಗಿದೆ. ವಿವಿಧ ರೀತಿಯ ಮದ್ಯ ನಮ್ಮಲ್ಲಿದೆ. ದೊಡ್ಡ ಕ್ಲಬ್‌ಗಳಲ್ಲಿ, ಬಾರ್‌ಗಳಲ್ಲಿ, ಕುಡಿಯುವ ಶ್ರೀಮಂತರು ತಮ್ಮ ಪಾನೀಯಗಳನ್ನು ಸ್ವಗೃಹಗಳಲ್ಲೂ ಶೇಖರಿಸಿಕೊಂಡಿರುತ್ತಾರೆ. ಹೆಂಡದ ಗಡಂಗುಗಳಲ್ಲಿ ಕುಡಿಯುವವರು ಅಂದಂದಿನ ಕುಡಿತವನ್ನು ಅಲ್ಲಲ್ಲೇ ಮುಗಿಸಿಕೊಳ್ಳುವ ಅನಿವಾರ್ಯತೆ ಇದೆ. ಕುಡಿಯುವ ಪ್ರಕಾರಗಳನ್ನು ಅಗಾಧವಾಗಿ ಬೆಳೆಸಿ ಈಗ ಅದನ್ನು ಕೂಡಲೆ ತೊಡೆದುಹಾಕಲು ಕಾನೂನುಕ್ರಮ ಕೈಗೊಂಡರೆ ಫಲಕಾರಿ ಪರಿಣಾಮವು ದಕ್ಕುವುದೇ ಎಂಬ ಸಂಶಯ ಸಹಜವಾದ್ದು. ಕುಡಿತದಿಂದ ಉಂಟಾಗುತ್ತಿರುವ ಹಾನಿಯನ್ನು ನಗಣ್ಯವೆಂದು ತಳ್ಳಿಹಾಕಲು ಸಹ ಆಗುವುದಿಲ್ಲ. ಗಾಂಧೀಜಿ ಈ ಪಿಡುಗಿನ ನಿವಾರಣೆಗಾಗಿ ಪಿಕೆಟಿಂಗ್‌ಗೆ ಆದ್ಯತೆ ನೀಡಿದ್ದರು. ಗಡಂಗು–ಪಬ್ಬು–ಕ್ಲಬ್ಬು–ಮನೆಯೊಳಗಿನ ಮದ್ಯ ಶೇಖರಣೆ, ಇಂತಹ ವೈವಿಧ್ಯ ಅವರ ಕಾಲದಲ್ಲಿರಲಿಲ್ಲ. ಅವರು ಮದ್ಯಪಾನ ಮಾಡುವವರ ಮನ ಒಲಿಸಲು ಆದ್ಯತೆ ನೀಡಿದರು, ಅಂಗಡಿಗಳನ್ನು ಮುಚ್ಚಬೇಕೆನ್ನುವ ಕಾನೂನು ಜಾರಿಗೊಳಿಸಿ ಎಂದು ಬ್ರಿಟಿಷ್ ಸರ್ಕಾರಕ್ಕೆ ಹೇಳಲಿಲ್ಲ. ಕ್ಲಬ್ಬುಗಳಲ್ಲಿ ರಿಯಾಯಿತಿ ದರದಲ್ಲಿ ಮದ್ಯದ ಮಾರಾಟವಾಗುತ್ತದೆ ಮತ್ತು ಗಡಂಗು ಹಾಗೂ ಬಾರುಗಳಲ್ಲಿ ಅಂತಹ ಸೌಲಭ್ಯವಿಲ್ಲ. ಕ್ಲಬ್ಬುಗಳಲ್ಲಿ ಮದ್ಯದ ಸರಬರಾಜು ಕೂಡದು ಎಂಬ ಕಾನೂನು ಜಾರಿಗೊಳಿಸುವ ಜೊತೆಗೆ ಗಡಂಗು ಮತ್ತು ಬಾರುಗಳನ್ನು ನಿಯಂತ್ರಿಸುವ ವಿಧಾನವನ್ನು ಸರ್ಕಾರ, ಗಾಂಧಿವಾದಿಗಳು, ಸಾಮಾಜಿಕ ಕಾರ್ಯಕರ್ತರು ಮತ್ತು ರಾಜಕೀಯ ಪಕ್ಷಗಳು ಒಟ್ಟಾಗಿ ಕಲೆತು ಚರ್ಚಿಸಬೇಕು. ಮದ್ಯದ ತಯಾರಿಕೆಯ ಪ್ರಮಾಣ ನಮ್ಮ ರಾಜ್ಯದಲ್ಲಿ ಹಾಗೂ ದೇಶದಲ್ಲಿ ಅಪಾರವಾಗಿ ಹೆಚ್ಚಿದೆ. ಅದನ್ನು ರದ್ದುಮಾಡುವುದಿರಲಿ, ಪ್ರಮಾಣವನ್ನು ತಗ್ಗಿಸುವ ಯೋಚನೆಯೂ ಬಂದಿಲ್ಲ. ಹೀಗಿರುವಾಗ ಕೇರಳ ಸರ್ಕಾರದ ನಿರ್ಧಾರವು ಹೇಗೆ ಕಾರ್ಯಗತವಾಗುತ್ತದೆ ಎಂಬುದನ್ನು ಕಾದುನೋಡಬೇಕು. ಸರ್ವೋದಯ ಕಾರ್ಯಕರ್ತರು "ಅಖಿಲ ಭಾರತ ಮದ್ಯಪಾನ ನಿಷೇಧ ಸಮಿತಿ" ಎಂಬ ಸಂಸ್ಥೆಯಲ್ಲಿ ಪಾಲ್ಗೊಳ್ಳುವುದುಂಟು. ಆ ಸಮಿತಿಯ ಸಭೆಯು ಇದೇ ಸೆಪ್ಟೆಂಬರ್‌ನಲ್ಲಿ ವಾರಣಾಸಿಯಲ್ಲಿ ಜರುಗಿದ್ದಿತು. ಆ ಸಮಿತಿಯು ಮದ್ಯಪಾನ ವಿರೋಧಿ ಚಳುವಳಿಯನ್ನು ಕೈಗೆತ್ತಿಕೊಂಡು ಮತ್ತೆ ಪಿಕೆಟಿಂಗ್‌ನಂತಹ ಚಳುವಳಿಗಳನ್ನು ಹಮ್ಮಿಕೊಳ್ಳಬಹುದು, ಸರ್ಕಾರದೊಡನೆ ಮಾತುಕತೆ ನಡೆಸಬಹುದು. ಕ್ಲಬ್ಬುಗಳಲ್ಲಿ ಮತ್ತು ದೊಡ್ಡ ಹೋಟೇಲ್ ಮುಂತಾದ ಕೇಂದ್ರಗಳಲ್ಲಿ ಮದ್ಯಪಾನವನ್ನು ನಿರೋಧಿಸದೆ ಕೇವಲ ಗಡಂಗು ಮತ್ತು ಬಾರುಗಳನ್ನು ದೃಷ್ಟಿಯಲ್ಲಿ ಇರಿಸಿಕೊಳ್ಳುವುದು ಸರಿಯಾದ ಹಾದಿಯಲ್ಲ ಎಂಬುದಂತೂ ನಿಶ್ಚಿತ. ●



## ಪ್ರೊ|| ಕ. ವೆಂ. ರಾಜಗೋಪಾಲ ಕಣ್ಮರೆ

ಗದ್ಯ, ಕಾವ್ಯ ರಚನೆ, ರಂಗಭೂಮಿ ಮತ್ತು ಇತರ ಹಲವು ಪ್ರಗತಿಪರ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮ ಕಡೆಯ ದಿನಗಳವರೆಗೂ ಸಕ್ರಿಯರಾಗಿದ್ದ ಕ. ವೆಂ. ರಾಜಗೋಪಾಲ ೨೧–೧೦–೨೦೧೪ರಂದು ತಮ್ಮ ೯೧ನೇ ವಯಸ್ಸಿನಲ್ಲಿ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಕ. ವೆಂ. ಎಂದೇ ಚಿರಪರಿಚಿತರಾಗಿದ್ದ ಬಹುಮುಖಿ ವ್ಯಕ್ತಿತ್ವದ ಅವರು ಕೆಲ ಕಾಲ ಬೆಂಗಳೂರು ವಿಶ್ವವಿದ್ಯಾಲಯದ ನೃತ್ಯ, ನಾಟಕ, ಸಂಗೀತ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಹಾಗೂ ಎಂ.ಇ.ಎಸ್. ಸಂಜೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಜನಪ್ರಿಯರಾಗಿದ್ದರು. ಅನೇಕ ಕವನ, ಕಥೆ, ನಾಟಕ, ರೇಡಿಯೋ ನಾಟಕ ಹಾಗೂ ವಿಮರ್ಶೆಗಳು ಇವರ ಲೇಖನಿಯಿಂದ ಮೂಡಿಬಂದಿವೆ. ಇಸ್ಕಸ್, ಶಾಂತಿ ಚಳುವಳಿ ಮತ್ತು ಭಾರತ – ಜಿ.ಡಿ.ಆರ್. ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿದ್ದರು. ದಿ|| ಕ. ವೆಂ. ರಾಜಗೋಪಾಲ ಅವರಿಗೆ 'ನವಕರ್ನಾಟಕ' ಮತ್ತು 'ಹೊಸತು' ಬಳಗದವರ ನಮನಗಳು.




ನಮ್ಮ ಸಮಾಜದ ಏಳ್ಗೆಗಾಗಿ ಯಾವುದೇ ಸ್ವಹಿತಾಸಕ್ತಿ ಇಲ್ಲದೆ, ತ್ಯಾಗ ಮನೋಭಾವ ಮತ್ತು ಬದ್ಧತೆಯಿಂದ ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಶ್ರಮಿಸುತ್ತಾ ಬಂದಿರುವ ಮತ್ತು ಆ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಮಹನೀಯರ ಬಗ್ಗೆ ಇಂದಿನ ಯುವಜನತೆಗೆ ತಿಳಿಯಪಡಿಸುವುದು ಅತ್ಯವಶ್ಯ ವಾಗಿದೆ ಎಂಬ ಭಾವನೆ ನನ್ನದು. ಹೀಗಾಗಿ ಪ್ರತಿ ತಿಂಗಳು 'ಹೊಸತು' ಪತ್ರಿಕೆಯಲ್ಲಿ ನಮ್ಮ ಸಮಾಜಕ್ಕಾಗಿ ಹೋರಾಡುತ್ತಿರುವ ಮಹನೀಯರ ಪರಿಚಯ, ಅವರ ಹೋರಾಟದ ಜೀವನದಲ್ಲಿ ಹೇಗೆ 'ಸಾಮಾಜಿಕ ಹೊಣೆಗಾರಿಕೆ'ಯನ್ನು ಹೊಂದಿದ್ದಾರೆ, ಆ ಮೂಲಕ ಸಮಾಜದ ಏಳ್ಗೆಗೆ ಹೇಗೆ ಸಹಕಾರಿಯಾಗುತ್ತಿದೆ ಎಂಬುದರ ಬಗ್ಗೆ ೧೦೦೦ದಿಂದ ೧೫೦೦ ಪದಗಳಿಗೆ ಮೀರದಂತಹ ಲೇಖನ ಮತ್ತು ಅವರ ಒಂದೆರಡು ಫೋಟೋ ಇರಬೇಕೆಂದು ನನ್ನ ಅಭಿಪ್ರಾಯವಿದೆ.

ಈ ವಿಷಯದಲ್ಲಿ ಆಸಕ್ತಿ ಯಾಕೆಂದರೆ ಇಂದಿನ ಸ್ಪರ್ಧಾ ಪ್ರಪಂಚದಲ್ಲಿ ಸ್ವಹಿತಾಸಕ್ತಿಗಾಗಿ ಎಲ್ಲರೂ ಮುಳುಗಿರುವಾಗ ಅಥವಾ ಮುಳುಗುವಂತೆ ಬಿಂಬಿಸುತ್ತಿರುವಾಗ ಸಮಾಜದ ಬಗ್ಗೆ 'ಹೊಣೆಗಾರಿಕೆ'ಯಿಂದ ವರ್ತಿಸುವುದು ಮತ್ತು ಅದಕ್ಕಾಗಿ ತಮ್ಮ ಜೀವನವನ್ನೇ ಅರ್ಪಣೆ ಮಾಡಿ ದುಡಿಯುತ್ತಿರುವವರು ನಮಗೆ ಆದರ್ಶವಾಗಬೇಕು. ಹೀಗಾಗಿ ನಮ್ಮ ಸಮಾಜದ ಏಳ್ಗೆಗಾಗಿ ತಮ್ಮ ಕುಟುಂಬವನ್ನೂ ಮೀರಿ ಸಮಾಜವನ್ನೇ ಒಂದು ಕುಟುಂಬವೆಂಬ ಕಳಕಳಿಯಿಂದ ಎಲ್ಲ ವಿಭಾಗಗಳಲ್ಲೂ ಶ್ರಮಿಸುತ್ತಿರುವ ಮಹನೀಯರು ನಮ್ಮ ಮಧ್ಯೆ ಇದ್ದಾರೆ. ಅಂಥವರ ಬಗ್ಗೆ ಇಂದಿನ ಸಂದರ್ಭದಲ್ಲಿ ತಿಳಿದುಕೊಳ್ಳುವುದು ಮತ್ತು ಅವರ ಮಾರ್ಗದರ್ಶನದಲ್ಲಿ ನಡೆಯುವುದು ಇಂದಿನ ಯುವಪೀಳಿಗೆಯ ಜವಾಬ್ದಾರಿಯಾಗಿದೆ.

* * *

ಸ್ವಾತಂತ್ರ್ಯ ಚಳುವಳಿಯ ಜೊತೆ ಜೊತೆಯಲ್ಲಿಯೇ ಆರಂಭವಾದ 'ಉಳುವವನೇ ಹೊಲದೊಡೆಯ' ಎಂಬ ಬೇಡಿಕೆಯು ಸ್ವಾತಂತ್ರ್ಯಾನಂತರದಲ್ಲಿ ಈಡೇರಿಸುವಂತಹ ಪರಿಸ್ಥಿತಿ ಉಂಟಾಗಿತ್ತು. ೧೯೫೦ರ ದಶಕದಲ್ಲಿ ದೇಶದ ಅನ್ನದಾತರಿಗೆ ಭೂಮಿಯನ್ನು ನೀಡುವುದು ಕೂಡ ಸರ್ಕಾರಗಳ ಜವಾಬ್ದಾರಿಯಾಗಿತ್ತು. ನಮ್ಮ ರಾಜ್ಯದಲ್ಲಿ ೧೯೭೦–೮೦ರಲ್ಲಿ ಬಗರ್ ಹುಕುಂ ಸಾಗುವಳಿದಾರರಿಗೆ ಸರ್ಕಾರಿ ಭೂಮಿಯನ್ನು ನೀಡುವ ರಾಜಕೀಯ ಇಚ್ಛಾಶಕ್ತಿಯೂ ಇತ್ತು. ಆದರೆ ಈಗ ಅಧಿಕಾರದಲ್ಲಿ ಇರುವ ಕಾಂಗ್ರೆಸ್ ಸರ್ಕಾರಗಳು ಭೂಹೀನರಿಗೆ ಭೂಮಿಯನ್ನು ನೀಡುವ ಬದಲಿಗೆ ಬಗರ್ ಹುಕುಂ, ಅರಣ್ಯ ಭೂಮಿ ಸಾಗುವಳಿದಾರರನ್ನು ಒಕ್ಕಲೆಬ್ಬಿಸುತ್ತಿದೆ.

ಈ ಹಿಂದೆ ಅಧಿಕಾರದಲ್ಲಿದ್ದ ಬಿಜೆಪಿ ರಾಜ್ಯ ಸರ್ಕಾರ ಸರ್ಕಾರಿ ಭೂಮಿಯನ್ನು ಪತ್ತೆಮಾಡಿ ಭೂ ಬ್ಯಾಂಕ್ ಸ್ಥಾಪಿಸಿ ಖಾಸಗಿ ಕಂಪನಿಗಳಿಗೆ, ರಿಯಲ್ ಎಸ್ಟೇಟ್‌ದಾರರಿಗೆ ಹರಾಜಿನಲ್ಲಿ ಮಾರಾಟ ಮಾಡಲು ಮುಂದಾಗಿತ್ತು. ಹೀಗಾಗಿ ಸರ್ಕಾರಿ ಭೂ ಆಕ್ರಮಣಕಾರರನ್ನು ಪತ್ತೆಮಾಡಲು ಡಾ॥ ಬಾಲಸುಬ್ರಮಣ್ಯಂ ಸಮಿತಿಯನ್ನು ರಚಿಸಿತ್ತು. ಡಾ॥ ಬಾಲಸುಬ್ರಮಣ್ಯಂ ಸಮಿತಿ ಹಲವಾರು ಆಕ್ರಮಣಕಾರರನ್ನು ಗುರುತಿಸುವ ಜೊತೆಗೆ ೧೨ ಲಕ್ಷ ಜನ ಸರ್ಕಾರಿ ಭೂಮಿಯನ್ನು ಅತಿಕ್ರಮಣ ಮಾಡಿದ್ದಾರೆಂದು ವರದಿ ನೀಡಿತು. ಈ




ವರದಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಸರ್ಕಾರಿ ಭೂಮಿ, ಬಂಜರು ಭೂಮಿ, ಗೋಮಾಳ, ಅಮೃತ್ ಮಹಲ್ ಕಾವಲು, ಗುಂಡು ತೋಪು, ಇತ್ಯಾದಿ ಹೆಸರಿನಲ್ಲಿ ಬಡ ರೈತರು, ದಲಿತ–ಹಿಂದುಳಿದವರು, ಸಣ್ಣ ರೈತರು, ಮತ್ತು ಕೃಷಿ ಕೂಲಿಕಾರ ಸಾಗುವಳಿದಾರರು ಸೇರಿದಂತೆ ೧೨ ಲಕ್ಷ ಜನರಲ್ಲಿ ಸೇರಿದ್ದಾರೆ. ಈ ಎಲ್ಲರಿಂದಲೂ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು, ಎಸ್. ಆರ್. ಹಿರೇಮಠ್‌ರವರು ಹೈಕೋರ್ಟ್‌ಗೆ ಅರ್ಜಿ ಸಲ್ಲಿಸಿದ್ದಾರೆ. ಹೈಕೋರ್ಟ್ ರಾಜ್ಯ ಸರ್ಕಾರಕ್ಕೆ ಆದೇಶ ನೀಡಿ ಎಲ್ಲಾ ಭೂ ಆಕ್ರಮಣಕಾರರಿಂದ ಭೂ ಸ್ವಾಧೀನಪಡಿಸಿಕೊಳ್ಳಬೇಕೆಂದು ತಾಕೀತು ಮಾಡಿದೆ. ಹೀಗಾಗಿ ರಾಜ್ಯ ಸರ್ಕಾರ ರಾಜ್ಯದಲ್ಲಿರುವ ಎಲ್ಲಾ ಒತ್ತುವರಿದಾರರನ್ನು ತೆರವುಗೊಳಿಸುತ್ತೇವೆ ಎಂದು ಹೈಕೋರ್ಟ್‌ಗೆ ಅಫಿಡವಿಟ್ ಸಲ್ಲಿಸಿದೆ. ಜೊತೆಗೆ, ರಾಜ್ಯದೆಲ್ಲೆಡೆ ಬಗರ್ ಹುಕುಂ ಮತ್ತು ಅರಣ್ಯ ಭೂಮಿ ಸಾಗುವಳಿದಾರರನ್ನು ಒಕ್ಕಲೆಬ್ಬಿಸಲು ಮುಂದಾಗಿದೆ.

ಭೂಗಳ್ಳರು ಯಾರು ? ಬಗರ್ ಹುಕುಂ ಸಾಗುವಳಿದಾರರು ಯಾರು ? ಬೆಂಗಳೂರು ಸೇರಿದಂತೆ ಎಲ್ಲಾ ಜಿಲ್ಲೆಗಳಲ್ಲಿ ಭೂಮಿಯನ್ನು ಲಪಟಾಯಿಸಿರುವವರು ಯಾರು ? ರಾಜಕೀಯ ಅಧಿಕಾರ ಮತ್ತು ರಾಜಕೀಯ ಪ್ರಭಾವವಿರುವ ವ್ಯಕ್ತಿಗಳೇ ? ಇಂತಹ ವ್ಯಕ್ತಿಗಳನ್ನು ಮಾತಾಡಿಸಿ 'ನೀವು ಸರ್ಕಾರಿ ಭೂಮಿಯನ್ನು ಅಕ್ರಮವಾಗಿ ಹೊಂದಿದ್ದೀರಿ' ಎಂದು ಅಧಿಕಾರ ಚಲಾಯಿಸುವ ದಿಟ್ಟತನವನ್ನು ರಾಜ್ಯ ಸರ್ಕಾರ ಹೊಂದಿದೆಯೇ ?

ಈ ರೀತಿಯಲ್ಲಿ ಉಲ್ಬಣಗೊಳ್ಳುತ್ತಿರುವ ಭೂ ಸಮಸ್ಯೆಗಳನ್ನು ಸರ್ಕಾರ ಬಗೆಹರಿಸುವ ಬದಲಿಗೆ ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸಲು ಮುಂದಾಗಿದೆ. ಸಿದ್ದರಾಮಯ್ಯನವರು ನ್ಯಾಯ ಕೊಡುತ್ತಾರೆಂದು ನಂಬಿದ್ದ ಬಡ ರೈತರಿಗೆ ಸರ್ಕಾರ 'ಉಳುವವನೇ ಹೊಲ ಬಿಟ್ಟು ಓಡಯ್ಯಾ...' ಎಂಬಂತೆ ಒಕ್ಕಲೆಬ್ಬಿಸುತ್ತಿದೆ. ಲಕ್ಷಾಂತರ ಬಡ ಕುಟುಂಬಗಳಿಗೆ ಆಸರೆಯಾಗಿರುವ ಬಗರ್ ಹುಕುಂ ಸಾಗುವಳಿದಾರರು, ಮನೆ–ನಿವೇಶನರಹಿತರು ಒಂದಾಗಿ ಪ್ರಜಾಸತ್ತಾತ್ಮಕವಾಗಿ ಹೋರಾಟಕ್ಕಿಳಿಯುವ ಸಂದರ್ಭ ಅನಿವಾರ್ಯವಾಗಿ ಒದಗಿಬರುತ್ತಿದೆ. ಹೀಗಾಗಿ ಗಂಭೀರಗೊಳ್ಳುತ್ತಿರುವ ಭೂ ಸಮಸ್ಯೆಯನ್ನು ರಾಜ್ಯ ಸರ್ಕಾರ ಅರಿತು ಬಗೆಹರಿಸಲು ಮುಂದಾಗಬೇಕಾಗಿದೆ. ಇಲ್ಲವಾದಲ್ಲಿ ಗಂಭೀರವಾದ ಪರಿಸ್ಥಿತಿಯನ್ನೆದುರಿಸಬೇಕಾಗುತ್ತದೆ.

*ಬೆಂಗಳೂರು* ***ಬಿ. ರಾಜಶೇಖರಮೂರ್ತಿ***

## ಪ್ರಕಟಣೆ

ಬೆಂಗಳೂರಿನ ದ. ರಾ. ಬೇಂದ್ರೆ ಕಾವ್ಯ ಕೂಟ (ನೋಂ.)ವು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದ **ದ. ರಾ. ಬೇಂದ್ರೆ ಸ್ಮೃತಿ ಲೇಖನ ಸ್ಪರ್ಧೆ–೮** ಅನ್ನು ನಡೆಸುತ್ತಿದೆ. ಅದರ ನಿಯಮಗಳ ಪ್ರತಿಗಾಗಿ ಸಂಪರ್ಕಿಸಿ.

*ಲೇಖನಗಳನ್ನು ಕಳುಹಿಸಬೇಕಾದ ವಿಳಾಸ :*

**ಡಾ॥ ಜಿ. ಕೃಷ್ಣಪ್ಪ**
ಅಧ್ಯಕ್ಷರು, ದ. ರಾ. ಬೇಂದ್ರೆ ಕಾವ್ಯಕೂಟ
ನಂ. ೨೨, 'ಶ್ರೀ ಗುರುದತ್ತ ನಿಲಯ', ೧ನೇ ತಿರುವು
ನೇತಾಜಿ ನಗರ, ಮತ್ತಿಕೆರೆ, ಬೆಂಗಳೂರು – ೫೪
ಸಂಚಾರಿ : ೯೯೭೨೧ ೦೯೨೯

ಅಕ್ಟೋಬರ್ ಹೊಸತು ಸಂಪಾದಕೀಯ ವಿಭಾಗದ ಎಲ್ಲಾ ಲೇಖನಗಳು ವಾಸ್ತವ, ಜನಪರ ಆಲೋಚನೆಗಳಿಂದ ಕೂಡಿವೆ. ಕನ್ನಡ ನಾಡಿಗೆ ಭೂಗಳ್ಳರ ಕನ್ನ, ಮೋದಿಯ ಹಿಟ್ಲರ್ ಮುಖವಾಡ, ಜಮ್ಮು ಪ್ರವಾಹ ದುರಂತ ಹಾಗೂ ಸುರೇಂದ್ರ ಕೌಲಗಿ ಅವರ ಗಾಂಧಿವಾದ ಮಾತ್ರವಲ್ಲದೆ ಖಲೀಲ್ ಗಿಬ್ರಾನ್‌ರ ಕಥೆಗಳು ಪತ್ರಿಕೆಯ ಮೌಲ್ಯ ಹೆಚ್ಚಿಸಿವೆ.

*ಹೂವಿನಹಡಗಲಿ* ***ಸುರೇಶ ಅಂಗಡಿ***

ರಾಜಕೀಯ ಮೀಸಲಾತಿ ಅನುಷ್ಠಾನಕ್ಕಿರುವ ತೊಡಕುಗಳು ಎಂಬ ಲೇಖನದಲ್ಲಿ ಡಾ॥ ಶೈಲಜ ಹಿರೇಮಠ ಸಾಕಷ್ಟು ವಿವರಣೆ ನೀಡಿದ್ದಾರೆ. ಸಂಚಿಕೆ ಸುಂದರವಾಗಿ ಮೂಡಿಬಂದಿದೆ. ಅಭಿನಂದನೆಗಳು.

ಕಾಸರಗೋಡು ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

# ಕರ್ನಾಟಕ ವಿಭಜನೆಯ ಮಾತು ಸಾಧುವೇ ?

ಮತ್ತೆ ಶ್ರೀ ಉಮೇಶ ಕತ್ತಿಯವರು 'ಕರ್ನಾಟಕ'ವನ್ನು ಕತ್ತರಿಸುವ 'ಕತ್ತಿ' ಎತ್ತಿದ್ದಾರೆ. ಇನ್ನೊಂದು ಕಡೆ ಅವರ ಈ ಪ್ರಯತ್ನವನ್ನು ಖಂಡಿಸಿ ವಿಭಜನೆಯನ್ನು ವಿರೋಧಿಸುತ್ತಿದ್ದಾರೆ.

ಕರ್ನಾಟಕ ಏಕೀಕರಣವಾಗಬೇಕೆಂದು ೧೯೫೬ಕ್ಕಿಂತ ಮುಂಚೆ ೬೦-೭೦ ವರ್ಷಗಳ ಹಿಂದಿನಿಂದ ಅನೇಕ ಪ್ರಾಂತಗಳಲ್ಲಿ ತುಂಡಾಗಿ ಹೋಗಿದ್ದ ಕನ್ನಡದ ಜನರನ್ನು ಒಂದೇ ಆಡಳಿತೆಯ ರಾಜ್ಯ ಸ್ಥಾಪನೆಗಾಗಿ ಅಹರ್ನಿಶಿ ಹೋರಾಡಿದವರು 'ಉತ್ತರ ಕರ್ನಾಟಕ'ದವರು. ಆ ಉತ್ತರ ಕರ್ನಾಟಕದವರೇ ಆದ ಶ್ರೀ ಕತ್ತಿ ಅವರು ಒಂದಾದ ಕರ್ನಾಟಕವನ್ನು ಎರಡಾಗಿ ವಿಭಜಿಸಬೇಕೆಂದು ಹೇಳುತ್ತಿರುವುದು ಆಶ್ಚರ್ಯಕರ ಹಾಗೂ ಸಂಕಟಕರ. ಅವರು ವಿಭಜನೆಯ ಮಾತನ್ನಾಡುವುದಕ್ಕೆ ಮುಖ್ಯ ಕಾರಣ- ಏಕೀಕೃತ ಕರ್ನಾಟಕ, ಉತ್ತರ ಕರ್ನಾಟಕವನ್ನು ಅಲಕ್ಷಿಸಿದೆ. ಅದರಿಂದಾಗಿ ಪ್ರಾದೇಶಿಕ ಅಸಮಾನತೆ ಉಂಟಾಗಿದೆ - ಎಂಬುದು.

ಉತ್ತರ ಕರ್ನಾಟಕವನ್ನು ಅಲಕ್ಷಿಸಿದೆ, ಅಸಮಾನತೆ ಇದೆ ಎಂಬ ಮಾತನ್ನು ಹೇಳಿದವರಲ್ಲಿ ಶ್ರೀ ಉಮೇಶ ಕತ್ತಿಯವರೆ ಮೊದಲಿಗರಲ್ಲ. ಅದಕ್ಕಿಂತ ಮೊದಲು ಕತ್ತಿಯವರ ಮಾತನ್ನು ಅಲ್ಲಗಳೆಯುವ, ಖಂಡಿಸುವ ಶ್ರೀ ಪಾಟೀಲ ಪುಟ್ಟಪ್ಪನವರೆ ಈ ಬಗ್ಗೆ ಮೊದಲು ದನಿ ಎತ್ತಿದವರು. ಕೂಗು ಎಬ್ಬಿಸಿದವರು. ಹಾಗೆಯೇ ಹಿಂದೆ ಮಂತ್ರಿಗಳಾಗಿದ್ದ, ಈಗಲೂ ಮಂತ್ರಿಗಳಾಗಿರುವ ಶ್ರೀ ಎಚ್. ಕೆ. ಪಾಟೀಲರು ಪ್ರಾದೇಶಿಕ ಅಸಮಾನತೆ ಇರುವುದನ್ನು ಅಂಕೆ ಸಂಖ್ಯೆ ಸಾಕ್ಷ್ಯಾಧಾರಗಳನ್ನೊಳಗೊಂಡ ಒಂದು ಪುಸ್ತಕವನ್ನು ಬರೆದಿದ್ದರು. ಪ್ರಾದೇಶಿಕ ಅಸಮಾನತೆ ಇದೆ ಎಂಬ ಮಾತನ್ನು ಉತ್ತರ ಕರ್ನಾಟಕದ ಭಾಗವಾಗಿರುವ ಹೈದ್ರಾಬಾದ್ ಕರ್ನಾಟಕವು ಅದೇ ಕೂಗನ್ನು ಎಬ್ಬಿಸಿತು. ಅದಕ್ಕಾಗಿ ಹೋರಾಟ ನಡೆಸಿತು. ಅವರ ಆ ಮಾತನ್ನು ಗಮನಿಸಿ, ನಮ್ಮ ಸಂವಿಧಾನದ 'ಆರ್ಟಿಕಲ್ ೩೭೧ ಜೆ' ಎಂಬ ಹೊಸ ಕಲಂಅನ್ನು ಸೇರಿಸಿ ಸಂವಿಧಾನವನ್ನು ತಿದ್ದುಪಡಿಮಾಡಿದರು. ಈ ಪ್ರಾದೇಶಿಕ ಅಸಮಾನತೆಯ ತಾರತಮ್ಯ, ಪಕ್ಷಪಾತ ನಿರಾಧಾರವಲ್ಲ ಎಂಬ ಕಾರಣದಿಂದಾಗಿ ಡಾ॥ ನಂಜುಂಡಪ್ಪನವರ ಏಕಸದಸ್ಯ ಸಮಿತಿಯನ್ನು ರಚಿಸಿದರು. ನಂಜುಂಡಪ್ಪ ಸಮಿತಿಯೂ ಕೂಡ ಉತ್ತರ ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಇದೆ ಎಂಬುದನ್ನು ಒಪ್ಪಿ ಆ ಅಸಮಾನತೆಯ ನಿವಾರಣೆಗಾಗಿ ಪರಿಹಾರೋಪಾಯವನ್ನು ತಮ್ಮ ವರದಿಯಲ್ಲಿ ಸೂಚಿಸಿದರು. ಅದನ್ನು ಕರ್ನಾಟಕ ಸರ್ಕಾರ ಅಂಗೀಕರಿಸಿ ಅಸಮಾನತೆಯನ್ನು ನೀಗಿಸಲು ತಕ್ಕ ಯೋಜನೆಗಳನ್ನು ರೂಪಿಸಿದೆ.

ಈ ಹಿನ್ನೆಲೆಯಲ್ಲಿ ಶ್ರೀ ಕತ್ತಿಯವರ ಮಾತಿನಲ್ಲಿ ಸತ್ಯಾಂಶವಿದೆ ಎಂದು ಮೇಲೆಯೆ ಎದ್ದು ಕಾಣುತ್ತದೆ. ಅದೇನೂ ಅಂಥ ಖಂಡನಾರ್ಹವಾದ ಮಾತೇನಲ್ಲ. ಆದ್ದರಿಂದ ಐಕ್ಯಕರ್ನಾಟಕದ ಪ್ರತಿಪಾದಕರು ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಬೇಕಾದುದು ಕತ್ತಿಯವರನ್ನು ಖಂಡಿಸಲಿಕ್ಕಾಗಿ ಅಲ್ಲ. ಸರ್ಕಾರವೇ ಒಪ್ಪಿಕೊಂಡ ಅಸಮಾನತೆಯನ್ನು ನಿವಾರಿಸುವ ಕಡೆಗೆ ದೃಷ್ಟಿಯನ್ನು ತಿರುಗಿಸಬೇಕು. ಆ ಕಡೆ ಸಂಬಂಧಪಟ್ಟವರು ದೃಷ್ಟಿಹರಿಸದೆ ಅವರನ್ನು ಖಂಡಿಸುತ್ತಾ ಕುಳಿತರೆ ಅಸಮಾನತೆ ಏನೂ ಇಲ್ಲದಂತಾಗುವುದಿಲ್ಲ. ಆದರೆ ಐಕ್ಯಕರ್ನಾಟಕದ ಅಧ್ವರ್ಯರು ಶ್ರೀ ಕತ್ತಿಯವರ ಮಾತಿಗೆ ಅಪ್ರತ್ಯಕ್ಷವಾಗಿ ಪ್ರೋತ್ಸಾಹ ಕೊಟ್ಟಂತಾಗುತ್ತದೆ. ಏಕೆಂದರೆ ಅಸಮಾನತೆಯಿಂದ ಬೇಸತ್ತ ಜನರ ಕೂಗು ಇನ್ನೂ ಉಲ್ಬಣವಾಗುತ್ತದೆ. ಅದರಿಂದ ಪರಿಸ್ಥಿತಿ ಬಿಗಡಾಯಿಸಬಹುದು. ವಿಕೋಪಕ್ಕೆ ಹೋಗಬಹುದು.

ತೆಲಂಗಾಣ ರಾಜ್ಯ ನಿರ್ಮಾಣಕ್ಕಾಗಿ ಭಾಷಾವಾರು ಪ್ರಾಂತ ರಚನಾ ಆಯೋಗ (ಫಸಲ್ ಅಲಿ ಆಯೋಗ) ರಚನೆಯಾಗುವುದಕ್ಕಿಂತ ಮುಂಚೆ ತೆಲಂಗಾಣದ ಜನ ಪ್ರಯತ್ನಿಸಿದ್ದರು. ಅದಕ್ಕೆ ಭಾ.ಪ್ರಾ.ರ. ಆಯೋಗವು ಅವರ ಆ ಬೇಡಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಅಂತಹ ಒಂದು ರಾಜ್ಯವನ್ನು ನಿರ್ಮಾಣ ಮಾಡಲಿಕ್ಕೆ ಶಿಫಾರಸ್ಸು ಮಾಡಿತ್ತು. ಆ ಉಚ್ಚಮಟ್ಟದ ಆಯೋಗ ಮಾಡಿದ ಶಿಫಾರಸ್ಸನ್ನು ವಿರೋಧಿಸಿ ಕರಾವಳಿ ಮತ್ತು ರಾಯಲಸೀಮಾ ಆಂಧ್ರರು ತೆಲಂಗಾಣ ಪ್ರದೇಶವನ್ನು ಕೂಡಿ 'ಆಂಧ್ರಪ್ರದೇಶ'ವನ್ನು ರಚನೆ ಮಾಡಬೇಕೆಂದು ಹಠ ಹಿಡಿದರು. ಒತ್ತಾಯದಿಂದ ಆಂಧ್ರಪ್ರದೇಶಕ್ಕೆ ಸೇರಿದ ತೆಲಂಗಾಣ ಜನರ ಅದುಮಿಟ್ಟ ಆಕ್ರೋಶ ಕ್ರಮೇಣ ಭುಗಿಲೆದ್ದಿತು. ಚಂದ್ರಶೇಖರ ರಾವ್ ಆ ಹೋರಾಟದ ನೇತೃತ್ವವನ್ನು ವಹಿಸಿದಾಗ ಆ ಧ್ವನಿ ಅಬ್ಬರವಾಗಿರಲಿಲ್ಲ. ಆದರೆ ಕ್ರಮೇಣ ತೆಲಂಗಾಣ ಜನರ ಅಸಂತೃಪ್ತಿ ಸ್ಫೋಟಿಸಿ ಕೊನೆಗೂ ತೆಲಂಗಾಣ ರಾಜ್ಯ ರಚನೆಯಾಯಿತು. ಅದರಿಂದ ತೆಲಂಗಾಣ ಜನ ಎಷ್ಟರಮಟ್ಟಿಗೆ ಉದ್ಧಾರವಾಗುವರೋ ಎಂಬುದನ್ನು ನೋಡಲು ಹತ್ತಿಪ್ಪತ್ತು ವರ್ಷ ಕಾಯಬೇಕು. ಆ ಕಾಲದ ನಂತರ ಈಗ ತೆಲಂಗಾಣ ರಾಜ್ಯ ನಿರ್ಮಾಣಕ್ಕಾಗಿ ಹೋರಾಡಿದವರಿಗೆ ಭ್ರಮನಿರಸನ ಉಂಟಾಗಬಹುದು. ಹಾಗೆಯೆ ಈಗ ಕರ್ನಾಟಕ ವಿಭಜನೆಯ ಮಾತನ್ನೆತ್ತಿದ್ದವರು ಉತ್ತರ ಕರ್ನಾಟಕದ ಪ್ರತ್ಯೇಕ ರಾಜ್ಯ ರಚನೆ ಮಾಡಿಕೊಂಡರೂ ಪ್ರಾದೇಶಿಕ ಅಸಮಾನತೆ ಸಂಪೂರ್ಣ ನಿವಾರಣೆಯಾಗುತ್ತದೆ ಎಂಬುದು ಸಂದೇಹಾಸ್ಪದ.

ಒಂದು ವೇಳೆ ಶ್ರೀ ಕತ್ತಿಯವರು ಹೇಳಿದಂತೆ ಉತ್ತರ ಕರ್ನಾಟಕವನ್ನು ಪ್ರತ್ಯೇಕಿಸುವುದೇ ಆದರೆ ಉದಯವಾಗಲಿರುವ ಆ ಉತ್ತರ ಕರ್ನಾಟಕ ರಾಜ್ಯ ಎದುರಿಸಲಿರಬೇಕಾದ ಸಮಸ್ಯೆಗಳು, ಉತ್ತರಿಸಲಾಗದ ಮಹಾಕಂಟಕಗಳು ಉಂಟಾಗಬಹುದು. ಮೊಟ್ಟಮೊದಲನೆಯದಾಗಿ, ಆ ಪ್ರಾಂತದ ರಾಜಧಾನಿಯನ್ನು ಎಲ್ಲಿ ಕಟ್ಟುವುದು ? ಈ ವಿಚಾರದಲ್ಲಿ ಈಗ ಚಂದ್ರಬಾಬು ನಾಯ್ಡು ಎದುರಿಸುತ್ತಿರುವ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ೧೯೫೩ರಲ್ಲಿ ಆಂಧ್ರಪ್ರದೇಶ ರಾಜ್ಯ ರಚನೆಯಾದಾಗ ಅದಕ್ಕೊಂದು ಉಚಿತವಾದ ರಾಜಧಾನಿ ಇರಲಿಲ್ಲ. ಆ ಕಷ್ಟವನ್ನು ಎದುರಿಸಲು ಜಿಲ್ಲಾ ಮುಖ್ಯ ಪಟ್ಟಣವಾಗಿದ್ದ ಕರ್ನೂಲಿನಲ್ಲಿ ೧೯೫೩ರಿಂದ ೧೯೫೬ರ ವರೆಗೆ ತಾತ್ಕಾಲಿಕ, ಅತಂತ್ರ, ಅಭದ್ರ, ಅಸಮರ್ಪಕ ಕಟ್ಟಡಗಳಲ್ಲಿ ರಾಜ್ಯವನ್ನು ಆಳಬೇಕಾಗಿ ಬಂತು. ೧೯೫೬ರಲ್ಲಿ ಆಂಧ್ರ ಪ್ರಾಂತ ರಚನೆಯಾದಾಗ ತೆಲಂಗಾಣ ಪ್ರದೇಶದಲ್ಲಿದ್ದ ಹೈದ್ರಾಬಾದ್ ಶಹರ ಸುಸಜ್ಜಿತ ವಿಧಾನಸೌಧ, ಉಚ್ಚನ್ಯಾಯಾಲಯ, ಮತ್ತಿತರ ಸಕಲ ಸೌಕರ್ಯಗಳನ್ನೊಳಗೊಂಡ ಕಟ್ಟಡಗಳಿಂದ ರಾಜಧಾನಿಯಾಗಿ ದೊರೆಯಿತು. ಆದ್ದರಿಂದ ಕರಾವಳಿ ಮತ್ತು ರಾಯಲಸೀಮಾ ಆಂಧ್ರರು ತೆಲಂಗಾಣ ಸಹಿತ ಆಂಧ್ರಪ್ರದೇಶವಾಗಬೇಕೆಂದು ಒತ್ತಾಯ ಮಾಡಿದರು. ಈಗ ತೆಲಂಗಾಣ ಪ್ರತ್ಯೇಕವಾದಮೇಲೆ ಉಳಿದ ರಾಯಲ ಆಂಧ್ರಪ್ರದೇಶದ ಮುಖ್ಯ ಪಟ್ಟಣ ಕಟ್ಟಲು ಚಂದ್ರಬಾಬು ನಾಯ್ಡು ಹೆಣಗಾಡುತ್ತಿದ್ದಾರೆ. ಕರ್ನಾಟಕ ವಿಭಜನೆಯಾದರೆ ಶ್ರೀ ಕತ್ತಿಯವರು ಆ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸಬಲ್ಲರೆ ?

ಹೊಸ ರಾಜಧಾನಿಯನ್ನು ಕಟ್ಟುವ ಸಮಸ್ಯೆಗಿಂತ ಹೆಚ್ಚಾಗಿ ೧೯೫೬ರಿಂದೀಚೆಗೆ ಉತ್ತರ ಕರ್ನಾಟಕದಿಂದ ಬಂದು ಬೆಂಗಳೂರಿನಲ್ಲಿ ನೆಲೆಸಿರುವ, ಬೆಂಗಳೂರಿನ ಅಭಿವೃದ್ಧಿಗಾಗಿ ಶ್ರಮಿಸಿದ ಉತ್ತರ ಕರ್ನಾಟಕದ ಜನರು ಇಲ್ಲಿಂದ ಗುಳೆ ಹೋಗಬೇಕಾಗುತ್ತದೆ. ಒಂದು ವೇಳೆ ಇಲ್ಲಿಯೆ ಹುಟ್ಟಿ ಬೆಳೆದವರು ಉತ್ತರ ಕರ್ನಾಟಕ ರಾಜಧಾನಿಗೋ, ಮತ್ತೆಲ್ಲಿಗೊ ಹೋಗಬೇಕಾದರೆ ಅವರೆಲ್ಲಿ ನೆಲೆಸಬೇಕು ? ಅವರ ಗತಿ ಏನಾಗಬೇಕು ? ವಿಧಾನಸೌಧ, ಉಚ್ಚ ನ್ಯಾಯಾಲಯ, ವಿಶ್ವವಿದ್ಯಾನಿಲಯಗಳು, ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ಅಮಂಗಳ ಎಂದು ಭಾವಿಸಿರುವ ಆಪ್ತರ ಸಮಾಧಿಗಳಿರುವ ರುದ್ರಭೂಮಿ, ಪರಪ್ಪನ ಅಗ್ರಹಾರ - ಇವೆಲ್ಲವು ವಿಚ್ಛೇದಿತ ಕರ್ನಾಟಕದವರಿಗೆ ಎರವಾಗುತ್ತವೆ. ಈ ನಷ್ಟವನ್ನೆಲ್ಲ ಹೇಗೆ ಭರ್ತಿಮಾಡಿಕೊಳ್ಳುವುದು ? ಇದಲ್ಲದೇ ಈಗಿನ ಕರ್ನಾಟಕ ಸರ್ಕಾರದ ಸೇವೆಯಲ್ಲಿರುವ ನಾಗರಿಕ ಸೇವಾ ಸಿಬ್ಬಂದಿಯಲ್ಲಿ ಯಾರು ಎಲ್ಲಿಗೆ ಹೋಗಬೇಕು ? ಕೊರತೆಯಾದವರನ್ನು ಹೇಗೆ ನೇಮಿಸಿಕೊಳ್ಳಬೇಕು ಅಥವಾ ಹೆಚ್ಚಾದವರನ್ನು ಹೇಗೆ ಉಚ್ಚಾಟಿಸಬೇಕು ? ಈ ಸೇವಾ ಸಿಬ್ಬಂದಿಯ ನೇಮಕ, ವರ್ಗಾವಣೆ, ಹಂಚಿಕೆ ಈ ಸಮಸ್ಯೆಯಿಂದಾಗಿ ಸಿಡಿದು ಹೋದ ಕರ್ನಾಟಕದ ಆಡಳಿತೆ ಕನಿಷ್ಠಪಕ್ಷ ಐದಾರು ವರ್ಷಗಳಾದರೂ ಮುಗ್ಗರಿಸುತ್ತದೆ. ಆ ಕಾಲಾವಧಿಯಲ್ಲಿ ಅಲ್ಲಿಯ ಜನರ ಸಮಸ್ಯೆಗಳನ್ನು, ಸಂಕಷ್ಟಗಳನ್ನು ಪರಿಹರಿಸುವ ದಾರಿ ಯಾವುದು ? ಇದನ್ನು ಶ್ರೀ ಕತ್ತಿಯವರು ಯೋಚಿಸಬೇಕು. ಇಂಥ ಎಷ್ಟೋ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇದು ರಾಜ್ಯದ ಹಿತದೃಷ್ಟಿಯಿಂದ ಆಗಬಾರದ ಕೆಲಸ. ಇಂಥ ಎಷ್ಟೋ ನೂರಾರು ಸಮಸ್ಯೆಗಳು ಸಿಡಿದುಹೋದ ನೂತನ ಪ್ರದೇಶದ ಸರ್ಕಾರಕ್ಕೆ ಎದುರಾಗುತ್ತವೆ. ಆದ್ದರಿಂದ ಶ್ರೀ ಕತ್ತಿಯವರು ಉತ್ತರ ಕರ್ನಾಟಕದ ಜನರನ್ನು ಕಷ್ಟಕ್ಕೆ ಈಡುಮಾಡಬಾರದು.

ಕರ್ನಾಟಕ ಒಡೆಯಬಾರದೆಂಬ ಇನ್ನೊಂದು ಮುಖ್ಯವಾದ ಕಾರಣ; 'ಮನುಜಕುಲ ತಾನೊಂದೆ ವಲಂ' ಎಂಬ ಪಂಪ ಮಹಾಕವಿಯ ವಾರಸುದಾರರಾದ ನಾವು, ಕುವೆಂಪು ಅವರ 'ವಿಶ್ವಮಾನವ' ಸಂದೇಶವನ್ನು ಕೇಳಿ ಪುಣ್ಯವಂತರಾದ ನಾವು ಒಂದೇ ಭಾಷೆಯನ್ನಾಡುವ, ಒಂದೇ ಜನಾಂಗದವರು ಒಂದಾಗದಿರುವುದು ಕರ್ನಾಟಕದ ಔನ್ನತ್ಯಕ್ಕೆ ಕರ್ನಾಟಕದ ಜನಮನದ ಐಕ್ಯಕ್ಕೆ ಘೋರ ಅಪರಾಧವನ್ನುಂಟು ಮಾಡಿದಂತೆ ಆಗುತ್ತದೆ. ಆದ್ದರಿಂದ ಕತ್ತಿಯವರು ತಮ್ಮ 'ಕತ್ತಿ'ಯನ್ನು ಕೆಳಗಿಳಿಸಬೇಕಾಗಿ ವಿನಂತಿ.

*ಬೆಂಗಳೂರು* **ಕೋ. ಚೆನ್ನಬಸಪ್ಪ**



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



ಜಿ. ರಾಮಕೃಷ್ಣ

**ಪಶುಸಂಗೋಪನೆಯ ಹಂತದಿಂದ ಕೃಷಿಯ ಹಂತಕ್ಕೆ ಕಾಲಿರಿಸುವ ಋಗ್ವೇದ ಕಾಲದ ಜನಸಮುದಾಯದ ಆಹಾರ ಪದ್ಧತಿ ಹೇಗಿದ್ದಿರಬೇಕು ? ಇದನ್ನು ಚರ್ಚಿಸುವಾಗ ವಿದ್ವಾಂಸರು ಪರಸ್ಪರ ದೂಷಣೆಯಲ್ಲಿ ತೊಡಗಿರುವುದನ್ನು ಕಳೆದ ಒಂದು ಶತಮಾನದ ಲೇಖನಗಳಲ್ಲಿ ಮತ್ತು ಗ್ರಂಥಗಳಲ್ಲಿ ಕಾಣುತ್ತೇವೆ. ನಮ್ಮ ಕೆಲವು ವಿದ್ವಾಂಸರು ಸ್ಥಗಿತವಾದ ಸಮಾಜವು ನಿರಂತರವಾಗಿ ಸಾಗಿಬಂದಿದೆಯೆಂದು ಭಾವಿಸಿಕೊಂಡು ಇಂದಿನ ಪದ್ಧತಿಯೇ ಅಂದಿನದೂ ಆಗಿತ್ತೆಂದು ವಾದಿಸುತ್ತಾರೆ. ಅಂದು ಏನನ್ನು ತಿನ್ನುತ್ತಿದ್ದರೋ ಅದನ್ನು ಇಂದು ನಾವೂ ತಿನ್ನಬೇಕೆಂಬ ಕಡ್ಡಾಯ ನಿಯಮವೇನೂ ಇಲ್ಲ. ಮೂರು ಸಾವಿರ ವರ್ಷಗಳ ಹಿಂದೆ ಇದ್ದ ಎಷ್ಟೋ ಪದ್ಧತಿಗಳು ನಶಿಸಿಹೋಗಿವೆ. ಧರ್ಮಶಾಸ್ತ್ರ ಗ್ರಂಥಗಳು ಋಗ್ವೇದದ ಕಾಲದ ೧೫೦೦ ವರ್ಷಗಳ ನಂತರ ರಚಿತವಾದವು ಎಂಬುದನ್ನು ನೆನಪಿನಲ್ಲಿಡಬೇಕು. ಈ ಹಿನ್ನೆಲೆಯಲ್ಲಿ ಕೆಲವು ಅಂಶಗಳನ್ನು ಪ್ರಸ್ತುತ ಹದಿನೇಳನೆಯ ಕಂತಿನಲ್ಲಿ ಪರಿಚಯಿಸಿಕೊಳ್ಳೋಣ.**

ಋಗ್ವೇದದಲ್ಲಿ ಆಹಾರಕ್ಕೆ 'ಪಿತು' ಎಂಬ ಪದದ ಪ್ರಯೋಗವಿದೆ. ಮೊದಲನೆಯ ಮಂಡಲದ ಒಂದು ಇಡೀ ಸೂಕ್ತವು (೧೮೭) ಈ ಪಿತುವನ್ನು ಉದ್ದೇಶಿಸಿ ಹೇಳಿರುವಂಥದು. 'ಅನ್ನ' ಮತ್ತು ಅದರ ಸಮಾನಾರ್ಥಕ ಪದಗಳನ್ನು ಋಗ್ವೇದದ ಮಂತ್ರಗಳಲ್ಲಿ ಸಾವಿರಾರು ಬಾರಿ ಬಳಸಲಾಗಿದೆ. ಅಂತಹ ಪದಗಳೆಂದರೆ ಅಂಧಃ, ವಾಜಃ, ಪಯಃ, ಪ್ರಯಃ, ಅವಃ, ಬ್ರಹ್ಮ, ಇತ್ಯಾದಿ. 'ಗೋ' ಎಂಬ ಪದಕ್ಕೆ ಋಗ್ವೇದದಲ್ಲಿ ೧೬ ಬೇರೆ ಬೇರೆ ಅರ್ಥಗಳನ್ನು ಯಾಸ್ಕ ತನ್ನ 'ನಿರುಕ್ತ'ದಲ್ಲಿ ದಾಖಲಿಸಿದ್ದಾನೆ; ಮತ್ತು 'ಗೋ' ಶಬ್ದಕ್ಕೆ ಋಗ್ವೇದದಲ್ಲಿ ಬೇರೆ ೯ ಸಮಾನಾರ್ಥಕ ಪದಗಳಿವೆ. ಅಂದರೆ, ಒಂದೇ ಅರ್ಥವನ್ನು ಸೂಚಿಸುವ ಹಲವು ಪದಗಳನ್ನು ಬಳಸುವುದು ಋಗ್ವೇದದಲ್ಲಿ ಧಾರಾಳವಾಗಿ ಕಂಡುಬರುತ್ತದೆ. ತನ್ನನ್ನು ತಾನು ಸಲಹಿಕೊಳ್ಳಲು 'ಪಿತು' ಅತ್ಯಗತ್ಯವೆಂಬುದನ್ನು ಋಗ್ವೇದದ ಕವಿ ಪದೇ ಪದೇ ಅಭಿವ್ಯಕ್ತಿಸುತ್ತಾನೆ. 'ಅನ್ನ' ಎಂಬುದಕ್ಕೆ ಭೌತಿಕ ಅರ್ಥಕ್ಕಿಂತಲೂ ಅದರ ಗೂಢಾರ್ಥವೇ ಹೆಚ್ಚು ಪ್ರಧಾನವಾದುದೆಂದು ಹೇಳುವವರೂ ಇದ್ದಾರೆ. ಯಾಸ್ಕನ ಕಾಲಕ್ಕಾಗಲೆ ವೇದದ ಪದಗಳ ಅರ್ಥ ಅಥವಾ ಅರ್ಥಗಳನ್ನು ದಾಖಲಿಸಿದ್ದ 'ನಿಘಂಟು' ಇದ್ದಿತು. ಅದರಲ್ಲಿ 'ಅನ್ನ'ವನ್ನು 'ಬ್ರಹ್ಮ' ಎಂಬುದರ ಸಮಾನಾರ್ಥಕ ಪದವೆಂದು ಗುರುತಿಸಲಾಗಿದೆ. 'ಬ್ರಹ್ಮ' ಪದವನ್ನು ಸಾಯಣನು ಹಲವು ಬಾರಿ 'ಅನ್ನ' ಎಂಬ ಅರ್ಥವನ್ನು ಹೊಂದಿದೆಯೆಂದು ವ್ಯಾಖ್ಯಾನಿಸಿದ್ದಾನೆ. 'ಗಣಗಳ ಪತಿ'ಯಾದ ಗಣಪತಿಯನ್ನು ಕುರಿತಾದ ಪ್ರಸಿದ್ಧ ಮಂತ್ರ 'ಗಣಾನಾಂ ತ್ವಾ ಗಣಪತಿಂ ಹವಾಮಹೇ' ಇತ್ಯಾದಿಯಲ್ಲಿ (೨.೨೩.೧) ಅವನನ್ನು 'ಬ್ರಹ್ಮಣಸ್ಪತೇ' ಎಂದು ಸಂಬೋಧಿಸಲಾಗಿದೆ. ಅದರ ಅರ್ಥ "ಬ್ರಹ್ಮ, ಅಂದರೆ ಅನ್ನದ, ಪಾಲಯಿತೃ" ಎನ್ನುತ್ತಾನೆ ಸಾಯಣ. ಬಲಿಷ್ಠನಾಗುವ ಕರ್ಮದಲ್ಲಿ ಬ್ರಹ್ಮಣಸ್ಪತಿಯ ಪಾತ್ರವನ್ನು ಕವಿಯು ಉಲ್ಲೇಖಿಸಿದ್ದಾನೆಂಬುದು ಅವನ ಇಂಗಿತ (ಬ್ರಹ್ಮಣಃ ಅನ್ನಸ್ಯ ಪರಿವೃಢಸ್ಯ ಕರ್ಮಣಃ ವಾ ಪತೇ ಪಾಲಯಿತಃ). ಇನ್ನೊಂದು ಮಂತ್ರದಲ್ಲಿ "ಈಶಾನಃ ಬ್ರಹ್ಮಣಾ ವೇಷಿ ಮೇ ಹವಂ" (೨.೨೪.೧೫) ಎಂಬ ಭಾಗವಿದೆ. ಅಲ್ಲಿಯೂ "ಬ್ರಹ್ಮಣಾ" ಎಂದರೆ "ಅನ್ನ, ಹವಿಸ್ಸಿನ ಲಕ್ಷಣವಿರುವ ಅನ್ನ" ಎಂದು ಸಾಯಣನು ವ್ಯಾಖ್ಯಾನಿಸಿದ್ದಾನೆ (ಬ್ರಹ್ಮಣಾ । ಅನ್ನ ನಾಮ ಏತತ್ । ಹವಿರ್ಲಕ್ಷಣೇನ ಅನ್ನೇನ). ಆದರೆ ಇಲ್ಲೆಲ್ಲೂ "ಅಧ್ಯಾತ್ಮವನ್ನು ಪೋಷಿಸುವಂತಹ ಸಾಮಗ್ರಿ" ಎಂಬ ಗೂಢಾರ್ಥದ ಸೂಚನೆಯಿದ್ದಂತೆ ತೋರುವುದಿಲ್ಲ.

"ಅತಿಶಯವಾದ ಬಲವನ್ನು ನೀಡುವ ಪಿತುವನ್ನು







ಸ್ತುತಿಸುವೆ; ಅಂತಹ ಪಿತುವಿನಿಂದಲೇ ತ್ರಿತನು ವೃತ್ರನ ಅಂಗಾಂಗಗಳನ್ನು ಛೇದಿಸಲು ಸಮರ್ಥನಾದ" ಎಂದು ಪಿತುಸೂಕ್ತದಲ್ಲಿ ಹೇಳಿದೆ (೧.೧೮೭.೧). ಋಗ್ವೇದದಲ್ಲಿ ತ್ರಿತನ ಪ್ರಸ್ತಾಪವು ಹಲವಾರು ಬಾರಿ ಇಂದ್ರ, ವಾಯು ಮತ್ತು ಮರುತ್ತುಗಳ ಸಂದರ್ಭದಲ್ಲಿ ಬಂದಿದೆ. ಅವನನ್ನು 'ಆಪ್ತ್ಯ' (ನೀರಿನ ರೂಪದವನು) ಎನ್ನಲಾಗಿದೆ. ಅವನು ದ್ಯುಲೋಕದಲ್ಲೆಲ್ಲೋ ಇದ್ದಾನೆಂದು ಭಾವಿಸಲಾಗಿದೆ. ಬಹುಶಃ 'ಮೋಡದಲ್ಲಿ ಅಡಗಿರುವವನು' ಎಂಬ ಸೂಚನೆ ಇರಬಹುದು. ಇಂದ್ರನ ಪರವಾಗಿ "ಅವನು ವೃತ್ರನನ್ನು ತುಂಡರಿಸುತ್ತಾನೆ" ಎಂದರೆ ಮಳೆಯನ್ನು ಸುರಿಸುತ್ತಾನೆಂಬ ಅರ್ಥವಿರಬಹುದೆಂದು ಕೆಲವರು ತರ್ಕಿಸುತ್ತಾರೆ. ಮುಖ್ಯ ವಿಷಯವೆಂದರೆ 'ಪಿತುವು ನಮ್ಮನ್ನು ಬಲಶಾಲಿಗಳನ್ನಾಗಿಸುತ್ತಾನೆ' ಎಂಬುದು. ಆದ್ದರಿಂದ ಕವಿಯು ಪಿತುವನ್ನು ಸ್ವಾದುಯುಕ್ತ, ಮಧುಯುಕ್ತ, ಎಂದು ಶ್ಲಾಘಿಸಿ 'ನಮ್ಮ ರಕ್ಷಕನಾಗು' ಎಂದು ಕೇಳಿಕೊಳ್ಳುತ್ತಾನೆ (೨: ಸ್ವಾದೋ ಪಿತೋ ಮಧೋ ಪಿತೋ ವಯಂ ತ್ವಾ ವವೃಮಹೇ। ಅಸ್ಮಾಕಂ ಅವಿತಾ ಭವ). ಆಹಾರವು ಮಂಗಲಕರವಾದ್ದು, ಮಂಗಲಕರ ರಕ್ಷಣೆ ನೀಡುವಂಥದು, ಆರೋಗ್ಯ ನೀಡುವಂಥದು, ಪ್ರಿಯವಾದ್ದು; ಅದು ಕೃತ್ರಿಮತೆ ಇಲ್ಲದ ಸ್ನೇಹಿತನಂತೆ (೩: ... ಸುಶೇವೋ ಅದ್ವಯಾಃ). ಪಿತುವಿನ ರಸಗಳು (ಷಡ್ರಸಗಳು) ಎಲ್ಲ ದಿಕ್ಕುಗಳಲ್ಲೂ ಹರಡಿವೆ, ಅವು ಎತ್ತುಗಳಂತೆ ಕೆಲಸ ಮಾಡುತ್ತವೆ (ಅಂದರೆ, ಬಲ ನೀಡುತ್ತವೆ). ಇಲ್ಲಿ ಎತ್ತು ಎನ್ನುವುದನ್ನು 'ಪ್ರಬಲ ಕತ್ತುಗಳನ್ನು ಹೊಂದಿರುವುದು' ಎಂದು ಸೂಚಿಸಲಾಗಿದೆ (೫: ... ಪ್ರ ಸ್ವಾದ್ಮಾನಃ ರಸಾನಾಂ ತುವಿಗ್ರೀವಾಃ ಇವ ಈರತೇ). ಎಂಥ ದೊಡ್ಡ ದೇವತೆಯಾದರೂ, ಸ್ವತಃ ಇಂದ್ರನೇ ಆದರೂ, ಪಿತುವಿನಿಂದಲೇ ಬಲವನ್ನು ಪಡೆಯಬೇಕು. ಅದಿಲ್ಲದಿದ್ದರೆ ಇಂದ್ರನು ಮೋಡ ಅಥವಾ ವೃತ್ರನನ್ನು ಜಯಿಸಲಾಗುತ್ತಿರಲಿಲ್ಲ (೬: ... ಅಕಾರಿ ಚಾರು ಕೇತುನಾ ತವ ಅಹಿಂ ಅವಸಾ ಅವಧೀತ್). ಇಂತಹ ಪ್ರಭಾವಶಾಲಿ ಪಿತುವು ಎಲ್ಲಿದ್ದರೂ ಸ್ತೋತ್ರ ಮಾಡುವವನ ಬಳಿಗೆ ಬರಬೇಕು (೭). ಆಹಾರವು ನೀರಿನಲ್ಲಿ ದೊರೆಯಬಹುದು, ಇಲ್ಲವೆ ಭೂಮಿಯ ಮೇಲಿರುವ ಸಸ್ಯಗಳಿಂದ ದೊರೆಯಬಹುದು; ಯಾವುದೇ ಆದರೂ ಅದು ದೇಹದ ಪೋಷಕವೇ (೮: ಯದಪಾಂ ಓಷಧೀನಾಂ ಪರಿಶಂ ಆರಿಶಾಮಹೇ। ವಾತಾಪೇ ಪೀವ ಇದ್ಭವ). "ವಾತಾಪಿ" ಎಂಬ ಪದವು ಇಲ್ಲಿ ಸೋಮವನ್ನು ನಿರ್ದೇಶಿಸುತ್ತದೆಯೆಂದು ಕೆಲವರು ಅರ್ಥೈಸಿದ್ದಾರೆ; ಅದು ಮಾನವ ಶರೀರದ ಸೂಚಕವೆಂಬುದು ಸಾಯಣನ ಅಭಿಮತ. ಮುಂದಿನ ಮಂತ್ರವು ನಿರ್ದಿಷ್ಟವಾಗಿಯೇ ಸೋಮವನ್ನು ಕುರಿತು ಹೇಳುವಂಥದು: "ಎಲೈ ಸೋಮ, ನೀನು ನಮಗೆ ಹಾಲಿನಲ್ಲಿ ದೊರಕುವೆ, ಗಂಜಿಯಲ್ಲಿ ದೊರಕುವೆ; ಯಾವ ಮೂಲದಿಂದ ಬಂದಿದ್ದರೂ ಅದು ಶರೀರಕ್ಕೆ ಪೋಷಣೆ ನೀಡುವಂಥದೇ" (೯: ಯತ್ತೇ ಸೋಮ ಗವಾಶಿರಃ ಯವಾಶಿರಂ ಭಜಾಮಹೇ। ವಾತಾಪೇ ಪೀವ ಇದ್ಭವ ॥). ಅದು ತರಕಾರಿಗಳಿಂದ ಬಂದಿರಲಿ, ಧಾನ್ಯಗಳ ಹಿಟ್ಟಿನಿಂದ ಬಂದಿರಲಿ, ಮುಖ್ಯವಾಗಿ ಪಿತುವು ಆರೋಗ್ಯದಾಯಕವಾಗಿರಬೇಕು, ದೇಹವನ್ನು ಗಟ್ಟಿಗೊಳಿಸಬೇಕು, ಶಕ್ತಿಯನ್ನು ಕೊಡಬೇಕು (೧೦: ಕರಂಭಃ ಓಷಧೇ ಭವ ಪೀವಃ ವೃಕ್ಕಃ ಉದಾರಥಿಃ। ವಾತಾಪೇ ಪೀವ ಇದ್ಭವ ॥). ಪಿತುವು ದೇವತೆಗಳಿಗೆ ಮತ್ತು ಮಾನವರಿಗೆ ಸಮಾನ; ಇಬ್ಬರೂ ಅದನ್ನು ಸೇವಿಸುತ್ತಾರೆ. ಹೇಗೆ ಗೋವುಗಳಿಂದ ಯಜ್ಞದಲ್ಲಿ ನೀಡಬೇಕಾದ ಸಾಮಗ್ರಿಗಳನ್ನು ಪಡೆಯಬಹುದೋ ಹಾಗೆ ಸ್ತೋತೃವು ಪಿತುವಿನಿಂದ ತನಗೆ ಬೇಕಾದ್ದನ್ನೆಲ್ಲಾ ಪಡೆಯುತ್ತಾನೆ (೧೧: ತಂ ತ್ವಾ ವಯಂ ಪಿತೋ ವಚೋಭಿರ್ಗಾವೋ ನ ಹವ್ಯಾ ಸುಷೂದಿಮ। ದೇವೇಭ್ಯಃ ತ್ವಾ ಸಧಮಾದಂ ಅಸ್ಮಭ್ಯಂ ತ್ವಾ ಸಧಮಾದಂ ॥). ಇಲ್ಲಿ ಗಮನಿಸಬೇಕಾದ ಒಂದಂಶವೆಂದರೆ ಈ ಸೂಕ್ತದಲ್ಲಿ ದೇಹಕ್ಕೆ ಅಗತ್ಯವಾದ ಪೌಷ್ಟಿಕತೆಯನ್ನು ಪ್ರಸ್ತುತಪಡಿಸಲಾಗಿದೆಯೇ ವಿನಾ ಪೌಷ್ಟಿಕತೆಯು ಬೌದ್ಧಿಕ ಕ್ರಿಯೆಗಳಿಗೆ ಹೇಗೆ ಇಂಬು ಕೊಡುತ್ತದೆಂಬುದನ್ನು ಪ್ರಸ್ತಾಪಿಸಿಲ್ಲ. ಈ ಸೂಕ್ತದ ಮುಂದುವರಿಕೆಯೋ ಎಂಬಂತೆ ಛಾಂದೋಗ್ಯ ಉಪನಿಷತ್ತಿನಲ್ಲಿ (೬.೭) ಅನ್ನವು ಮನಸ್ಸಿನ ಸಾಮರ್ಥ್ಯದ ವೃದ್ಧಿಗೆ ಅತ್ಯಂತ ಅಗತ್ಯವಾದ ಸಾಮಗ್ರಿಯೆಂಬುದನ್ನು ಉದ್ದಾಲಕನು ಶ್ವೇತಕೇತುವಿಗೆ ಬೋಧಿಸಿದ್ದಾನೆ.

ಆಹಾರದ ಮೂಲ, ಅದರ ಅವಶ್ಯಕತೆ, ಅದರ ಪೋಷಕ ಗುಣ, ಅದರ ಅನಿವಾರ್ಯ ಅಗತ್ಯ, ಇತ್ಯಾದಿಗಳನ್ನು ಅತ್ಯಂತ ಸರಳವಾಗಿ ನಿರೂಪಿಸಿರುವ ಸೂಕ್ತ ಇದು. ಪಿತುವಿನ ಬಗೆಗಿನ ಗೌರವಯುತ ಭಾವನೆಯು ಸ್ಪಷ್ಟವಿದೆ. ಅದೇ ಮೊದಲನೆಯ ಮಂಡಲದ ೧೬೨ನೆಯ ಸೂಕ್ತವನ್ನು ನೋಡಿದರೆ ಆಲಂಕಾರಿಕ ಅಭಿವ್ಯಕ್ತಿ, ಹತ್ತಿಕ್ಕಲಾಗದ ಆಹಾರದ ಆಕರ್ಷಣೆ, ಅದನ್ನು ದೇವತೆಗಳಿಗೆ ಅರ್ಪಿಸಬೇಕೆಂಬ ಭಾವ, ಅದರ ಶರೀರ ಭಾಗಗಳು, ಎಲ್ಲವನ್ನೂ ಕಾಣುತ್ತೇವೆ. ಅತ್ಯುತ್ಸಾಹದಿಂದ ಕವಿಯು ಇಡೀ ಪ್ರಸಂಗವನ್ನು ಹೆಜ್ಜೆಹೆಜ್ಜೆಯಾಗಿ ಬಿಡಿಸಿ ಹೇಳುವುದು ಇಲ್ಲಿಯ ವೈಶಿಷ್ಟ್ಯ. ಆರಂಭದಲ್ಲೇ ನಾವು ತಿಳಿಯಬೇಕಾದ ಒಂದಂಶವಿದೆ; ಅದೇನೆಂದರೆ, ದೇವತೆಗಳಿಗೆ ಅರ್ಪಿಸಲಾದ ಯಾವುದೂ ಅರ್ಪಿಸುವವನಿಗೆ ವರ್ಜ್ಯವಲ್ಲ. ಬದಲಾಗಿ, ಅವನು ಅದರ ಪಾಲುದಾರ. ಋಗ್ವೇದದ ಒಂದು ಮಂತ್ರವು ದೇವತೆಯನ್ನು ಹವಿಸ್ಸು ಸ್ವೀಕರಿಸಲು ಯಜ್ಞಗೃಹಕ್ಕೆ ಆಗಮಿಸಬೇಕೆಂದು ಆಹ್ವಾನಿಸಿ ಒಂದು ಮಾತು ಸೇರಿಸುತ್ತದೆ: "ಬನ್ನಿ, ಇಲ್ಲಿ ನೀವು ತಿನ್ನಬಾರದಂಥದು ಯಾವುದೂ ಇಲ್ಲ" (ನಾತ್ರಾವಖಾದೋ ಅಸ್ತಿ ವಃ). ಅಂದರೆ, ಎಲ್ಲವೂ ಖಾದ್ಯ ಮತ್ತು ಎಲ್ಲವೂ ರುಚಿಕರ. ದೇವತೆಗೆ ರುಚಿಕರ ಹೌದೋ, ಅಲ್ಲವೋ, ಅದು ಹೆಚ್ಚು ಪ್ರಾಸಂಗಿಕವಲ್ಲ; ಮುಖ್ಯವಾಗಿ, ಅದು ದೇವತೆಗೆ ಅರ್ಪಿಸಿದ ನಂತರ ಉಳಿಯುವುದು ಋಗ್ವೇದದ ಕವಿಯ ಸಮೂಹಕ್ಕೆ. ಅದನ್ನವನು "ಇಷ್ಟರೊಡನೆ ಹಂಚಿಕೊಳ್ಳಬಹುದು." ಇಷ್ಟೆಲ್ಲಾ ಏಕೆ ಪ್ರಸ್ತಾಪಿಸಬೇಕಾಯಿತೆಂದರೆ ಪ್ರಸ್ತುತ ಸೂಕ್ತವು (೧.೧೬೨) ಕುದುರೆಯನ್ನು ಕುರಿತಾದದ್ದು. ಕುದುರೆಯ ಮಾಂಸವು ಎಷ್ಟು ಸ್ವಾದಿಷ್ಟವಾದ್ದು, ಆಕರ್ಷಕವಾದ್ದು, ಮನಸ್ಸನ್ನು ಸೂರೆಗೊಳ್ಳುವಂಥದು, ತಿನ್ನಬೇಕೆಂಬ ಆಸೆಯನ್ನು ಇಮ್ಮಡಿಗೊಳಿಸುವಂಥದು, ಇತ್ಯಾದಿ ಅಂಶಗಳೆಲ್ಲಾ ಸೂಕ್ತದಲ್ಲಿ ವ್ಯಕ್ತವಾಗಿವೆ. ಋಗ್ವೇದದ ಕಾಲದ ಕವಿ ಸಮುದಾಯವು, ಅಂದರೆ ಕವಿಯ ಬುಡಕಟ್ಟಿನ ಜನ, ಕುದುರೆಯ ಮಾಂಸವನ್ನು ಚಪ್ಪರಿಸಿಕೊಂಡು ತಿನ್ನುತ್ತಿದ್ದರೋ ಇಲ್ಲವೋ ಎಂಬುದನ್ನು ಸೂಕ್ತದ ಮಂತ್ರಗಳಿಂದಲೇ ತಿಳಿಯಬಹುದು. ಇಪ್ಪತ್ತೆರಡು ಮಂತ್ರಗಳನ್ನುಳ್ಳ ದೀರ್ಘ ಸೂಕ್ತ ಅದು, ಆದರೆ ಕವಿತ್ವ ಮತ್ತು ಚರಿತ್ರೆಯ ದೃಷ್ಟಿಯಿಂದ ಸ್ವಾರಸ್ಯಕರವಾದ ಸೂಕ್ತ. ಅದನ್ನು ದೀರ್ಘತಮಸ್ ಎಂಬುವವನ ರಚನೆಯೆಂದು ಪರಂಪರೆಯು ದಾಖಲಿಸಿದೆ. ಬೇರಾವುದೇ ದೇವತೆಯನ್ನುದ್ದೇಶಿಸಿ ಹೇಳಿರುವುದಿಲ್ಲವಾದ್ದರಿಂದ ಕುದುರೆಯೇ ಪ್ರಸ್ತುತ ಸೂಕ್ತದ ದೇವತೆಯೆಂದು ಭಾವಿಸಲು ಅಡ್ಡಿ ಇಲ್ಲವೆನ್ನುತ್ತಾನೆ ಸಾಯಣ. ಅಶ್ವಮೇಧ ಯಾಗದಲ್ಲಿ ಸೂಕ್ತವಾಗಿ ಇಲ್ಲಿಯ ಮಂತ್ರಗಳನ್ನು ಬಳಸಿಕೊಳ್ಳಬಹುದೆಂದು ಆಶ್ವಲಾಯನ ಶ್ರೌತಸೂತ್ರವು ಹೇಳುತ್ತದೆ.

ಒಂದು ಇಡೀ ಸೂಕ್ತವನ್ನು ಕುದುರೆಗೆ ಮೀಸಲಿಟ್ಟು ಅದನ್ನು ವಿಜೃಂಭಿಸುವಂತೆ ಚಿತ್ರಿಸಿದರೆ ದೇವತೆಗಳಿಗೆ

ಅಸಮಾಧಾನ ಆಗುವುದಿಲ್ಲವೆ? ಆದ್ದರಿಂದ ಮೊದಲನೆಯ ಮಂತ್ರದಲ್ಲಿ ವರುಣ, ಅರ್ಯಮನ್ (ಅಂದರೆ, ಮಿತ್ರ=ಸೂರ್ಯ), ಋಭುಕ್ಷನ್ (ಅಂದರೆ, ಋಭುಗಳ ಒಡೆಯ, ಇಂದ್ರ), ಆಯು (ಬಹುಶಃ ಅಗ್ನಿ), ಮರುತ್ತುಗಳು, ಇವರಿಗೆಲ್ಲಾ ಕವಿಯು ವಿನಂತಿಸಿ ಕೊಳ್ಳುತ್ತಾನೆ: "ದೇವಸಂಜಾತವಾದ ಕುದುರೆಯ ಗುಣಗಾನವನ್ನು ಈ ಯಜ್ಞ ಸಭೆಯಲ್ಲಿ ಮಾಡಿದರೆ ನೀವು ನಮ್ಮನ್ನು ನಿಂದಿಸದಿರಿ" (೧: ...ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ). ಕುದುರೆಯು "ಬಹುದೇವತಾ ಸ್ವರೂಪ" ಉಳ್ಳದ್ದೆಂದು ಸಾಯಣನು ವ್ಯಾಖ್ಯಾನಿಸಿದ್ದಾನೆ. ಎಷ್ಟು ದೇವತೆಗಳ ಸ್ವರೂಪದ್ದೇ ಇರಲಿ, ಸದ್ಯಕ್ಕೆ ಆ ಕುದುರೆಯು ಯಜ್ಞದಲ್ಲಿ ಬಲಿಯಾಗತಕ್ಕದ್ದು. ಅದರ ಜೊತೆ ಒಂದು ಮೇಕೆಯೂ ಸೇರಿಕೊಳ್ಳುತ್ತದೆ. ಮೇಕೆಯು ಕುದುರೆಗೆ ಬಲಿ ಮತ್ತು ಕುದುರೆಯು ಯಜ್ಞದಲ್ಲಿ ದೇವತೆಗಳಿಗೆ ಬಲಿ. ಅದನ್ನು ಸಿಂಗರಿಸಿ ಋತ್ವಿಕ್ಕುಗಳು ಒಯ್ಯುತ್ತಿದ್ದಾರೆ. ಮೇಕೆಯು 'ಮೇ ಮೇ' ಎಂದು ಅರಚುತ್ತಾ ಸಾಗುತ್ತಿದೆ (೨: ಯನ್ನಿರ್ಣಿಜಾ ರೇಕ್ಣಸಾ ಪ್ರಾವೃತಸ್ಯ ರಾತಿಂ ಗೃಭೀತಾಂ ಮುಖತೋ ನಯಂತಿ। ಸುಪ್ರಾಙ್ ಅಜಃ ಮೇಮ್ಯತ್ ವಿಶ್ವರೂಪಃ ಇಂದ್ರಾಪೂಷ್ಣೋಃ ಪ್ರಿಯಂ ಅಪ್ಯೇತಿ ಪಾಥಃ॥). 'ನಿರ್ಣಿಜಾ' ಮತ್ತು 'ರೇಕ್ಣಾ' ಎಂಬ ಪದಗಳು ಕುದುರೆಯ ಅಲಂಕಾರ ವಸ್ತುಗಳನ್ನು ಸೂಚಿಸುತ್ತವೆ. 'ಮೇಮ್ಯತಿ' ಎಂಬುದು ಮೇಕೆಯ ಶಬ್ದಾನುಕರಣ ಸೂಚಕ. ಯಜ್ಞಶಾಲೆಯಲ್ಲಿ ಕ್ರಮವಾಗಿ ಜರುಗುವ ಕ್ರಿಯೆಗಳನ್ನು ಮತ್ತು ಅಲ್ಲಿಯ ವಾತಾವರಣವನ್ನು ಊಹಿಸಿಕೊಂಡರೆ ನಾಟಕೀಯ ಪ್ರಸಂಗಗಳು ಕಣ್ಣಿಗೆ ಕಟ್ಟುತ್ತವೆ. ಆ ಕ್ರಿಯೆಗಳ ಕ್ರಮವನ್ನು ಸೂಕ್ತವು ಮನದಟ್ಟು ಮಾಡಿಕೊಡುತ್ತಿದೆ. ಆ ಮೇಕೆಯಾದರೋ ಎಲ್ಲ ದೇವತೆಗಳಿಗೂ ಪ್ರಿಯವಾದ್ದು, ಆದರೆ ಪ್ರಸ್ತುತ ಅದು ಪೂಷನ್‌ಗೆ ಮೀಸಲಾಗಿದೆ. ಕುದುರೆಯ ಜೊತೆ ಅದನ್ನು ಎಳೆದೊಯ್ಯಲಾಗುತ್ತಿದೆ. ತ್ವಷ್ಟ್ರ ಎಂಬ ದೇವತೆಯು ಬಲಿಯಾಗುವ ಪ್ರಾಣಿಗಳನ್ನು ಬಲಿಯೋಗ್ಯ ವಾಗಿಸುತ್ತಾನೆ. ಇಲ್ಲಿ ಮೇಕೆಯ ಮೇಲೆ ಆ "ಕೃಪೆ" ತೋರುತ್ತಿದ್ದಾನೆ! (೩: ಏಷ ಛಾಗಃ ಪುರೋ ಅಶ್ವೇನ ವಾಜಿನಾ ಪೂಷ್ಣೋ ಭಾಗೋ ನೀಯತೇ ವಿಶ್ವದೇವ್ಯಃ। ಅಭಿಪ್ರಿಯಂ ಯತ್ ಪುರೋಳಾಶಂ ಅರ್ವತಾ ತ್ವಷ್ಟಾ ಇತ್ ಏನಂ ಸೌಶ್ರವಸಾಯ ಜಿನ್ವತಿ॥). ಕುದುರೆಯನ್ನು ದೇವತೆಗಳಿಗೆ ಬಲಿ ಕೊಡುವುದಾದರೂ ಏತಕ್ಕೆ? ಕೇವಲ ಅವರ ಸಂಪ್ರೀತಿಗಾಗಿಯೆ? ಅಲ್ಲ, ಯಜ್ಞ ಮಾಡುತ್ತಿರುವವರು ಸಂಪತ್ತು ಪಡೆಯಲೋಸುಗ ಆ ಕುದುರೆಯನ್ನು ದೇವತೆಗಳಿಗೆ ಅರ್ಪಿಸುತ್ತಿದ್ದಾರೆ. ಮೊದಲಿಗೆ ಕುದುರೆಯು ಯಜ್ಞಶಾಲೆಯ ಒಂದು ಭಾಗವನ್ನು ಮೂರು ಬಾರಿ ಸುತ್ತಿಬರುತ್ತದೆ; ಆಗೆಲ್ಲಾ ಮೇಕೆಯು ಅದರ ಹಿಂದೆಯೇ ಬರುತ್ತಿರುತ್ತದೆ. ಒಂದು ರೀತಿಯಲ್ಲಿ ಮೇಕೆಯು ಮುಂಬರಲಿರುವ ಕುದುರೆಯ ಬಲಿಯ ಸುದ್ದಿಯನ್ನು ದೇವತೆಗಳಿಗೆ ಮುಟ್ಟಿಸುತ್ತಿದೆ (ಅರಚುವ ಮೂಲಕ!). ಮಂತ್ರದಲ್ಲಿ ಇರುವ 'ಋತುಶಃ' ಎಂಬುದರ ಅರ್ಥ "ಕಾಲಕಾಲಕ್ಕೆ" ಎಂದು. ಅಂದರೆ, ಯಜ್ಞಶಾಲೆಯ ವಿಧಿಗಳಿಗೆ ಒಂದು




ನಿಶ್ಚಿತ ಕ್ರಮವಿದೆ. ಅದರಂತೆ ಎಲ್ಲಾ ಕ್ರಿಯೆಗಳೂ ನಡೆಯುತ್ತವೆ (೪: ಯತ್ ಹವಿಷ್ಯಂ ಋತುಶಃ ದೇವಯಾನಂ ತ್ರಿಃ ಮಾನುಷಾಃ ಪರಿ ಅಶ್ವಂ ನಯಂತಿ। ಅತ್ರ ಪೂಷ್ಣಃ ಪ್ರಥಮೋ ಭಾಗ ಏತಿ ಯಜ್ಞಂ ದೇವೇಭ್ಯಃ ಪ್ರತಿವೇದಯನ್ನಜಃ॥). ಯಜ್ಞದಲ್ಲಿ ಎಲ್ಲವನ್ನೂ ಕ್ರಮವಾಗಿ ಜರುಗಿಸಲು ಸಾಮಾನ್ಯವಾಗಿ ಹದಿನಾರು ಮಂದಿ ಇರುತ್ತಾರೆ. ಸದ್ಯದಲ್ಲಿ ಎಂಟು ಮಂದಿ ಇದ್ದಾರೆ. ಅವರಲ್ಲಿ ಒಬ್ಬನು ನಿರ್ದೇಶಕ, ಎಲ್ಲವನ್ನೂ ನಿಯಂತ್ರಿಸುವವನು. ಆದ್ದರಿಂದ ಅವನು 'ಮೇಧಾವಿ ಪುರೋಹಿತ' (ಸುವಿಪ್ರಃ). ಹೋತೃ (ಸ್ತುತಿಕಾರ), ಅಧ್ವರ್ಯು (ಕ್ರಿಯಾವಿಧಿಗಳನ್ನು ನೆರವೇರಿಸುವವನು), ಅಗ್ನಿಯನ್ನು ಹೊತ್ತಿಸುವವನು ಅಥವಾ ಪ್ರತಿಷ್ಠಾಪಕ, ಸೋಮರಸವನ್ನು ತೆಗೆಯುವವನು, ಎಲ್ಲಾ ಸೇರಿದ್ದಾರೆ. ಅವರೆಲ್ಲಾ ಯಥಾ ವಿಧಿ ಯಜ್ಞ ಕ್ರಿಯೆಯನ್ನು ಮುನ್ನಡೆಸುತ್ತಾರೆ. ಯಜ್ಞವನ್ನು ಆಯೋಜಿಸಿರುವ ಯಜಮಾನನಿಗಲ್ಲದೆ ಬೇರೇನಾದರೂ ಫಲವನ್ನು ಇತರರಿಗೆ ಈ ಯಜ್ಞವು ನೀಡಬಹುದೆ? ಹೌದು, ನೀಡುತ್ತದೆ, ಎನ್ನುತ್ತಾನೆ ಕವಿ. ಏನದು? ನದಿಗಳು, ಕಾಲುವೆಗಳು, ನೀರಿನಿಂದ ತುಂಬುವುದು. ಅಂದರೆ, ಯಜ್ಞದಿಂದ ಮಳೆ ಸುರಿಯುತ್ತದೆ. ಈಗಲೂ ಈ ಮಾತನ್ನು ಪುಷ್ಟೀಕರಿಸುವಂತಹ ಭಾವನೆಗಳನ್ನು ಹರಡುವವರಿದ್ದಾರೆ, ತಾವು ಪ್ರಯೋಗಗಳ ಮೂಲಕ ಆ ಸತ್ಯವನ್ನು ಕಂಡುಕೊಂಡಿರುವುದಾಗಿ ಘೋಷಿಸು ವವರಿದ್ದಾರೆ. ಭಗವದ್ಗೀತೆಯು ಇದನ್ನು ಪುರಸ್ಕರಿಸಿದೆ (೩.೧೪: ಯಜ್ಞಾತ್ ಭವತಿ ಪರ್ಜನ್ಯಃ). ನಮಗೆ ತಿಳಿದಂತೆ ಚಿರಾಪುಂಜಿಯಲ್ಲಿ ಯಾರೂ ಯಜ್ಞ ಮಾಡಿ ಮಳೆ ತರಿಸಿಕೊಳ್ಳುವುದಿಲ್ಲ. ಇದೇ ಅಕ್ಟೋಬರ್ ೧೨ರಂದು ವಿಶಾಖಪಟ್ಟಣದಲ್ಲಿ ಸುರಿದ ಮಳೆ ಮತ್ತು ಬೀಸಿದ ಸುಂಟರಗಾಳಿಗೆ ಯಾವ ಯಜ್ಞದ ಕುಮ್ಮಕ್ಕೂ ಇರಲಿಲ್ಲ. ಋಗ್ವೇದದ ಕವಿಗೆ ಅಂದಿನ ವಿದ್ಯಮಾನ ಗಳನ್ನು ವಿವರಿಸಿಕೊಳ್ಳುವ ಕುತೂಹಲವಿದೆ. ಅವನು ಅಂದು ವಾಸಿಸುತ್ತಿದ್ದ ಪ್ರದೇಶದಲ್ಲಿ, ಅಂದರೆ ವಾಯವ್ಯ ಭಾರತ ಮತ್ತು ಸಿಂಧೂನದಿಯ ಕಣಿವೆಯಲ್ಲಿ, ಮಳೆಗೇನೂ ಕೊರತೆ ಇರಲಿಲ್ಲ. ಅದು ಸಂಪ್ರೀತರಾದ ದೇವತೆಗಳ ಕೊಡುಗೆಯೆಂಬುದು ಅವನ ಭಾವನೆ (೫: ...ತೇನ ಯಜ್ಞೇನ ಸು ಅರಂಕೃತೇನ ಸು ಇಷ್ಟೇನ ವಕ್ಷಣಾಃ ಆ ಪೃಣಧ್ವಂ).

ಬುಡಕಟ್ಟು ಸಮಾಜದಿಂದ ಹೊರಬಂದು, ಒಂದೆಡೆ ನೆಲೆಗೊಂಡ ಸಮುದಾಯಗಳ ಕಾಲವನ್ನು ಪ್ರತಿನಿಧಿಸುವ ಸೂಕ್ತ ಇದು. ಯಜ್ಞದ ಸಂಕೀರ್ಣ ಸ್ವರೂಪವು ಅದನ್ನು ಮನಗಾಣಿಸುತ್ತದೆ. ಬಹುಮಟ್ಟಿಗೆ ಈ ವೇಳೆಗೆ ಕೃಷಿಪ್ರಧಾನ ಸಂಸ್ಕೃತಿಯು ಅಂಕುರಿಸಿದೆ. ಅದರಿಂದಾಗಿ ಪ್ರಾಚೀನ ಸಮುದಾಯಗಳ ಮಾಂತ್ರಿಕತೆಯು ವಿಕಸಿಸಿ ಈಗ ಸಂಕೀರ್ಣ ಯಜ್ಞದ ಸ್ವರೂಪವನ್ನು ಪಡೆದಿದೆ. ಪ್ರಾಚೀನ ಮಾಂತ್ರಿಕತೆಯ ಆಚರಣೆಗಳಲ್ಲಿ ಸಾಮೂಹಿಕತೆಯ ಛಾಯೆ ಇರುತ್ತದೆ ಮತ್ತು ಆಕಾಂಕ್ಷೆಗಳು ಸಹ ಸಮಷ್ಟಿಯದೇ. ನಂತರದಲ್ಲಿ ಆಯೋಜಕ ಮತ್ತು ಫಲಾನುಭವಿ ಒಬ್ಬ ವ್ಯಕ್ತಿ; ಅವನನ್ನು 'ಯಜಮಾನ' ಎನ್ನುತ್ತಾರೆ. ಅವನ ಯಜ್ಞಕ್ಕೆ ಒಂದು ಭಾರಿ ಸೈನ್ಯವನ್ನು ಜಮಾಯಿಸಬೇಕು: ಯಜ್ಞ ಶಾಲೆಯನ್ನು ನಿರ್ಮಿಸುವವರು, ವೇದಿಗಳನ್ನು ಕಟ್ಟುವವರು, ಋತ್ವಿಕ್ಕುಗಳು, ಬಲಿ, ದೊಡ್ಡ ಭೋಜನಾಲಯ, ಹೀಗೆ ಪರಿಕರಗಳು ಹತ್ತಾರು. ಬಲಿಪಶುವೊಂದಿದ್ದರೆ ಸಾಲದು; ಅದನ್ನು ಕಟ್ಟಲು ಗೂಟ ಬೇಕು, ಆಮೇಲೆ ಅದನ್ನು ಕತ್ತರಿಸುವವನು ಬೇಕು, ನಂತರ ಮಾಂಸವನ್ನು ಬೇಯಿಸುವ ಪ್ರಸಂಗ ಇರುತ್ತದೆ. ಇವೆಲ್ಲವನ್ನೂ ಪ್ರಸ್ತುತ ಸೂಕ್ತದಲ್ಲಿ ಗುರುತಿಸಲಾಗಿದೆ. 'ಯೂಪ' ಅಂದರೆ ಸ್ತಂಭ, ಬಲಿಪಶುವನ್ನು ಕಟ್ಟಿಹಾಕಲು ಅಗತ್ಯವಾದ್ದು. ಅದಕ್ಕೆ ಎಂಥದೋ ಒಳ್ಳೆಯ ಮರದಿಂದ ಕೊಂಬೆಯನ್ನು ಕಡಿದು ತರಬೇಕು. ಅದನ್ನು ಮಾಡುವವನಿಂದ ಹಿಡಿದು ಮಾಂಸ ಬೇಯಿಸಲು ಬೇಕಾಗುವ ಪಾತ್ರೆಗಳನ್ನು ಸಂಯೋಜಿಸುವಂಥವರವರೆಗೆ ಅನೇಕ ಕೆಲಸಗಳಿಗೆ ಜನ ಬೇಕು. ಯೂಪದ ತುದಿಯನ್ನು ಚೂಪಾಗಿಸಿ ಅಣಿಗೊಳಿಸುವವನು ಸಹ ಒಬ್ಬ. ಈ ಎಲ್ಲರ ಸಹಕಾರವೂ ದೊರಕಲೆಂಬ ಆಶಯವನ್ನು ಮುಂದಿನ ಮಂತ್ರವು ಅಭಿವ್ಯಕ್ತಿಸುತ್ತದೆ (೬: ಯೂಪವ್ರಸ್ಕಾಃ ಉತ ಯೇ ಯೂಪವಾಹಾಃ ಚಷಾಲಂ ಯೇ ಅಶ್ವಯೂಪಾಯ ತಕ್ಷತಿ। ಯೇ ಚ ಅರ್ವತೇ ಪಚನಂ ಸಂಭರಂತಿ ಉತೋ ತೇಷಾಂ ಅಭಿಗೂರ್ತಿಃ ನಃ ಇನ್ವತು). ಇಷ್ಟಾದನಂತರ ಕುದುರೆಯೂ ಸಹಕರಿಸ ಬೇಕಲ್ಲ! ಅದು ದೇವತೆಗಳ ಆವಾಸಕ್ಕೆ ಹೋಗಲಿದೆ. ಮೃದು ಶರೀರದ ಕುದುರೆ ಅದಕ್ಕೆ ಸಿದ್ಧವಾಗಿ ನಿಂತಿದೆ. ಅದನ್ನು ಕಂಡು ಸ್ತೋತೃಗಳು, ಋಷಿಗಳು ಹರ್ಷದಿಂದ ಉಬ್ಬಿದ್ದಾರೆ. ಎಂತಹ ಸ್ನೇಹಮಯಿ ಕುದುರೆ ದೇವತೆ ಗಳಿಗೆ ಅರ್ಪಿತವಾಗಲು ದೊರೆಯಿತೆಂದು ಉಲ್ಲಾಸ ಬೇರೆ (೭: ಉಪ ಪ್ರ ಅಗಾತ್ ಸುಮತ್ ಮೇ ಅಧಾಯಿ ಮನ್ಮ ದೇವಾನಾಂ ಆಶಾಃ ಉಪ ವೀತಪೃಷ್ಠಃ। ಅನು ಏನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮ ಸುಬಂಧುಂ॥). ಕುದುರೆಯೇನೋ ದೇವತೆಗಳಿಗೆ ಮತ್ತು ಯಜ್ಞದಲ್ಲಿ ಭಾಗಿಗಳಾಗಿರು ವವರಿಗೆ ಸೊಗಸುತ್ತದೆ, ಆದರೆ ಸ್ವತಃ ಕುದುರೆಯು ಸ್ವಯಂಪ್ರೇರಿತವಾಗೇನೂ ಬಲಿಪಶುವಾಗಿ ಬಂದಿಲ್ಲ. ಅದನ್ನು ಎಳೆದೊಯ್ಯಲು ಲಗಾಮು ಮುಂತಾದುವನ್ನೆಲ್ಲ

ಬಳಸಲಾಗಿದೆ. ಅದರ ಬಾಯಿಗೆ ಹಸಿರು ಹುಲ್ಲನ್ನು ಸಹ ತುರುಕಿ ಅದನ್ನು ಓಲೈಸಲಾಗುತ್ತಿದೆ. ದೇವತೆಗಳ ಸನಿಹಕ್ಕೆ ಹೋದಾಗಲೂ ಇವೆಲ್ಲಾ ಕುದುರೆಗೆ ಭೂಷಣಪ್ರಾಯವಾಗಿರಲೆಂದು ಕವಿಯು ಆಶಿಸುತ್ತಾನೆ (೮: ಯತ್ ವಾಜಿನಃ ದಾಮ ಸಂದಾನಂ ಅರ್ವತೋ ಯಾ ಶೀರ್ಷಣ್ಯಾ ರಶನಾ ರಜ್ಜುರಸ್ಯ। ಯದ್ವಾ ಘ ಅಸ್ಯ ಪ್ರಭೃತಂ ಆಸ್ಯೇ ತೃಣಂ ಸರ್ವಾ ತಾ ತೇ ಅಪಿ ದೇವೇಷು ಅಸ್ತು॥). ಇಷ್ಟಾದರೂ ಕುದುರೆಗೆ ಏನೋ ಆತಂಕ. ಅದು ಕೊಸರುತ್ತಲೇ ಇದೆ, ಎಳೆದಾಡಿಸಿಕೊಂಡು ಚಿಕ್ಕಪುಟ್ಟ ಗಾಯಗಳನ್ನೂ ಮಾಡಿಕೊಂಡಿದೆ. ಗಾಯಗಳ ಮೇಲೆ ನೊಣಗಳು ಜುಂಯ್‌ಗುಡುತ್ತಿವೆ. ಯೂಪದ ಮತ್ತು ಕತ್ತಿಯ ಮೇಲೂ ಅವು ಕೂತಿವೆ. ಕುದುರೆಯನ್ನು ಕತ್ತರಿಸುವವನ ಕೈ ಮತ್ತು ಉಗುರುಗಳ ಸುತ್ತ ಅವು ಹಾರಾಡುತ್ತಿವೆ. ಇವು ಇರುವಂತೆಯೇ ದೇವತೆಗಳ ಬಳಿಗೆ ಕುದುರೆಯು ಹೊರಡಬೇಕಾಗಿದೆ (೯: ಯದಶ್ವಸ್ಯ ಕ್ರವಿಷೋ ಮಕ್ಷಿಕಾಶ ಯದ್ವಾ ಸ್ವರೌ ಸ್ವಧಿತೌ ರಿಪ್ತಮಸ್ತಿ। ಯತ್ ಹಸ್ತಯೋಃ ಶಮಿತುಃ ಯತ್ ನಖೇಷು ಸರ್ವಾ ತಾ ತೇ ಅಪಿ ದೇವೇಷು ಅಸ್ತು॥). ಅದಿನ್ನೂ ಬದುಕಿರುವ ಕುದುರೆ. ಹುಲ್ಲು ತಿಂದು ಬಹಳ ಕಾಲವಾಗಿರಲಾರದು; ಆದ್ದರಿಂದ ಅದರ ಹೊಟ್ಟೆಯಲ್ಲಿ ಜೀರ್ಣವಾಗಿಲ್ಲದ ಆಹಾರ ಇನ್ನೂ ತುಂಬಿರಲು ಸಾಧ್ಯ. ಕುದುರೆಯನ್ನು ಕತ್ತರಿಸಿದಾಗ ಅದರ ಹಸಿಯ ಮಾಂಸದ ವಾಸನೆಯ ಜೊತೆ ಹೊಟ್ಟೆಯೊಳಗಿನ ಇನ್ನೂ ಜೀರ್ಣವಾಗಿಲ್ಲದ ಆಹಾರದ ವಾಸನೆಯೂ ಸೇರಿಕೊಳ್ಳಬಹುದು. ಅದನ್ನು ಹಾಗೆಯೇ ಬೇಯಿಸಲಾಗದು, ದೇವತೆಗಳಿಗೆ ಅದು ರುಚಿಸದೆಯೂ ಹೋಗಬಹುದು. ಆದ್ದರಿಂದ ಕುದುರೆಯನ್ನು ಕಡಿಯುವವರು ಎಲ್ಲವನ್ನೂ ಶುದ್ಧೀಕರಿಸಿ ಸೊಗಸಾದ ಪಾಕವನ್ನು ಇಳಿಸಲು ಅನುವು ಮಾಡಿಕೊಡಬೇಕು (೧೦: ಯತ್ ಊವಧ್ಯಂ ಉದರಸ್ಯ ಅಪವಾತಿ ಯಃ ಆಮಸ್ಯ ಕ್ರವಿಷಃ ಗಂಧಃ ಅಸ್ತಿ। ಸುಕೃತಾ ತತ್ ಶಮಿತಾರಃ ಕೃಣ್ವಂತು ಉತ ಮೇಧಂ ಶೃತಪಾಕಂ ಪಚಂತು॥). ಯಜ್ಞಶಾಲೆಯ ವಿದ್ಯಮಾನಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಈ ಕವಿಯ ಮಾತುಗಳಿಗೆ ವಿವರಣೆಯೇ ಬೇಕಿಲ್ಲ, ಅಷ್ಟು ಸ್ಫುಟವಾಗಿ ವೀಕ್ಷಕ ವಿವರಣೆ ನೀಡುತ್ತಿದ್ದಾನೆ ಕವಿ.

ಮುಂದಿನ ಮಂತ್ರದಲ್ಲಿ ದೃಶ್ಯವು ಬದಲಾಗುತ್ತದೆ. ಯೂಪಕ್ಕೆ ಕುದುರೆಯನ್ನು ಕಟ್ಟಿದ್ದು, ಅದರ ಶರೀರವನ್ನು ಸೀಳಿದ್ದು, ಮಾಂಸವನ್ನು ಬೇರ್ಪಡಿಸಿದ್ದು, ಎಲ್ಲವೂ ಮುಗಿದುಹೋಗಿದೆ. ಕವಿಯು ಅದರ ಆಖ್ಯಾನ ಮತ್ತು ವ್ಯಾಖ್ಯಾನಗಳನ್ನು ನೀಡಿಲ್ಲ. ಕುದುರೆಯ ಶರೀರದಿಂದ ದಕ್ಕಿದ ಮಾಂಸವು ಈಗ ಬೆಂಕಿಯ ಮೇಲಿಟ್ಟು ಸುಡಲಾಗುತ್ತಿದೆ. ಒಂದು ಶೂಲಕ್ಕೆ ಸಿಗಿಸಿ ಬೆಂಕಿಯ ಮೇಲೆ ಅದನ್ನು ಆಕಡೆ ಈಕಡೆ ತಿರುಗಿಸಿ ಚೆನ್ನಾಗಿ ಸುಡುವ ಕ್ರಿಯೆ ಇದು. ಶೂಲವನ್ನು 'ಸ್ಪಿಟ್' ಎನ್ನುತ್ತಾರೆ ಮತ್ತು ಇಡೀ ಸುಡುವ ಪ್ರಕ್ರಿಯೆಗೆ 'ಬಾರ್ಬಿಕ್ಯು' (barbecue) ಎಂಬ ಹೆಸರಿದೆ. ಅದೇನೋ ಬಹಳ ನೂತನವಾದ ಯೂರೋಪಿನ ಪದ್ಧತಿಯೆಂದು ಕೆಲವು ಯುವಕರು ಭ್ರಮಿಸುತ್ತಾರೆ, ಆದರೆ ಅದು ಋಗ್ವೇದದಷ್ಟು ಪ್ರಾಚೀನವಾದ ಪದ್ಧತಿ. ಹಾಗೆ ಸುಡುವಾಗ ಮಾಂಸದಿಂದ ಘನದ್ರವವು ಒಸರುತ್ತದೆ. ಆ ದ್ರವವು ಬಹಳ ಸ್ವಾದಿಷ್ಟವಿರಬೇಕು, ಆದ್ದರಿಂದ ಕವಿ ಹೇಳುತ್ತಾನೆ, "ಅದು ಭೂಮಿ ಅಥವಾ ಹುಲ್ಲಿನ ಮೇಲೆ ಬಿದ್ದು ನಿಕೃಷ್ಟವಾಗಬಾರದು; ಅದನ್ನೂ ಒಳಗೊಂಡಂತೆ ಎಲ್ಲವನ್ನೂ ಆಸೆಬುರುಕರಾಗಿ ಕಾದಿರುವ ದೇವತೆಗಳಿಗೆ ಅರ್ಪಿಸಬೇಕು," ಎಂದು. ಋಗ್ವೇದ ಕಾಲದವರು ಇಂತಹ ಮಂತ್ರಗಳಿಂದ ಪುಲಕಿತರಾಗಿರಬೇಕು, ಲೊಚಕೆ ಹೊಡೆದಿರಬೇಕು (೧೧: ಯತ್ ತೇ ಗಾತ್ರಾತ್ ಅಗ್ನಿನಾ ಪಚ್ಯಮಾನಾತ್ ಅಭಿ ಶೂಲಂ ನಿಹತಸ್ಯ ಅವಧಾವತಿ। ಮಾ ತತ್ ಭೂಮ್ಯಾಂ ಆ ಶ್ರಿಷತ್ ಮಾ ತೃಣೇಷು ದೇವೇಭ್ಯಃ ತತ್ ಉಶದ್ಭ್ಯಃ ರಾತಂ ಅಸ್ತು॥). ಕುದುರೆಯ ಮಾಂಸವನ್ನು ಬಯಲಿನಲ್ಲಿಯೇ ಸುಡುವುದು ಮತ್ತು ಬೇಯಿಸುವುದು ಅಂದಿನ ಪದ್ಧತಿಯಾಗಿದ್ದಿತೇನೋ ಎನಿಸುತ್ತದೆ. ಮುಂದಿನ ಮಂತ್ರವು ಮಾಂಸವನ್ನು ಸುಡುವ ಮತ್ತು ಬೇಯಿಸುವ ಕ್ರಿಯೆಯನ್ನು ಸುತ್ತುವರಿದು ನಿಂತು ನೋಡುತ್ತಾ ಇರುವವರು ಹೇಗೆ ಸಹನೆ ಕಳೆದುಕೊಳ್ಳುತ್ತಿದ್ದಾರೆ ಎಂಬುದನ್ನು ನಿರೂಪಿಸುತ್ತದೆ. ಶೀಘ್ರವಾಗಿ ಅದನ್ನು ತಮಗೆ ಕೊಟ್ಟುಬಿಡಬಾರದೆ ಎಂಬ ತವಕ ಅವರದು. ಹೇಗಿದ್ದರೂ ಕುದುರೆ ಮಾಂಸವು ತಿನ್ನಲು ಯೋಗ್ಯವಾಗುವಷ್ಟು ಬೆಂದಿದೆ. "ಆಹಾ, ಎಂತಹ ಪರಿಮಳ; ಬೇಯಿಸಿದ್ದು ಸಾಕು, ತೆಗೆಯಿರಿ; ಭಾಗ ಮಾಡಿ ಹಂಚಬಾರದೆ" ಎನ್ನುತ್ತಿದ್ದಾರೆ ಅವರು. ಅವರ ಈ ಮಹದಾಸೆಯೇ ಮಾಂಸವನ್ನು ಬೇಯಿಸುತ್ತಿರುವವರಿಗೆ ಪ್ರೋತ್ಸಾಹ ನೀಡುತ್ತದೆ (೧೨: ಯೇ ವಾಜಿನಂ ಪರಿಪಶ್ಯಂತಿ ಪಕ್ವಂ ಯ ಈಮಾಹುಃ ಸುರಭಿಃ ನಿರ್ಹರ ಇತಿ। ಯೇ ಚ ಅರ್ವತಃ ಮಾಂಸಭಿಕ್ಷಾಂ ಉಪ ಆಸತೇ ಉತೋ ತೇಷಾಂ ಅಭಿಗೂರ್ತಿಃ ನಃ ಇನ್ವತು). ಅಷ್ಟೇ ಅವಸರ ದೇವತೆಗಳಿಗೂ ಇದ್ದೀತೆಂದು ಸಾಯಣ ಸೂಚಿಸುತ್ತಾನೆ. "ಬೇಗ ಹವಿಸ್ಸನ್ನು ನಮಗೆ ಅರ್ಪಿಸಬಾರದೆ ಎಂದು ಅವರು ಒಂಟಿಗಾಲಲ್ಲಿ ನಿಂತು ಕುಣಿಯುವಂತಾಗಿದ್ದಾರೆ." ಜಾನ್ ಸ್ಟೇನ್‌ಬೆಕ್‌ನ 'ದ ಗ್ರೇಪ್ಸ್ ಆಫ್ ರಾತ್' ಎಂಬ ಕಾದಂಬರಿ ಬಹಳ ಪ್ರಸಿದ್ಧವಾದುದು. ಅದರಲ್ಲಿ ಊರುಬಿಟ್ಟು ದೂರದ ಎಲ್ಲಿಗೋ ಹೋಗಿ ತಮ್ಮ ಅದೃಷ್ಟದ ಪರೀಕ್ಷೆ ಮಾಡಿಕೊಳ್ಳಬೇಕೆಂಬ ಉತ್ಸಾಹ ಇರುವ ಜನರ ಚಿತ್ರಣವಿದೆ. ಆಮೇಲೆ ಅವರು ನಿರಾಶೆಗೆ ತುತ್ತಾಗುತ್ತಾರೆಂಬುದು ಬೇರೆ ಮಾತು. ಆರಂಭದ ದಿನಗಳಲ್ಲಿ, ನಾಳೆ ಸಂಪತ್ತು ತಮ್ಮನ್ನು ಅರಸಿಕೊಂಡು ಬರುತ್ತದೆಂಬ ಭರವಸೆ ಅವರಿಗಿದೆ. ಅಂತಹ ಸಂದರ್ಭದಲ್ಲಿ ಒಂದು ಸಂಜೆ ಹಂದಿಯೊಂದನ್ನು ಕೊಂದು, ಬೇಯಿಸಿ, ಸಂಭ್ರಮಿಸುವ ಸೊಗಸಾದ ಚಿತ್ರಣವನ್ನು ಸ್ಟೇನ್‌ಬೆಕ್ ನೀಡಿದ್ದಾನೆ. ಋಗ್ವೇದದ "ಕುದುರೆ" ಸೂಕ್ತದಲ್ಲಿನ ಸಂಭ್ರಮ ಅದಕ್ಕೆ ಕಡಿಮೆಯಾದುದೇನಲ್ಲ. ಕುದುರೆಯನ್ನು ಸೀಳಿ ಅದರ ಮಾಂಸ ಬೇಯಿಸುವುದು ಸಾಮಾನ್ಯ ಚಟುವಟಿಕೆಯೆ? ಅದಕ್ಕೆ ಅದೆಷ್ಟು ಪನ್ನಾಂಗ! ಅಡಿಗೆ ಸಿದ್ಧವಾಗು ತ್ತಿರುವುದನ್ನು ನೋಡುತ್ತಿರುವವರಿಗೆ ಮಾಂಸ ಬೇಯುತ್ತಿರುವ ಬಾಂಡಲೆ ಅಥವಾ ಡಬರಿ, ಲೋಹದ ಇಕ್ಕುಳ, ಮುಚ್ಚಲು ಇರುವ ಹರಿವಾಣ, ಬೇಯುತ್ತಿರುವ ಮಾಂಸವನ್ನು ತೊಳಸಲು ಇರುವ ಕೋಲು, ಹೀಗೆ ಏನೆಲ್ಲಾ ಸಾಧನಗಳು ಕಾಣುತ್ತವೆ. ಅವನ್ನೆಲ್ಲಾ ನೋಡುತ್ತಿದ್ದಂತೆ ಅವರ ನಾಲಿಗೆಯ ಚಪಲವು ಎಲ್ಲೆ ಮೀರಿ ಹೆಚ್ಚಾಗುತ್ತಿದೆ (೧೩: ಯನ್ನೀಕ್ಷಣಂ ಮಾಂಸ್ಪಚನ್ಯಾ ಉಖಾಯಾ ಯಾ ಪಾತ್ರಾಣಿ ಯೂಷ್ಣ ಆಸೇಚನಾನಿ। ಊಷ್ಮಣ್ಯಾ ಅಪಿಧಾನಾ ಚರೂಣಾಂ ಅಂಕಾಃ ಸೂನಾಃ ಪರಿ ಭೂಷಂತಿ ಅಶ್ವಂ॥). ಆ ಅಡಿಗೆಯ ಸಾಧನಗಳೆಲ್ಲಾ ಕುದುರೆಗೆ ಕಾಂತಿಯನ್ನು ನೀಡುವ ಆಭರಣಗಳಂತೆ ಅವರಿಗೆ ತೋರಿರಬೇಕು! ಇನ್ನೂ ಒಂದು ವಿಚಾರವಿದೆ: ಮಾಂಸವನ್ನು ಯಜ್ಞದಲ್ಲಿ ದೇವತೆಗಳಿಗೆ ಹವಿಸ್ಸನ್ನಾಗಿ ನೀಡುವುದಷ್ಟೇ ಅಂದಿನ ಪದ್ಧತಿಯಾಗಿದ್ದಿದ್ದರೆ ಪಾಕಸ್ಥಾನವನ್ನು ಸುತ್ತುವರಿದು ನಿಂತಿದ್ದವರ ಬಾಯಲ್ಲಿ ನೀರೇಕೆ ಊರಬೇಕಾಗಿತ್ತು! ಆದಾಗ್ಯೂ ದೇವತೆಗೆ ಅರ್ಪಿತವಾಗುವುದು ಕುದುರೆಯ ಮಾಂಸವಷ್ಟೇ ಅಲ್ಲ; ಅದೆಲ್ಲಿಂದ ಬಂದಿತೋ ಆ ಜಾಗ, ಅದು ವಿಶ್ರಮಿಸುತ್ತಿದ್ದ ಜಾಗ, ಅದು ಉರುಳಾಡುತ್ತಿದ್ದ ಜಾಗ, ಅದರ ಕಾಲುಗಳನ್ನು ಕಟ್ಟಿಹಾಕಲು ಬಳಕೆಯಾಗುತ್ತಿದ್ದ ಹಗ್ಗ, ಅದು ಕುಡಿಯುತ್ತಿದ್ದ ನೀರು, ತಿನ್ನುತ್ತಿದ್ದ ಆಹಾರ, ಎಲ್ಲವೂ ಅದರೊಟ್ಟಿಗೆ ದೇವತೆಗಳ ಬಳಿಗೆ ಹೋಗಬೇಕು. ಅಂದರೆ, ತನ್ನ ಪರಿಸರವು ಯಥಾವತ್ತಾಗಿದೆಯೆಂಬ ಭಾವನೆಯು ಕುದುರೆಗೆ ಬರುವಂತಿರಬೇಕು. ದೇವತೆಗಳಿಗೆ ಸಮರ್ಪಣೆಯೆಂದರೆ ಹೀಗಿರಬೇಕೆಂಬ ದೃಷ್ಟಿ ಋಗ್ವೇದದ ಕವಿಯದು (೧೪: ನಿಕ್ರಮಣಂ ನಿಷದನಂ ವಿವರ್ತನಂ ಯಚ್ಚ ಪಡ್ಬೀಶಂ ಅರ್ವತಃ। ಯಚ್ಚ ಪಪೌ ಯಚ್ಚ ಘಾಸಿಂ ಜಘಾಸ ಸರ್ವಾ ತಾ ತೇ ಅಪಿ ದೇವೇಷು ಅಸ್ತು॥). ಕುದುರೆಯ ಮಾಂಸವನ್ನು ಸುಟ್ಟ ಮತ್ತು ಬೇಯಿಸಿದ ಜಾಗದಲ್ಲಿ ಹೊಗೆ ತುಂಬಿದ್ದಿರಬೇಕು, ಅದರ



## ಡಾ॥ ಜಿ. ಆರ್. ಅವರಿಗೆ ಕಾರಂತ ಪ್ರಶಸ್ತಿ

ನಾಡಿನ ಜನಪರ ಚಿಂತಕರೂ 'ಹೊಸತು' ಪತ್ರಿಕೆಯ ಸ್ಥಾಪಕ ಸಂಪಾದಕರೂ, ಪ್ರಸ್ತುತ ಗೌರವ ಸಂಪಾದಕರೂ ಆಗಿರುವ ಡಾ॥ ಜಿ. ರಾಮಕೃಷ್ಣ ಅವರನ್ನು ಡಾ॥ ಕೋಟ ಶಿವರಾಮ ಕಾರಂತ ಪ್ರತಿಷ್ಠಾನವು 'ಶಿವರಾಮ ಕಾರಂತ ಪ್ರಶಸ್ತಿ'ಗೆ ಆಯ್ಕೆ ಮಾಡಿದೆ. ಡಾ॥ ಜಿ. ಆರ್. ಅವರಿಗೆ 'ಹೊಸತು' ಬಳಗದ ಅಭಿನಂದನೆಗಳು.

ವಾಸನೆಯು ಬೆಂಕಿಗೂ ತಗುಲಿರಬಹುದು; ಆದರೆ ಅದರಿಂದ ಕುದುರೆಯು ಸಿಡಿದು ಹೋಗಬಾರದು; ಅಂತೆಯೇ, ಉಜ್ವಲವಾಗಿ ಕಾಣುತ್ತಿರುವ ಬಾಣಲೆಯು ದಟ್ಟವಾಸನೆಯಿಂದಾಗಿ ಒಡೆದು ಚೂರುಚೂರಾಗಬಾರದು. ದೇವತೆಗಳು ಸ್ವೀಕರಿಸುವುದು ಪ್ರೀತಿಯಿಂದ, ಸಮಭಾವದಿಂದ, ವಿಧಿಗೆ ಅನುಸಾರವಾಗಿ, ಸಮರ್ಪಿಸಿದ ಕುದುರೆಯನ್ನು ಮಾತ್ರ ಎಂಬುದು ಕವಿಯ ಅನಿಸಿಕೆ (೧೫: ...ಇಷ್ಟಂ ವೀತಂ ಅಭಿಗೂರ್ತಂ ವಷಟ್‌ಕೃತಂ ತಂ ದೇವಾಸಃ ಪ್ರತಿ ಗೃಭ್ಣಂತಿ ಅಶ್ವಂ ॥). ಕುದುರೆಯ ಮೇಲೆ ಹಾಸಿದ್ದ ಬಟ್ಟೆ, ಚಿನ್ನದ ಒಡವೆಗಳು, ಲಗಾಮು, ಪಾದಬಂಧನಗಳು, ಎಲ್ಲವನ್ನೂ ದೇವತೆಗಳ ಸಂತೃಪ್ತಿಗಾಗಿ ಸಮರ್ಪಿಸಲಾಗುತ್ತದೆ (೧೬). ಮುಂದಿನ ಮಂತ್ರವು ಕುದುರೆಗೆ ಸಾಂತ್ವನ ಹೇಳುವಂಥದು : "ಅದರ ಮೇಲೆ ಸವಾರಿ ಮಾಡುವಾಗ ಅದನ್ನು ಹುರಿದುಂಬಿಸಲು ಹಿಮ್ಮಡಿಯಿಂದ ಅಥವಾ ಚಾಟಿಯಿಂದ ಕುದುರೆಗೆ ತ್ರಾಸ ನೀಡಿರಬಹುದು. ಅದರಿಂದ ಅದಕ್ಕೆಷ್ಟು ನೋವಾಗಿದ್ದೀತು ! ಅದನ್ನೆಲ್ಲಾ ಅಂತ್ಯಗೊಳಿಸುತ್ತೇನೆ." ಹೇಗೆ ಯಜ್ಞವು ಮುಗಿದ ನಂತರ ಹವಿಸ್ಸು ಇತ್ಯಾದಿಗಳನ್ನು ಅರ್ಪಿಸಲು ಬಳಸಲಾಗಿದ್ದ ಮರದ ಸೌಟನ್ನು ಸಹ ಅರ್ಪಿಸಲಾಗಿಬಿಡುತ್ತದೋ ಹಾಗೆ ಕುದುರೆಯ ನೋವಿಗೆ ಅಂತ್ಯವನ್ನು ಹಾಡುತ್ತಾನೆ ಕವಿ (೧೭ : ಯತ್ ತೇ ಸಾದೇ ಮಹಸಾ ಶೂಕೃತಸ್ಯ ಪಾರ್ಷ್ಣ್ಯಾ ವಾ ಕಶಯಾ ವಾ ತುತೋದ। ಸ್ರುಚೇವ ತಾ ಹವಿಷೋ ಅಧ್ವರೇಷು ಸರ್ವಾ ತಾ ತೇ ಬ್ರಹ್ಮಣಾ ಸೂದಯಾಮಿ). ಸತ್ತ ಕುದುರೆಗೆ ಸಾಂತ್ವನದಿಂದ ಏನೂ ಆಗಬೇಕಾಗಿಲ್ಲ, ಆದರೆ ಬದುಕಿದ್ದಾಗ ಅದಕ್ಕೆ ತ್ರಾಸ ನೀಡಿದ್ದುದಕ್ಕೆ ಪಶ್ಚಾತ್ತಾಪಪಡುವುದು ನಿಜಕ್ಕೂ ಮನನೀಯವಾಗಿದೆ. ಅದನ್ನು ಹಿಂಸಿಸಿರುವುದು ಮನಸ್ಸಿಗೆ ಬಾಧೆಯಾಗಿ ಉಳಿದಿದೆ. ಆದ್ದರಿಂದ ಕೊನೆಯಲ್ಲಿ ತನಗೆ ಪ್ರಾಯಶ್ಚಿತ್ತವೋ ಎನ್ನುವಂತೆ ಕವಿಯು ಕುದುರೆಗೆ ಶುಭವನ್ನು ಕೋರುತ್ತಾನೆ, ನೋವು ಬಾಧಿಸದಿರಲೆಂದು ಆಶಿಸುತ್ತಾನೆ. ಈ ಸಂದರ್ಭದಲ್ಲಿ, ಕುದುರೆಗೆ ೩೪ ಪಕ್ಕೆಲುಬುಗಳಿವೆಯೆಂದು ದಾಖಲಿಸಲಾಗಿದೆ. ಅದನ್ನು ಕೌಶಲ್ಯದಿಂದ, ಯಾವ ಶರೀರ ಭಾಗವನ್ನೂ ತುಂಡರಿಸದಂತೆ, ಭಿನ್ನಗೊಳಿಸಿರುವುದಾಗಿ ಭಾವಿಸಲಾಗಿದೆ ಕೂಡ (೧೮ : ... ಅಚ್ಛಿದ್ರಾ ಗಾತ್ರಾ ವಯುನಾ ಕೃಣೋತ...). ಆ ಎಲ್ಲ ಶರೀರ ಭಾಗಗಳನ್ನೂ ಆಯಾ ಭಾಗದ ಹೆಸರನ್ನು ಹೇಳುತ್ತಾ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸಲಾಗುತ್ತದೆಂದು ನಿರೀಕ್ಷಿಸಲಾಗುತ್ತದೆ. ಯಜ್ಞದಲ್ಲಿ ಕೊಲ್ಲಲ್ಪಟ್ಟ ಪ್ರಾಣಿಗೆ ಹಿಂಸೆಯುಂಟಾಗುವುದಿಲ್ಲವೆಂಬ ಸಮಾಧಾನವನ್ನು ಕವಿಯು ತನಗೆ ತಾನು ಕೊಟ್ಟುಕೊಳ್ಳುತ್ತಾನೆ: "ನಿನ್ನ ಆತ್ಮವು ಸುಟ್ಟುಹೋಗದಿರಲಿ, ಕತ್ತಿಯು ನಿನ್ನ ಶರೀರದಲ್ಲಿ ಹೊಕ್ಕು ಉಳಿಯದಿರಲಿ. ಯಾವ ಅವಿವೇಕಿಯೂ ನಿನ್ನ ಶರೀರ ಭಾಗಗಳನ್ನು ಅತಿರೇಕದಿಂದ ತುಂಡರಿಸದಿರಲಿ" (೨೦ : ಮಾ ತ್ವಾ ತಪತ್ ಪ್ರಿಯ ಆತ್ಮಾ ಅಪಿಯಂತಂ ಮಾಸ್ವಧಿ ತಿಃ ತನ್ವಃ ಆ ತಿಷ್ಠಿಪತ್ ತೇ। ಮಾ ತೇ ಗೃಧ್ನುಃ ಅವಿಶಸ್ತಾ ಅತಿಹಾಯ ಛಿದ್ರಾ ಗಾತ್ರಾಣಿ ಅಸಿನಾ ಮಿಥೂ ಕಃ॥). ಕಡೆಯ ಎರಡು ಮಂತ್ರಗಳು ಹೀಗಿವೆ : "ಇಲ್ಲ, ನೀನಿಲ್ಲಿ ಮೃತನಾಗಿಲ್ಲ, ನಿನಗೆ ನೋವಾಗಿಲ್ಲ. ಸುಲಭ ಮಾರ್ಗದಲ್ಲಿ ನೀನು ದೇವತೆಗಳನ್ನು ಸೇರಿಕೊಳ್ಳುವೆ. ದ್ಯುಲೋಕದಲ್ಲಿ ನೀನು ಇಂದ್ರನ ಎರಡು ಕುದುರೆಗಳ ಸಹವಾಸವನ್ನು ಗಳಿಸುವೆ; ಮರುತ್ತುಗಳ ಕುದುರೆಗಳೂ ಅಲ್ಲಿವೆ, ಅಲ್ಲದೆ, ಅಶ್ವಿನಿ ದೇವತೆಗಳ ರಥಕ್ಕೆ ಕಟ್ಟುವ ಕತ್ತೆಯನ್ನು ಸಹ ಸೇರಿಕೊಳ್ಳುವೆ" (೨೧ : ನ ವಾ ಉ ಏತತ್ ಮ್ರಿಯಸೇ ನ ರಿಷ್ಯಸಿ ದೇವಾನ್ ಇತ್ ಏಷಿ ಪಥಿಭಿಃ ಸುಗೇಭಿಃ। ಹರೀ ತೇ ಯುಂಜಾ ಪೃಷತೀ ಅಭೂತಾಂ ಉಪ ಅಸ್ಥಾತ್ ವಾಜೀ ಧೂರಿ ರಾಸಭಸ್ಯ॥). ಹೀಗಾಗಿ, "ಈ ಅದ್ಭುತ ಕುದುರೆಯು ನಮಗೆ ಆಸರೆಯಾಗುವಂತಹ ಸಂಪತ್ತು ನೀಡಲಿ, ಗೋವುಗಳನ್ನು ನೀಡಲಿ, ಒಳ್ಳೆಯ ಕುದುರೆಗಳನ್ನು ನೀಡಲಿ, ಮಕ್ಕಳು – ಮರಿಗಳನ್ನು ನೀಡಲಿ. ಅದಿತಿಯು ನಮ್ಮನ್ನು ಪಾಪರಹಿತರನ್ನಾಗಿಸಲಿ, ಕುದುರೆಯು ನಮಗೆ ಕ್ಷಾತ್ರತ್ವವನ್ನು ದೊರಕಿಸಿಕೊಡಲಿ" (೨೨ : ಸುಗವ್ಯಂ ನೋ ವಾಜೀ ಸು ಅಶ್ವ್ಯಂ ಪುಂಸಃ ಪುತ್ರಾನ್ ಉತ ವಿಶ್ವಾಪುಷಂ ರಯಿಂ। ಅನಾಗಾಸ್ತ್ವಂ ನೋ ಅದಿತಿಃ ಕೃಣೋತು ಕ್ಷತ್ರಂ ನೋ ಅಶ್ವೋ ವನತಾಂ ಹವಿಷ್ಮಾನ್ ॥).

ಇದರ ಮುಂದಿನ ಸೂಕ್ತವೂ (೧.೧೬೩)ಯಜ್ಞದ ಅಶ್ವವನ್ನು ಕುರಿತಾದದ್ದೇ; ಆದರೆ ನಾವದರ ವಿಶದೀಕರಣಕ್ಕೆ ಹೋಗುವುದಿಲ್ಲ. ಆದರೆ ಒಂದು ಟಿಪ್ಪಣಿಯನ್ನು ಸೇರಿಸುವುದು ಅಪ್ರಾಸಂಗಿಕವಲ್ಲ: ಯಜ್ಞಗಳನ್ನು ಬುದ್ಧ ತೀವ್ರವಾಗಿ ವಿರೋಧಿಸಿದ. ಅದಕ್ಕೆ ಅವನ ಕಾರಣಗಳು ಹಲವು. ಕೆಲವು ಯಜ್ಞಗಳಲ್ಲಿ ಪ್ರಾಣಿವಧೆ ಯಾಗುತ್ತಿದ್ದುದೂ ಒಂದು ಕಾರಣ. ಅವನಿಗಿಂತಲೂ ತೀಕ್ಷ್ಣವಾಗಿ ಅದನ್ನು ವಿರೋಧಿಸಿದವರು ಲೋಕಾಯತರು ಅಥವಾ ಚಾರ್ವಾಕರು. ಅವರದೇ ಕೃತಿಗಳಾವುವೂ ನಮಗೆ ಲಭ್ಯವಾಗಿಲ್ಲ, ಆದರೆ ಅವರ ಅಭಿಪ್ರಾಯಗಳನ್ನು ಅಷ್ಟೇನೂ ಪ್ರಾಮಾಣಿಕವಾಗಿ ಪ್ರತಿಫಲಿಸದ ಮಾಧವಾಚಾರ್ಯನು ತನ್ನ "ಸರ್ವದರ್ಶನ ಸಂಗ್ರಹ"ದಲ್ಲಿ ಲೋಕಾಯತರದೆನ್ನಲಾದ ಕೆಲವು ಗಾಥೆಗಳನ್ನು ಉದ್ಧರಿಸಿದ್ದಾನೆ. ಅವುಗಳಲ್ಲಿ ಒಂದು ಹೀಗಿದೆ :

ಜ್ಯೋತಿಷ್ಟೋಮ ಯಾಗದಲಿ ಹತವಾದ ಪ್ರಾಣಿ
ಹೋಗುವುದಂತೆ ನೇರವಾಗಿ ಸ್ವರ್ಗಕ್ಕೆ !
ಹೌದೆ ? ಹಾಗಿದ್ದರೆ, ಯಾಗ ಮಾಡುವ ಮಹಾತ್ಮನೇ,
ನಿಮ್ಮಪ್ಪನನ್ನೇ ಬಲಿ ಕೊಡಬಾರದೇಕೆ ?

ಇದೆಲ್ಲಕ್ಕೂ ಒಂದು ಆಕ್ಷೇಪ ಸಾಧ್ಯ : ಇಷ್ಟಕ್ಕೂ ಕುದುರೆಯನ್ನು ಕುರಿತ ಸೂಕ್ತದಲ್ಲಿ (೧.೧೬೨) ಮಾಂಸದ ಬೇಯಿಸುವಿಕೆಯ ವಿವರಣೆಗಳಿವೆಯೇ ವಿನಾ ಅದನ್ನು ತಿನ್ನುವ ಪ್ರಸ್ತಾಪವಿಲ್ಲವಲ್ಲಾ, ಎಂದು. ಅದು ಸಮಾಧಾನ ನೀಡುವಂತಿದ್ದರೆ ಹಾಗೆಯೇ ಭಾವಿಸಿಕೊಳ್ಳಲು ಅಡ್ಡಿಯಿಲ್ಲ. ಆದರೆ ಈಗಲೂ ಶ್ರಾದ್ಧಕರ್ಮದ ಅಂತ್ಯದಲ್ಲಿ ಯಜಮಾನನು ಒಂದು ಪ್ರಶ್ನೆ ಕೇಳುತ್ತಾನೆ : "ಮಿಕ್ಕಿರುವ ಆಹಾರವನ್ನೇನು ಮಾಡಲಿ ?" (ಉಚ್ಛಿಷ್ಟಃ ಕಿಂ ಕ್ರಿಯತಾಂ). ಅದಕ್ಕೆ ಉತ್ತರ : "ಇಷ್ಟರೊಡನೆ ಅದನ್ನು ತಿನ್ನು" (ಇಷ್ಟೈಃ ಸಹ ಭುಂಜ್ಯತಾಂ). ಅಂಥದೇ ಪ್ರಶ್ನೋತ್ತರವು ಯಜ್ಞದ ಸಂದರ್ಭದಲ್ಲಿಯೂ ನಿರೀಕ್ಷಿತವೇ ಅಲ್ಲವೆ ?

ಇನ್ನೊಂದು ಪ್ರಶ್ನೆಯನ್ನೆತ್ತಿ ಉಪಸಂಹಾರ ಮಾಡೋಣ: ವೇದಕಾಲೀನ ಸಮಾಜದಲ್ಲಿ ಗೋಮಾಂಸ ಭಕ್ಷಣೆ ಇದ್ದಿತೆ, ಎಂಬುದು ಆ ಪ್ರಶ್ನೆ.

ಒಂದು ಶತಮಾನಕ್ಕೂ ಹೆಚ್ಚು ಕಾಲ ಇದರ ಚರ್ಚೆ ಬಿರುಸಾಗಿ ನಡೆದಿದೆ. ಮೊದಲಿಗೆ ಈ ಚರ್ಚೆಯಲ್ಲಿ ಭಾವೋದ್ರೇಕದ ಚಿಹ್ನೆಯೇನೂ ಇರಲಿಲ್ಲ; ಈಗಿನ ವಿದ್ವಾಂಸರು ಅದನ್ನು ಭಾವಪರವಶರಾಗದೆ ಚರ್ಚಿಸುವುದು ಅಪರೂಪ. ರಾಜೇಂದ್ರಲಾಲ್ ಮಿತ್ರ, ಪಿ. ವಿ. ಕಾಣೆ, ಆರ್. ಸಿ. ಮಜುಂದಾರ್, ಎ. ಬಿ. ಷಾ, ಗೋರಖಪುರದ ಗೀತಾ ಪ್ರೆಸ್ (ಲೇಖಕರ ಹೆಸರನ್ನು ಕೊಟ್ಟಿಲ್ಲ), ಡಿ. ಎನ್. ಝಾ ಮುಂತಾಗಿ ಈ ಚರ್ಚೆಯಲ್ಲಿ ಭಾಗವಹಿಸಿರುವವರು ನೂರಾರು ಮಂದಿ. ಮೊದಲೇ ಹೇಳಿದಂತೆ ಪ್ರಾಚೀನರ ಆಹಾರ ಪದ್ಧತಿ ಏನೇ ಆಗಿರಲಿ, ಅದನ್ನು ಗುರುತಿಸಿದರೆ ನಾವಿಂದು ಆ ಪದ್ಧತಿಯನ್ನು ಅನುಸರಿಸಬೇಕೆಂದೇನೂ ಇಲ್ಲ. ಆದರೆ ಇಂದಿನವರ ಆಹಾರ ಪದ್ಧತಿಗೆ ಪ್ರಾಚೀನರ ಪದ್ಧತಿಯು ಅಡ್ಡಿಯುಂಟುಮಾಡಲು ಸಹ ಸಾಧ್ಯವಿಲ್ಲ. ಒಂದಂತೂ ನಿಜ: ವಿಶ್ವದ ಎಲ್ಲ ಜನಾಂಗಗಳೂ ಆದಿಮ ನಾಗರಿಕತೆಯ ಹಂತದಿಂದ ಬಂದಿರುವಂಥವೇ ಆಗಿವೆ. ಬುಡಕಟ್ಟು ಜೀವನ ದಿಂದಲ್ಲದೆ ನಾಗರಿಕತೆಯ ಆವಿಷ್ಕಾರ ಬೇರಾವ ವಿಧಾನದಿಂದಲೂ ಆಗಿಬಂದಿಲ್ಲ ವೆಂಬುದಕ್ಕೆ ಮಾನವಶಾಸ್ತ್ರವು ನಿಷ್ಪಕ್ಷ ಆಧಾರಗಳನ್ನೊದಗಿಸಿದೆ. ಅಲೆಮಾರಿ ಜೀವನ, ಬೇಟೆ, ಪಶುಸಂಗೋಪನೆ, ಕೃಷಿ, ಇವೆಲ್ಲಾ ನಾಗರಿಕತೆಯ ವಿಕಾಸದ ವಿವಿಧ ಹಂತಗಳು. ಗ್ರಂಥಗಳಷ್ಟೇ ಪ್ರಾಚೀನ ಇತಿಹಾಸದ ಆಕರಗಳಲ್ಲ; ಉತ್ಖನನ ಶಾಸ್ತ್ರವೂ ಅಗಾಧ ಮಾಹಿತಿ ಒದಗಿಸು ವಂತಹ ಆಕರ. ಇವನ್ನಾಧರಿಸಿ ಸರಿ ಎನಿಸುವ ತೀರ್ಮಾನ ಕೈಗೊಳ್ಳಲು ಅಡ್ಡಿಯಿಲ್ಲ ಎನಿಸುತ್ತದೆ. ಬೇರೆಷ್ಟೋ ವಿಷಯಗಳ ಸಂದರ್ಭದಲ್ಲಿ ಇವೇ ಗ್ರಂಥಗಳನ್ನು ಮಾನ್ಯ ಮಾಡಿ ಇದೊಂದು ಸಂದರ್ಭದಲ್ಲಿ ಹಾಗೆ ಮಾಡಲಾಗದೆಂಬುದು ತಾರ್ಕಿಕವಲ್ಲ.

ಮಹಾಮಹೋಪಾಧ್ಯಾಯ, ಭಾರತ ರತ್ನ, ಪಿ. ವಿ. ಕಾಣೆಯವರು ಮಧುಪರ್ಕದ ವಿಧಾನವನ್ನು ಅವಲಂಬಿಸಿರುವುದಲ್ಲದೆ ಬೇರಿನ್ನೆಷ್ಟೋ ಆಧಾರಗಳನ್ನು ದಾಖಲಿಸಿದ್ದಾರೆ. ಅವುಗಳ ಆಶಯವನ್ನು ಅವರು ಮತ್ತು ಇತರರು ಸರಿಯಾಗಿ ಗ್ರಹಿಸಿಲ್ಲವೆಂಬುದು ಅವರ ವಿರೋಧಿಗಳ ವಾದ. ಮುಖ್ಯವಾಗಿ ಮೂರು ಅಂಶಗಳನ್ನು ಮಾತ್ರ ನಾವಿಲ್ಲಿ ಪ್ರಸ್ತಾಪಿಸುವ ಉದ್ದೇಶವಿದೆ:

(ಅ) ವೈದಿಕ ಸಾಹಿತ್ಯದಲ್ಲಿ "ಗೋಘ್ನ" ಎಂಬ ಪದವು ಹಲವೆಡೆ ಬಂದಿದೆ. ಅದರ ಅರ್ಥ "ಅತಿಥಿ" ಎಂದು; ಏಕೆಂದರೆ, ಅತಿಥಿಯು ಬಂದಿರುವಾಗ ಅವನ ಆತಿಥ್ಯಕ್ಕೆಂದು ಗೋವಿನ ಮಾಂಸ ನೀಡ ಲಾಗುತ್ತಿತ್ತು. ಭವಭೂತಿಯ 'ಉತ್ತರರಾಮಚರಿತ'ದಲ್ಲಿ ಈ ಪದ್ಧತಿಯನ್ನು ಸ್ಮರಿಸಲಾಗಿದೆ. ಅವನ ಕಾಲದಲ್ಲಿ ಆ ಪದ್ಧತಿ ಇದ್ದಿತೆಂದು ಅವನು ಹೇಳಿಲ್ಲ, ಆದರೆ ವಾಲ್ಮೀಕಿ ಆಶ್ರಮದ ಪದ್ಧತಿ ಅದಾಗಿತ್ತೆಂದು ಅವನು ಹೇಳಿರುವುದಂತೂ ಉಂಟು. ಋಗ್ವೇದದಲ್ಲಿ




"ಗೋಘ್ನ" ಎಂಬ ಪದ ಬಂದಿರುವುದು ಒಂದೇ ಬಾರಿ (೧.೧೧೪.೧೦: ಆರೇ ತೇ ಗೋಘ್ನಂ ಉತ ಪೂರುಷಘ್ನಂ ಕ್ಷಯದ್ವೀರ ಸುಮ್ನಮಸ್ಮೇ ತೇ ಅಸ್ತು।). ಇಲ್ಲಿ ಆ ಪದದ ಅರ್ಥ 'ಅತಿಥಿ' ಎಂದಲ್ಲ. "ಗೋ ಹನನವಾಗಲಿ, ಪುರುಷ ಹನನವಾಗಲಿ ನಮ್ಮಿಂದ ದೂರವಿರಲಿ" ಎಂಬರ್ಥ ಇಲ್ಲಿದೆ. "ಹನನವೂ ಆಗಬಹುದು, ಹನನದ ಸಾಧನವೂ ಆಗಬಹುದು, ಅವೆರಡೂ ನಮ್ಮ ಬಳಿಗೆ ಬರುವುದು ಬೇಡ" ಎಂದು ಸಾಯಣ ವ್ಯಾಖ್ಯಾನಿಸಿದ್ದಾನೆ. ಆದರೆ ಬೇರೆ ಕೆಲವೆಡೆ ಆ ಪದಕ್ಕೆ 'ಅತಿಥಿ' ಎಂಬರ್ಥವಿದೆಯೆಂಬುದು ನಿಜ. ಅದನ್ನು ಕಾಣೆ, ಕೋಲ್‌ಬ್ರೂಕ್, ಮಜುಂದಾರ್, ಮಿತ್ರ, ಮುಂತಾದವರೆಲ್ಲಾ ಅಂಗೀಕರಿಸಿದ್ದಾರೆ.

(ಆ) ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವ ಒಂದು ಮಾತಿದೆ: ವಿದ್ಯಾವಂತ, ಖ್ಯಾತಿವಂತ, ಇತ್ಯಾದಿ ಶ್ರೇಯಸ್ಸು ಪಡೆಯುವಂತಹ ಮಗನು ಜನಿಸಬೇಕೆಂದಿದ್ದರೆ ಒಬ್ಬ ವ್ಯಕ್ತಿ ಮತ್ತವನ ಪತ್ನಿಯು ಮಾಂಸಪೂರಿತ ಅನ್ನವನ್ನು ಬೆಣ್ಣೆಯ ಸಮೇತ ತಿನ್ನಬೇಕು; ಆ ಮಾಂಸವು ದಷ್ಟಪುಷ್ಟ ಎತ್ತಿನದಾಗಿರ ಬೇಕು ಇಲ್ಲವೆ ವಯಸ್ಸಾದ ಎತ್ತಿನದಾಗಿರಬೇಕು", ಎಂದು. "ಅದನ್ನು ತಿಂದವರಿಗೆಲ್ಲಾ ಖ್ಯಾತಿವಂತ ಮಕ್ಕಳಾಗಿಲ್ಲ; ಯೂರೋಪಿನ ಜನರಲ್ಲಿ ಬಹುಮಂದಿ ಅದನ್ನು ತಿಂದಿದ್ದಾರೆ, ಆದರೆ ಅವರಿಗೆಲ್ಲಾ ವೇದದಲ್ಲಿ ನಿಷ್ಣಾತರಾದ ಮಕ್ಕಳಾಗಿಲ್ಲ" ಎಂಬ ತಪ್ಪು ತರ್ಕವನ್ನು ಗೀತಾ ಪ್ರೆಸ್ ಪುಸ್ತಕವು ಮುಂದಿಟ್ಟಿದೆ. "ಸ್ವರ್ಗಕ್ಕೆ ಹೋಗಬೇಕೆಂದಿದ್ದರೆ ಜ್ಯೋತಿಷ್ಟೋಮ ಯಾಗ ಮಾಡಬೇಕು" ಎಂಬ ಮಾತು ವೈದಿಕ ಸಾಹಿತ್ಯದಲ್ಲಿದೆ, ಆದರೆ ಆ ಯಾಗ ಮಾಡಿದವರೆಲ್ಲಾ ಎಲ್ಲಿ ಹೋಗಿದ್ದಾರೆ ಎಂಬುದು ನಮಗೆ ತಿಳಿಯುವಂತಿಲ್ಲ. ನಾವು ಉಪನಿಷದ್ವಾಕ್ಯದ ಸತ್ಯಾಸತ್ಯತೆಯನ್ನು ವೈದ್ಯಕೀಯ ಸಾಧ್ಯತೆಯ ದೃಷ್ಟಿಯಿಂದ ಪರೀಕ್ಷಿಸುತ್ತಿಲ್ಲ; ಅಲ್ಲಿ ಗೋಹತ್ಯೆಯ ಪ್ರಸ್ತಾಪವಿದೆ ಮತ್ತು ಗೋಮಾಂಸ ಭಕ್ಷಣೆಯನ್ನು ಹೇಳಲಾಗಿದೆ ಎಂಬುದಷ್ಟೇ ಪ್ರಸ್ತುತ. ನಂತರದ ವೈದ್ಯಕೀಯ ಗ್ರಂಥಗಳಲ್ಲಿ, ವಿಶೇಷತಃ ಚರಕ ಸಂಹಿತೆಯಲ್ಲಿ, ಶ್ವಾಸಕೋಶದ ಕ್ಷಯಕ್ಕೆ ಗೋಮಾಂಸವನ್ನು ಅತಿ ಉತ್ಕೃಷ್ಟ ಔಷಧಿಯೆಂದು ಸೂಚಿಸಲಾಗಿದೆ. ರೋಗಿಯು ಗೋಮಾಂಸ ತಿನ್ನುವಂಥವನಲ್ಲದಿದ್ದರೆ ಅದನ್ನು ಚೆನ್ನಾಗಿ ಅಡಿಗೆ ಮಾಡಿ ಬೇರಾವುದೋ ಮಾಂಸದ ಹೆಸರಿನಲ್ಲಿ ತಿನ್ನಿಸುವುದು ನಿಷ್ಠಾವಂತ ವೈದ್ಯನ ಕರ್ತವ್ಯವೆಂದು ಕೂಡ ಚರಕ ಸಂಹಿತೆ ಹೇಳಿದೆ. ಕಾಲಿದಾಸನು ತನ್ನ 'ಮೇಘಸಂದೇಶ'ದಲ್ಲಿ ಚರ್ಮಣ್ವತೀ ನದಿಯ ಬಗ್ಗೆ ಪ್ರಸ್ತಾಪ ಮಾಡಿದ್ದಾನೆ. ಅದು 'ರಂತಿದೇವನ ಕೀರ್ತಿಯನ್ನು ಘೋಷಿಸುತ್ತಿದ್ದಂತೆ' ತೋರುತ್ತಿದ್ದಿತಂತೆ. ಸಹಸ್ರಾರು ಗೋವುಗಳನ್ನು ಕೊಂದು ಅವುಗಳ ಚರ್ಮವನ್ನು ನದಿಗೆ ತುಂಬಿದ್ದುದರಿಂದ ನದಿಗೆ 'ಚರ್ಮಣ್ವತೀ' ಎಂಬ ಹೆಸರು ಬಂದಿದ್ದಿತಂತೆ. ನದಿಗೇಕೆ ಚರ್ಮ ತುಂಬಿದನೋ ತಿಳಿಯದು; ಅಂತೆಯೇ ಗೋವುಗಳನ್ನು ಕೊಂದಿದ್ದು ಏಕೆಂಬುದೂ ತಿಳಿಯದು. ಅವುಗಳ ಚರ್ಮಕ್ಕಾಗಿಯಂತೂ ಅಲ್ಲ!

(ಇ) ಅತಿಥಿಗಳನ್ನು ಸ್ವಾಗತಿಸುವಾಗ 'ಮಧುಪರ್ಕ'ವನ್ನು ನೀಡುವುದು ಕಡ್ಡಾಯ ಪದ್ಧತಿಯಾಗಿದ್ದಿತೆಂದು ತಿಳಿದುಬರುತ್ತದೆ. ಮಧುಪರ್ಕದಲ್ಲಿ ಗೋಮಾಂಸ ಇರುತ್ತದೆಂದು ಕಾಣೆ ಕೆಲವು ಆಧಾರಗಳನ್ನು ನೀಡಿ ಸಮರ್ಥಿಸಿದ್ದಾರೆ. ಅವರು ನೀಡಿರುವ ಆಧಾರಗಳ ಅರ್ಥ ಅದಲ್ಲವೆಂದು ಅವರ ವಿರೋಧಿಗಳು ಆಕ್ಷೇಪ ವೆತ್ತಿದ್ದಾರೆ. ಜಿಜ್ಞಾಸೆ ಬಂದಿರುವುದು ಆಶ್ವಲಾಯನ ಗೃಹ್ಯಸೂತ್ರದ ಒಂದು ವಾಕ್ಯದಿಂದಾಗಿ. ಪಾರಸ್ಕರ ಗೃಹ್ಯಸೂತ್ರದಲ್ಲೂ ಅದೇ ಅಭಿಪ್ರಾಯವಿದೆಯೆಂಬುದು ಹೇಳಲಾಗಿದೆ. ವಾಕ್ಯ ಹೀಗಿದೆ: ನಾಮಾಂಸೋ ಮಧುಪರ್ಕೋ ಭವತಿ (೧.೨೪). ಅಂದರೆ, ಮಾಂಸವಿಲ್ಲದೆ ಮಧುಪರ್ಕ ಆಗುವುದಿಲ್ಲ, ಎಂದರ್ಥ. ನಿಜಕ್ಕೂ ಅದಕ್ಕೆ ಅದರ ವಿರೋಧಾರ್ಥವಿದೆಯೆಂದು ಆಕ್ಷೇಪಿಸುವವರ ವಾದ. ಋಗ್ವೇದದ ಸೂರ್ಯಾ ಸೂಕ್ತದಲ್ಲಿ (೧೦.೮೫) ವಿವಾಹ ಸಂದರ್ಭದಲ್ಲಿ ಅತಿಥಿಗಳಿಗೆ ಗೋಮಾಂಸದೂಟ ನೀಡಲಾಗುತ್ತದೆ ಎಂದು ಹೇಳಲಾಗಿದೆಯೆಂದು ಆ ಸೂಕ್ತದ ಚರ್ಚೆಯ ಸಂಬಂಧದಲ್ಲಿ ಈಗಾಗಲೆ ದಾಖಲಿಸಲಾಗಿದೆ. ಮಂತ್ರವು ಹೀಗಿದೆ: ಸೂರ್ಯಾಯಾಃ ವಹತುಃ ಪ್ರ ಅಗಾತ್ ಸವಿತಾ ಯಂ ಅವಾಸೃಜತ್। ಅಘಾಸು ಹನ್ಯಂತೇ ಗಾವಃ ಅರ್ಜುನ್ಯೋಃ ಪರಿ ಉಹ್ಯತೇ॥ (೧೦.೮೫.೧೩). "ಹನ್ಯಂತೇ" ಎಂಬುದು ಸರಳವಾದ ಪದ; 'ಕೊಲ್ಲಲ್ಪಡುತ್ತವೆ' ಎಂಬುದು ಅದರರ್ಥ. ಸಾಯಣನಿಗೆ ಅದು ಮುಜುಗರದ ಸಂಗತಿಯಾದ್ದರಿಂದ ಅದಕ್ಕೆ "ದಂಡ್ಯೈಃ ತಾಡ್ಯಂತೇ ಪ್ರೇರಣಾರ್ಥಂ" ಎಂಬ ಅರ್ಥವನ್ನು ನೀಡಿದ್ದಾನೆ. ಅಂದರೆ, "ಅವನ್ನು ಮುಂದಕ್ಕೆ ಹೋಗಲು ಪ್ರೇರೇಪಿಸಲು ದೊಣ್ಣೆಯಿಂದ ಹೊಡೆಯಲಾಗುತ್ತದೆ" ಎಂದರ್ಥ. ಇಡೀ ಸಂಸ್ಕೃತ ಸಾಹಿತ್ಯದಲ್ಲಿ 'ಹನ್ಯಂತೇ' ಎಂಬುದಕ್ಕೆ ಈ ಅರ್ಥ ಇರುವುದು ಇದೊಂದೇ ಸಂದರ್ಭದಲ್ಲಿ ಎಂದು ಸಾಯಣನು ಸೇರಿಸಬೇಕಾಗಿತ್ತು! ಏಕೆಂದರೆ ಆ ಅರ್ಥ ಎಲ್ಲೂ ಇಲ್ಲ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧ ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

“ಗತಿಸಿಹೋದ ಯುಗದ ಪಳೆಯುಳಿಕೆಗಳಾದ ಸನಾತನಿಗಳ ಬುಡಕಟ್ಟು ತಮ್ಮ ಕೊನೆಯ ದಿನಗಳನ್ನು ಎಣಿಸುತ್ತಿದೆ. ಅವರು ತೋರುತ್ತಿರುವ ಕೋಪವೇ ಅವರಿಗೆ ಎದುರಾಗಿರುವ ಅಪಾಯದ ತೀವ್ರತೆಯ ಸೂಚನೆಯನ್ನು ನೀಡುತ್ತದೆ.” ಸನಾತನಿಗಳು ಎಂದರೆ ಎಲ್ಲ ಮತಧರ್ಮಗಳಲ್ಲೂ ಅಡಗಿರುವ ಸನಾತನಿಗಳು ಎಂದೇ ಭಾವಿಸಿದ್ದಾರೆ, ಜವಹರಲಾಲ್ ನೆಹರು.



# ನೆಹರು ದೇವರು ಧರ್ಮ

ಪ್ರತಿವರ್ಷ ನವೆಂಬರ್ ೧೪ರಂದು ನಾವು ಮಕ್ಕಳ ದಿನ ಆಚರಿಸುತ್ತೇವೆ. ತಪ್ಪಿಲ್ಲ. ಆದರೆ ಅದು ಚಾಚಾ ಎಂದು ಕರೆಯಲಾಗುವ ಸ್ವತಂತ್ರ ಭಾರತದ ಪ್ರಪ್ರಥಮ ಪ್ರಧಾನಿ ಜವಾಹರಲಾಲ್ ನೆಹರೂರವರ ಜನ್ಮದಿನ ಎಂಬ ಅಂಶವನ್ನೂ ಮರೆಯಬಾರದು. ದೆಹಲಿಯ ಶಾಂತಿವನಕ್ಕೆ ತೆರಳಿ ಮತ್ತೊಮ್ಮೆ ಅವರ ಸಮಾಧಿಯ ಮೇಲೆ ಹೂಗಳನ್ನು ಚೆಲ್ಲಿ ಬಂದರೆ ನಮ್ಮ ಕೆಲಸ ಮುಗಿಯಿತು ಎಂದುಕೊಂಡರೆ ಈ ದೇಶದ ಕಥೆಯೂ ಮುಗಿದಂತೆ.

ಭಾರತ ಸಂವಿಧಾನದ ಭಾಗ ೪-ಎ, ಅನುಚ್ಛೇದ ೫೧ ಎ(ಎಚ್)ರಲ್ಲಿ, ವೈಜ್ಞಾನಿಕ ಮನೋವೃತ್ತಿ, ಮಾನವಹಿತಾಸಕ್ತಿ, ಜಿಜ್ಞಾಸೆ ಮತ್ತು ಸುಧಾರಣೆಯ ಸ್ವಭಾವ ಬೆಳೆಸಿಕೊಳ್ಳುವುದನ್ನು ಭಾರತೀಯ ನಾಗರಿಕನ ಮೂಲಭೂತ ಕರ್ತವ್ಯವೆಂಬಂತೆ ವಿಧಿಸಿದೆ. ಆದರೂ, ವಿಧಾನಸೌಧ ದಲ್ಲಿಯೇ ಸರ್ವವಿಘ್ನ ನಿವಾರಣೆಗಾಗಿ ಹೋಮ ಮಾಡಿಸುವಂಥ, ಸರ್ಕಾರಿ ಬಂಗಲೆಗಳನ್ನು ಜನರ ಕೋಟ್ಯಾಂತರ ರೂಪಾಯಿ ಖರ್ಚಿನಲ್ಲಿ, ಆದರೆ ವಾಸ್ತು ಪಂಡಿತರ ಮರ್ಜಿಗಾಗಿ ಮತ್ತೆ ಮತ್ತೆ ಬದಲಾಯಿಸುವಂಥ, ಅಧಿಕಾರ ವಹಿಸಿ ಕೊಳ್ಳಲು, ಅಷ್ಟೇ ಏಕೆ, ಅಧಿಕಾರವನ್ನು ಕಳೆದುಕೊಂಡು ಜೈಲಿಗೆ ಹೋಗಲೂ ಮುಹೂರ್ತವನ್ನು ನೋಡುವಂಥ ನಾಯಕ ರಿರುವ ಇಂದಿನ ದುಸ್ಥಿತಿಯಲ್ಲಿ, ಜವಾಹರಲಾಲ್ ನೆಹರುರವರ ವ್ಯಕ್ತಿತ್ವದಲ್ಲಿ ನನಗೆ ಮುಖ್ಯವಾಗಿ ಕಾಣುವುದು ಅವರ ವೈಜ್ಞಾನಿಕ ಮನೋವೃತ್ತಿ. ಅದರ ಕಡೆ ಗಮನಹರಿಸುವುದು ಇಂದು ಅತ್ಯಾವಶ್ಯಕ ಎನ್ನಿಸಿತು. ‘ಸ್ವಾತಂತ್ರ್ಯದೆಡೆಗೆ’ ಎಂಬ ಅವರ ಆತ್ಮಚರಿತ್ರೆ, ಹಾಗೂ ಮುಖ್ಯವಾಗಿ ಗಾಂಧೀಜಿಯವರಿಗೆ ಬರೆದ ಹಲವು ಪತ್ರಗಳಲ್ಲಿ ನೆಹರುರವರ ಪ್ರಖರ ವೈಚಾರಿಕತೆಯು ವ್ಯಕ್ತವಾಗುತ್ತದೆ.

ಜವಾಹರಲಾಲ್ ನೆಹರುರವರು ಮೋತೀಲಾಲ್ ನೆಹರು ಮತ್ತು ಸ್ವರೂಪ್‌ರಾಣಿಯವರ ಮಗನಾಗಿ ನವೆಂಬರ್ ೧೪, ೧೮೮೯ರಲ್ಲಿ, ಉತ್ತರ ಪ್ರದೇಶದ ಅಲಹಾಬಾದ್‌ನಲ್ಲಿ, ಕಾಶ್ಮೀರಿ ಪಂಡಿತರ ಕುಟುಂಬದಲ್ಲಿ ಜನಿಸಿದರು. ತಾಯಿ ಸ್ವರೂಪ್‌ರಾಣಿ ಮಾತ್ರ ಧಾರ್ಮಿಕ ನಂಬಿಕೆಗಳನ್ನು, ಹಿಂದೂ-ಕಾಶ್ಮೀರಿ ಬ್ರಾಹ್ಮಣ ಸಂಪ್ರದಾಯವನ್ನು ಅನುಸರಿಸುತ್ತಲೇ ಬಂದಿದ್ದರು. ಮಗ ಜವಾಹರನ ಮೇಲೂ ಇವುಗಳನ್ನು ಹೇರುತ್ತಿದ್ದರು. ತಂದೆ ಮೋತೀಲಾಲರಿಗೆ ಧರ್ಮದಲ್ಲಿ ಹೇಳಿಕೊಳ್ಳುವಂಥ ನಂಬಿಕೆಯೇನೂ ಇರಲಿಲ್ಲ; ರಾಜಕಾರಣದಂತೆ ಧರ್ಮ, ದೇವರ ಕುರಿತು ಅವರದು ಉದಾರವಾದಿ ಧೋರಣೆ. ಹಾಗಂತ ನಾಸ್ತಿಕರೂ ಆಗಿರಲಿಲ್ಲ. ಜವಾಹರರಿಗೆ ತಂದೆಯೇ ಮಾದರಿ. ಇಂಗ್ಲೆಂಡಿನ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ವಿಜ್ಞಾನ ಪದವಿ, ನಂತರ ಬ್ಯಾರಿಸ್ಟರ್ ಪದವಿ. ನೆಹರು ಆಗಲೇ ಯುರೋಪ್‌ನಲ್ಲಿ ಪ್ರಚಲಿತವಿದ್ದ ಸಮಾಜವಾದಿ ಮತ್ತು ಉದಾರವಾದಿ ರಾಜಕೀಯ ಧೋರಣೆಗಳಿಂದ ಪ್ರಭಾವಿತರಾಗಿದ್ದರು. ಬರಬರುತ್ತಾ ಅವರು ಧರ್ಮ, ದೇವರುಗಳ ವಿಚಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡರಷ್ಟೇ ಅಲ್ಲ, ಅವುಗಳನ್ನು ಬಹಳ ಟೀಕಾತ್ಮಕ ದೃಷ್ಟಿಯಿಂದ ನೋಡುತ್ತಿದ್ದರು.

ಒಂದು ಕಡೆ ಅವರೆನ್ನುತ್ತಾರೆ :

“ಧರ್ಮವು ನನ್ನ ಪರಿಚಯದ ನೆಲೆಯಲ್ಲ. ದೊಡ್ಡವನಾದ ಹಾಗೆ ನಾನು ಅದರಿಂದ ದೂರವೇ ಸರಿದಿದ್ದೇನೆ. ಅದರ ಜಾಗದಲ್ಲಿ ನನಗೆ ಬೇರೊಂದಿದೆ; ಅದು ಕೇವಲ ಬೌದ್ಧಿಕತೆ ಮತ್ತು ತರ್ಕಕ್ಕಿಂತ ಹೆಚ್ಚಿನದು; ಅದು ನನಗೆ ಶಕ್ತಿಯನ್ನು, ಭರವಸೆಯನ್ನು ನೀಡುತ್ತದೆ. ಅದೊಂದು ಅನಿರ್ವಚನೀಯವಾದ ಮತ್ತು ಅನಿರ್ದಿಷ್ಟವಾದ ಪ್ರೇರಣೆ; ಇದರಲ್ಲಿ ಧರ್ಮದ ಒಂದು ತಿಳಿ ಛಾಯೆಯೂ ಬೆರೆತಿರಬಹುದು; ಆದರೂ ಅದು ಧರ್ಮಕ್ಕಿಂತ ಸಂಪೂರ್ಣ ಭಿನ್ನ; ನಾನು ನನ್ನ ಮನಸ್ಸಿನ ರೀತಿನೀತಿಯನ್ನೇ ನಂಬುವುದನ್ನು ಅಭ್ಯಾಸ ಮಾಡಿಕೊಂಡಿದ್ದೇನೆ.”

“ಹಸಿವು, ಕೊಳಕು ಮತ್ತು ಅಜ್ಞಾನ ದೊಂದಿಗೆ ಬದುಕುವುದರಲ್ಲಿ ತೃಪ್ತಿ ಪಡುವಂತೆ ಮಾಡುವ ಯಾವುದೇ ಧರ್ಮವು ನನಗೆ ಬೇಕಾಗಿಲ್ಲ. ಈ ಭೂಮಿಯ ಮೇಲೆ ಹೆಚ್ಚು ಸೌಖ್ಯವಾಗಿ, ಹೆಚ್ಚು ನಾಗರಿಕರಾಗಿ ಬದುಕುವ ಸಾಮರ್ಥ್ಯ ತಮಗಿದೆ, ತಮ್ಮ ವಿಧಿಯ ಒಡೆಯರು ಮತ್ತು ಆತ್ಮದ ಅಧಿನಾಯಕರು ತಾವೇ ಎಂಬುದನ್ನು ಜನರಿಗೆ ಮನಗಾಣಿಸದೆ ಇರುವ ಯಾವುದೇ ಧಾರ್ಮಿಕ ಅಥವಾ ಇತರ ಬಗೆಯ ಕೇವಲ ನಂಬಿಕೆ ಗಳೊಂದಿಗೆ ನನಗೆ ಯಾವ ಸಂಬಂಧವೂ ಬೇಡ.”

ಅವರ ಆತ್ಮಚರಿತ್ರೆಯಲ್ಲಿ ನೆಹರು ಹೀಗೆ ಬರೆಯುತ್ತಾರೆ :
“ಭಾರತ ಅಥವಾ ಬೇರೆ ಕಡೆಗಳಲ್ಲಿ ಪ್ರಚಲಿತವಿರುವ, ಧರ್ಮವೆಂದು ಕರೆಯಲಾಗುವ ಸಾರ್ವಜನಿಕ ಪ್ರದರ್ಶನವು, ಅಥವಾ ಸಂಘಟಿತ ಧರ್ಮವು ನನ್ನಲ್ಲಿ ಭಾರೀ ದಿಗಿಲನ್ನು ತುಂಬಿದೆ, ಹಲವು ಬಾರಿ ನಾನದನ್ನು ಖಂಡಿಸಿದ್ದೇನೆ ಮತ್ತು ನಾನದನ್ನು ಸಂಪೂರ್ಣ ಉಚ್ಚಾಟಿಸಬಯಸುತ್ತೇನೆ. ಹೆಚ್ಚಿನಂಶ ಅದು ಅಂಧಶ್ರದ್ಧೆ ಮತ್ತು ಪುರೋಗಾಮಿತ್ವವನ್ನು, ವಿಚಾರಕ್ಕೆಡೆ ಕೊಡದ ಮತಾಂಧತೆ, ಮೂಢನಂಬಿಕೆ, ಗ್ರಾಮಿತ್ವ ಮತ್ತು ವೈಚಾರಿಕತೆಗೆ ಎಡೆಕೊಡದ ಶೋಷಣೆ ಮತ್ತು ಪಟ್ಟಭದ್ರ ಹಿತಾಶಕ್ತಿಗಳ ಸಂರಕ್ಷಣೆಯ ಧೋರಣೆಯನ್ನು ಪ್ರತಿನಿಧಿಸುತ್ತದೆ.”

ದೇವರ ಪರಿಕಲ್ಪನೆಯ ಬಗ್ಗೆಯೂ ನೆಹರುರವರಿಗೆ ಅಸಹನೆಯಿತ್ತು. ಆಗಿನ ಬ್ರಿಟಿಷ್ ಪ್ರಧಾನ ಮಂತ್ರಿ ರ್‍ಯಾಮ್ಸೆ ಮೆಕ್‌ಡೊನಾಲ್ಡ್ ಘೋಷಿಸಿದ ಕೋಮುವಾರಿನ ತೀರ್ಪನ್ನು ವಿರೋಧಿಸಿ ಗಾಂಧೀಜಿಯವರು ಯರವಾಡ ಜೈಲಿನಲ್ಲಿ ಆಮರಣಾಂತ ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದ್ದರು. ಇದಕ್ಕಿಂತಲೂ ಮಹತ್ವದ ಸಮಸ್ಯೆಗಳು ಎದುರಿಗಿರುವಾಗ ಗಾಂಧೀಜಿ ಆಮರಣಾಂತ ಉಪವಾಸದ ಅಸ್ತ್ರವನ್ನು ಇದಕ್ಕಾಗಿ

**ಎಂ. ಅಬ್ದುಲ್ ರೆಹಮಾನ್ ಪಾಷಾ**

ಬಳಸಬಾರದಾಗಿತ್ತು ಎಂಬ ಅಸಮಾಧಾನ ನೆಹರು ಅವರಿಗಿತ್ತು. ಪ್ರತಿಯೊಂದಕ್ಕೂ ದೇವರನ್ನು ಎದುರು ತಂದು ನಿಲ್ಲಿಸುತ್ತಿದ್ದ ಗಾಂಧೀಜಿಯವರ ವರ್ತನೆಯೂ ನೆಹರುರವರಿಗೆ ಕಿರಿಕಿರಿಯುಂಟುಮಾಡುತ್ತಿತ್ತು. ಆ ಸಂದರ್ಭದಲ್ಲಿ ನೈನಿ ಜೈಲಿನಲ್ಲಿದ್ದ ನೆಹರು ತಮ್ಮ ಪ್ರಿಸನ್ ಡೈರಿಯಲ್ಲಿ ಸೆಪ್ಟೆಂಬರ್ ೨೨, ೧೯೩೨ರಂದು ಹೀಗೆ ಬರೆದಿದ್ದಾರೆ : "ದೇವರನ್ನು ಕುರಿತ ಅವರ (ಗಾಂಧೀಜಿ) ಉಲ್ಲೇಖ – ದೇವರು ಇದನ್ನೆಲ್ಲ ಮಾಡುವಂತೆ ಪ್ರೇರಣೆ ನೀಡಿದ – ಉಪವಾಸದ ದಿನವನ್ನೂ ದೇವರೇ ಸೂಚಿಸಿದ... ಇತ್ಯಾದಿ ಅವರ ಮಾತುಗಳು ಬಹಳ ಕಿರಿಕಿರಿಯುಂಟುಮಾಡುತ್ತವೆ. ಎಂಥ ಕೆಟ್ಟ ಮೇಲ್ಪಂಕ್ತಿ ಇದು !"

ಗಾಂಧೀಜಿಯವರು ೧೯೩೩ರಲ್ಲಿ ಅಸ್ಪೃಶ್ಯತೆಯ ವಿರುದ್ಧ ವ್ಯವಸ್ಥಿತ ಹೋರಾಟವನ್ನು ಆರಂಭಿಸಿ, 'ಹರಿಜನ್' ಪತ್ರಿಕೆಯನ್ನು ಅದರ ಅಸ್ತ್ರವನ್ನಾಗಿ ಬಳಸಿಕೊಂಡಿದ್ದರು. ಹರಿಜನರಿಗೂ ಸಮಾನತೆಯನ್ನು ನೀಡಬೇಕು, ಅವರನ್ನೂ ದೇವಸ್ಥಾನಗಳಲ್ಲಿ ಬಿಟ್ಟುಕೊಳ್ಳಬೇಕು ಎಂಬ ಗಾಂಧೀಜಿಯವರ ಒತ್ತಾಯವನ್ನು ಸನಾತನಿಗಳು ತೀವ್ರವಾಗಿ ವಿರೋಧಿಸುತ್ತಿದ್ದರು, ಗಾಂಧೀಜಿಯವರನ್ನು ಇಂಥ 'ಉದ್ಧಟತನಕ್ಕಾಗಿ' ಶಪಿಸುತ್ತಿದ್ದರು. ಇದನ್ನು ಕುರಿತು ಗಾಂಧೀಜಿ ಬರೆದ ಪತ್ರವೊಂದಕ್ಕೆ ಮಾರ್ಚ್ ೩, ೧೯೩೩ರಂದು ಬರೆದ ಉತ್ತರದಲ್ಲಿ ಜವಾಹರಲಾಲ್ ನೆಹರು ಹೀಗೆ ಬರೆದಿದ್ದರು :

"ಗತಿಸಿಹೋದ ಯುಗದ ಪಳೆಯುಳಿಕೆಗಳಾದ ಸನಾತನಿಗಳ ಬುಡಕಟ್ಟು ತಮ್ಮ ಕೊನೆಯ ದಿನಗಳನ್ನು ಎಣಿಸುತ್ತಿದೆ. ಅವರು ತೋರುತ್ತಿರುವ ಕೋಪವೇ ಅವರಿಗೆ ಎದುರಾಗಿರುವ ಅಪಾಯದ ತೀವ್ರತೆಯ ಸೂಚನೆಯನ್ನು ನೀಡುತ್ತದೆ." ಸನಾತನಿಗಳು ಎಂದರೆ ಎಲ್ಲ ಮತಧರ್ಮಗಳಲ್ಲೂ ಅಡಗಿರುವ ಸನಾತನಿಗಳು ಎಂದೇ ಭಾವಿಸಿದ್ದಾರೆ, ಜವಹರಲಾಲ್ ನೆಹರು.

ವಿಪರ್ಯಾಸದ ಸಂಗತಿಯೆಂದರೆ ಧಾರ್ಮಿಕ ಅಂಧಶ್ರದ್ಧೆ ನಶಿಸಿಹೋಗುವ ಬದಲಿಗೆ ಅದು ಇಂದು ಇನ್ನೂ ಹೆಚ್ಚಾಗಿದೆ, ಅನೇಕ ರೂಪಗಳಲ್ಲಿ ವಿಜೃಂಭಿಸುತ್ತಿದೆ. ಇದಕ್ಕೆ ಯಾವ ಧರ್ಮವೂ ಅಪವಾದವಲ್ಲ. ಜಾತ್ಯತೀತ ಜನತಂತ್ರವನ್ನು ಒಪ್ಪಿಕೊಂಡ ನಂತರವೂ ನಾವು ಧರ್ಮವನ್ನು ಕುರಿತು ತಾಳಿದ ಬೇಜವಾಬ್ದಾರಿಯುತ ಧೋರಣೆಯಿಂದ ಧರ್ಮವೇ ಇಂದು ನಮ್ಮ ಪ್ರಗತಿಗೆ, ದೇಶದ ಸೌಹಾರ್ದಕ್ಕೆ, ಐಕ್ಯತೆಗೆ ಮಾರಕವಾಗಿದೆ. "ಅಂಧಶ್ರದ್ಧೆ ಮತ್ತು ತರ್ಕಬಾಹಿರ ಮನೋವೃತ್ತಿಯ ಗುಲಾಮರಾಗಿರುವ ಜನ ಅಥವಾ ದೇಶವು ಎಂದಿಗೂ ಪ್ರಗತಿ ಹೊಂದಲು ಸಾಧ್ಯವಿಲ್ಲ." ಎಂಬುದು ನೆಹರುರವರ ಅಭಿಮತವಾಗಿತ್ತು.

ಇದಕ್ಕೆ ಪರಿಹಾರವೇನು ? ಧರ್ಮವೇ ಇಲ್ಲದ ಕಾಲ, ದೇಶವಿಲ್ಲ. ಒಂದು ದೇಶದ ಜನ ತಮ್ಮ ಸೌಖ್ಯ, ಸಂತೋಷ, ಪ್ರಗತಿಗಾಗಿ ಅನುಸರಿಸುವ ಮಾರ್ಗವೂ ಅವರ, ಆ ದೇಶದ ಧರ್ಮವಾಗಬಹುದು; ಅದೊಂದು ಪ್ರಗತಿಪರ, ಆಧುನಿಕ ಧರ್ಮವಾಗಬಹುದು. ಮತ್ತೆ ಅದೇ ಧರ್ಮ ಒಂದೆಡೆ ನಿಂತು ಕೊಳೆತ ನೀರಾಗುವ ವರೆಗೆ ಬಹಳ ಕ್ರಿಯಾಶೀಲವಾಗಿರುತ್ತದೆ. ತನ್ನ ಕ್ರಿಯಾಶೀಲತೆಯನ್ನು ಕಳೆದುಕೊಂಡು ಅಸಂಗತವಾದ ಹಿಂದೂಧರ್ಮದ ಬಗ್ಗೆ ನೆಹರು ಜಿಜ್ಞಾಸೆ ಹೀಗಿದೆ :

"ಬಹಳ ಕಾಲ ಹರಿಯದೆ ನಿಂತಿರುವ ವಸ್ತುವನ್ನು ಕಲಕಿದರೆ ದುರ್ವಾಸನೆ ಹೊರಡುವುದು ಸಹಜ; ಹಿಂದೂ ಸಮಾಜ ರಚನೆ ಬಹಳ ಕಾಲದಿಂದ ನಿಂತು ನಾರುತ್ತಿದೆ. ನನಗೆ ತೋಚುವ ಪರಿಹಾರವೆಂದರೆ ಜಡ್ಡುಗಟ್ಟಿದ ಈ ಹೊಂಡವನ್ನು ಸಂಪೂರ್ಣವಾಗಿ ಖಾಲಿ ಮಾಡಿ, ಸೂರ್ಯನ ಬಿಸಿಲಿಗೆ ಒಡ್ಡಿ ಅದರ ತಳ ಮತ್ತು ಬದಿಗಳನ್ನು ಶುದ್ಧೀಕರಿಸಬೇಕು. ನಂತರ ತಂಪಾದ ಶುದ್ಧ ನೀರನ್ನು ಅದರಲ್ಲಿ ತುಂಬಬೇಕು; ಅದು ಮತ್ತೆ ನಿಂತು ಪಾಚಿಕಟ್ಟದಂತೆ, ನಿರಂತರ ಹರಿಯುತ್ತಿರುವಂತೆ ವ್ಯವಸ್ಥೆ ಮಾಡಬೇಕು."

ಗಾಂಧೀಜಿಯವರು ಒಮ್ಮೆ ಹೇಳುತ್ತಾರೆ : "ನಾನು ಕ್ರಿಶ್ಚಿಯನ್, ಇಸ್ಲಾಮ್ ಮತ್ತು ಇತರ ಧರ್ಮಗಳನ್ನೂ ಹಿಂದೂಧರ್ಮದ ಮೂಲಕ ಪ್ರೀತಿಸುತ್ತೇನೆ" – ಎಂದು. ಧರ್ಮಗಳ ಕುರಿತು ತೋರಬೇಕಾದ ಸಹಿಷ್ಣುತೆಯನ್ನು ಅವರು ಪ್ರತಿಪಾದಿಸಲು ನೋಡುತ್ತಾರೆ. ಆದರೆ ಈ ನಿಲುವನ್ನು ನೆಹರು ಒಪ್ಪುವುದೇ ಇಲ್ಲ. ಇರುವುದೊಂದೇ ದೇವರು ಎಂದಾದರೆ ಒಂದೇ ದೇಶದಲ್ಲಿ ಇಷ್ಟೊಂದು ದೇವರು, ಇಷ್ಟೊಂದು ಧರ್ಮಗಳಿಗೇನು ಕೆಲಸ ? ಗಾಂಧೀಜಿಯವರ ಮಾತಿಗೆ ಪ್ರತಿಕ್ರಿಯೆಯಾಗಿ ನೆಹರು ಹೇಳುತ್ತಾರೆ : "ನನ್ನಂಥವರು ಧಾರ್ಮಿಕ ಸಹಿಷ್ಣುತೆಯ ಬಗ್ಗೆ ಠೀವಿಯಿಂದ ಮಾತಾಡುವುದು ಸುಲಭ; ಏಕೆಂದರೆ ನನಗೆ ನನ್ನದೆಂದು ಹೇಳಿಕೊಳ್ಳುವ ಯಾವ ಧರ್ಮವೂ ಇಲ್ಲ." ಇನ್ನು ದೇವಸ್ಥಾನದಲ್ಲಿ ಪ್ರವೇಶಿಸುವ ವಿಚಾರ ಬಂದಾಗ, "ದೇವಸ್ಥಾನದ ನೂರು ಮೈಲು ಹತ್ತಿರಕ್ಕೂ ಸುಳಿಯುವ ಎಳ್ಳಷ್ಟೂ ಆಸೆ ನನಗಿಲ್ಲ. ನಾನು ಅಕಸ್ಮಾತ್ ಯಾವುದಾದರೂ ದೇವಾಸ್ಥಾನಕ್ಕೆ ಹೋದರೂ ಅದರ ವಾಸ್ತುವೈಭವ, ಶಿಲ್ಪಕಲಾ ಶ್ರೀಮಂತಿಕೆಯನ್ನು ಸವಿಯಲು ಹೋಗುತ್ತೇನಷ್ಟೆ !"

ಜಾತಿಗಳ ಬಗ್ಗೆ ನೆಹರುರವರಿಗೆ ಯಾವುದೇ ಗೌರವವಿಲ್ಲ, ಅವರು ನೀಡುವ ಗೌರವ ವ್ಯಕ್ತಿಗೆ. ಅವರ ಸಹೋದರಿ ಕೃಷ್ಣಾ ಗುಣೋತ್ತಮ್ (ರಾಜಾ) ಹುತೀಸಿಂಗ್ ಎಂಬುವವರನ್ನು ವರಿಸಬೇಕು ಎಂದು ನಿರ್ಣಯಿಸುತ್ತಾರೆ. ಆದರೆ ಧರ್ಮ, ಜಾತಿಯ ಬಗ್ಗೆ ಅತೀವ ಶ್ರದ್ಧೆಯಿರುವ ಅವರ ತಾಯಿ ಸ್ವರೂಪ್ ಅವರಿಗೆ ಇದು ತಳಮಳವನ್ನು ಉಂಟುಮಾಡುತ್ತದೆ. ಹುತೀಸಿಂಗ್ ಕಾಶ್ಮೀರೀನೂ ಅಲ್ಲ, ಬ್ರಾಹ್ಮಣನೂ ಅಲ್ಲ ಎಂಬುದು ಅವರ ಆತಂಕಕ್ಕೆ ಕಾರಣ. ಆದರೆ ಈ ವಿಚಾರವಾಗಿ ನೆಹರುರವರು ತಾಯಿಯ ನೆರವಿಗೆ ಬಾರದೆ ಅದು ಆಕೆಯ ವೈಯಕ್ತಿಕ ವಿಚಾರ, ನಿರ್ಣಯ ತೆಗೆದುಕೊಳ್ಳುವ ಹಕ್ಕು ಆಕೆಗಿದೆ ಎನ್ನುತ್ತಾರೆ. "ಆಚರಣೆಯಲ್ಲಿ ಹಳೆಯ ಸಂಪ್ರದಾಯದಿಂದ ಎಷ್ಟು ಅಂತರವಿಟ್ಟುಕೊಳ್ಳಲು ಸಾಧ್ಯವೋ ಅಷ್ಟರಮಟ್ಟಿಗೆ ನಾನದನ್ನು ಸ್ವಾಗತಿಸುತ್ತೇನೆ... ಒಬ್ಬ ವ್ಯಕ್ತಿ ಬ್ರಾಹ್ಮಣನೋ, ಅಬ್ರಾಹ್ಮಣನೋ ಅಥವಾ ಇನ್ಯಾರೋ ಎನ್ನುವುದರಲ್ಲಿ ನನಗೆ ಸ್ವಲ್ಪವೂ ಆಸಕ್ತಿಯಿಲ್ಲ. ಒಬ್ಬ ವ್ಯಕ್ತಿಯು ಮದುವೆಯಾಗುವುದು ಇನ್ನೊಬ್ಬ ವ್ಯಕ್ತಿಯನ್ನೇ ಹೊರತು, ಜಾತಿಯನ್ನೋ, ಸಮುದಾಯವನ್ನೋ ಅಲ್ಲ ಎಂಬುದು ಅವರ ಗಟ್ಟಿ ನಿಲುವು." ಈ ಒಂದು ಪತ್ರದಲ್ಲಿಯೇ ಅವರು ಮಾತನ್ನು ಮುಂದುವರಿಸಿ, ಅವರ ಬಂಧು ಬ್ರಜ್ ಲಾಲ್ ಅವರ ಮಗ ಹಂಗೇರಿಯನ್ ಹುಡುಗಿಯನ್ನು ಮದುವೆಯಾದ ಸಂದರ್ಭವನ್ನು ನೆನೆಸಿಕೊಳ್ಳುತ್ತಾರೆ. ಬ್ರಜ್ ಲಾಲ್ ಆ ಹುಡುಗಿಯ ಸದ್ಗುಣಕ್ಕೆ ಮಾರುಹೋಗಿ ಕ್ರಿಶ್ಚಿಯನ್ ಹುಡುಗಿಯನ್ನು ಸೊಸೆ ಮಾಡಿಕೊಳ್ಳುವುದಕ್ಕೆ ಒಪ್ಪಿದರೂ, ಮದುವೆಗೆ ಮುಂಚೆ ಅವಳನ್ನು ಹಿಂದೂ ಧರ್ಮಕ್ಕೆ ಮತಾಂತರ ಮಾಡಿಸುವ ಆಲೋಚನೆಯಲ್ಲಿರುತ್ತಾರೆ. ಈ ಕುರಿತು ಜವಾಹರಲಾಲರು ಹೀಗೆ ಬರೆಯುತ್ತಾರೆ : "ಇಂಥ ಮಿಶ್ರಮದುವೆಗಳಲ್ಲಿ ಕೆಲವು ಕಾನೂನು ಸಂಬಂಧಿ ಸಮಸ್ಯೆಗಳಿವೆ. ಬ್ರಜ್ ಲಾಲ್ ಮದುವೆಗೆ ಮುಂಚೆ ಆ ಹಂಗೇರಿಯನ್ ಹುಡುಗಿಯನ್ನು ವಿಧ್ಯುಕ್ತವಾಗಿ ಹಿಂದೂ ಧರ್ಮಕ್ಕೆ ಸೇರಿಸಿಕೊಂಡು ಆ ನಂತರ ಹಿಂದೂ ಅಥವಾ ಆರ್ಯ ವಿಧಿಗಳ ಪ್ರಕಾರ ಮದುವೆಯನ್ನು ನೆರವೇರಿಸಬೇಕೆಂದು ನಿರ್ಣಯಿಸಿದ್ದಾರೆ. ವೈಯಕ್ತಿಕವಾಗಿ ಬೇರೊಂದು ಉದ್ದೇಶಕ್ಕಾಗಿ ಇನ್ನೊಂದು ಧರ್ಮವನ್ನು ಅಪ್ಪಿಕೊಳ್ಳುವುದು ನನಗೆ ಇಷ್ಟವಾಗುವುದಿಲ್ಲ."

ನೆಹರುರವರು ತಮ್ಮ ಸುಮಾರು ಮೂವತ್ತು ವರ್ಷಗಳ ಸ್ವಾತಂತ್ರ್ಯ ಹೋರಾಟದ ಅವಧಿಯಲ್ಲಿ ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಒಟ್ಟು ಸುಮಾರು ಹತ್ತು ವರ್ಷಗಳ ಕಾಲ ಸೆರೆಮನೆಯಲ್ಲಿ ಕಳೆದಿದ್ದಾರೆ (ಈಗಲೂ ಸುಮಾರು ಜನ ನಾಯಕರು ಸೆರೆಮನೆಯಲ್ಲಿದ್ದಾರೆ, ಆದರೆ ಕಾರಣ ಬೇರೆ !). ಅವರು ತಮ್ಮ ಮಗಳು ಇಂದುವನ್ನು ಉದ್ದೇಶಿಸಿ ಬರೆದ ಮೇರುಕೃತಿ "ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ"ಯ ಹೆಚ್ಚಿನಂಶ ರೂಪುಗೊಂಡಿದ್ದು ಸೆರೆಮನೆಗಳಲ್ಲಿಯೇ. ಉಳಿದ ಸಮಯವನ್ನು ಅವರು ಓದುವುದರಲ್ಲಿ ಕಳೆಯುತ್ತಿದ್ದರು. ನೈನಿ ಸೆರೆಮನೆಯಿಂದ ಜನವರಿ ೫, ೧೯೩೩ರಂದು ಗಾಂಧೀಜಿಗೆ ಬರೆದ ಒಂದು ಪತ್ರದಲ್ಲಿ ನೆಹರು ಹೀಗೆ ಬರೆಯುತ್ತಾರೆ :

ತುಂಬ ಓದಿದ್ದೇನೆ, ಜ್ಞಾನವು ಪುಸ್ತಕಗಳಿಂದ ಬರುವುದೇ ಆದರೆ ನಾನು ಸಾಕಷ್ಟು ಜ್ಞಾನಿಯಾಗಿದ್ದೇನೆ. ಆದರೆ ನನ್ನ ಜ್ಞಾನವು ಒಮ್ಮೊಮ್ಮೆ ನನಗೆ ಕೈಕೊಡುತ್ತದೆ; ಎಲ್ಲಿ ನೋಡಿದರೂ ದೊಡ್ಡ ಪ್ರಶ್ನಾರ್ಥಕ ಚಿಹ್ನೆಗಳೇ ಕಾಣಿಸುತ್ತವೆ. ಕೆಲವೊಮ್ಮೆ ರಾಜಕುಮಾರ ಸಿದ್ಧಾರ್ಥನಿಗಿದ್ದ ಪ್ರಶ್ನೆಯೇ ನನ್ನ ಎದುರಿಗೂ ಬರುತ್ತದೆ :

*ಇದು ಹೇಗೆ ಸಾಧ್ಯ ?*

*ಜಗತ್ತನ್ನು ಸೃಷ್ಟಿಸಿದ ಬ್ರಹ್ಮ, ಅದನ್ನು ದುಃಖದಲ್ಲಿ ಮುಳುಗಿಸಿದನೇಕೆ ?*

*ಸರ್ವಶಕ್ತನಾಗಿದ್ದರೂ ಆತ ಅದನ್ನು ಹೀಗೇ ಬಿಟ್ಟರೆ,*

*ಆತ ಒಳ್ಳೆಯವನಲ್ಲ, ಸರ್ವಶಕ್ತನಲ್ಲದಿದ್ದರೆ*

*ಆತ ದೇವರಲ್ಲ ?*

ಇದಕ್ಕೆ ಉತ್ತರ ಮಾತ್ರ ಕಾಣಿಸುವುದೇ ಇಲ್ಲ.

**ಎಂ. ಅಬ್ದುಲ್ ರೆಹಮಾನ್ ಪಾಷಾ**
ನಂ. ೮೧/೩೭–೩, ೧೨ನೇ 'ಡಿ' ಮುಖ್ಯರಸ್ತೆ, ಶಿವನಗರ
ಬೆಂಗಳೂರು – ೫೬೦ ೦೧೦

## ಸ್ವಾತಂತ್ರ್ಯಾನಂತರದ ಭಾರತ – ೧೧

# ಪ್ರಧಾನಿಯಾಗಿ ರಾಜೀವ ಗಾಂಧಿ ಅಧಿಕಾರಕ್ಕೆ

ಪ್ರಧಾನಿ ಇಂದಿರಾ ಗಾಂಧಿಯವರ ಹತ್ಯೆ ಇಡೀ ದೇಶವನ್ನು ಶೋಕದಲ್ಲಿ ಮುಳುಗಿಸಿತು. ಸಿಖ್ಖರ ಬಗ್ಗೆ ಆಕ್ರೋಶ ಉಂಟುಮಾಡಿತು. ದೆಹಲಿ ಹಾಗೂ ಇತರ ಕಡೆಗಳಲ್ಲಿ ಸಿಖ್ಖರ ಮೇಲೆ ಹಲ್ಲೆ ನಡೆಯಿತು. ದೆಹಲಿಯಲ್ಲಂತೂ ಸಿಖ್ಖರ ಮಾರಣಹೋಮವೇ ನಡೆದುಹೋಯಿತು. ರಾಜಧಾನಿಯಲ್ಲಿ ಎರಡು-ಮೂರು ದಿನಗಳು ಕಾನೂನು ಸುವ್ಯವಸ್ಥೆ ಮುರಿದುಬಿದ್ದಿತ್ತು. ಸಿಖ್ಖರ ಮೇಲೆ ದೆಹಲಿಯಲ್ಲಿ ನಡೆದ ದಾಳಿಯಲ್ಲಿ ಕೆಲ ಕಾಂಗ್ರೆಸ್ ನಾಯಕರ ನೇರವಾದ ಕೈವಾಡ ಇತ್ತು. ಸಿಖ್ಖರು ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿದ್ದ ಬಡಾವಣೆಗಳಲ್ಲಿ ನಡೆದ ವ್ಯವಸ್ಥಿತ ದೌರ್ಜನ್ಯದಲ್ಲಿ ಸಾವಿರಾರು ಮಂದಿ ಸಾವಿಗೀಡಾದರು. ಹಲವು ನೂರು ಮಂದಿ ಮನೆಮಠಗಳನ್ನು ಕಳೆದುಕೊಂಡರು. ಕಾನೂನು ಸುವ್ಯವಸ್ಥೆ ಕಾಪಾಡಬೇಕಾದ ಪೊಲೀಸರು ನಿಷ್ಕ್ರಿಯರಾಗಿದ್ದರು. ದೆಹಲಿಯಲ್ಲಿ ನಡೆದ ಹತ್ಯಾಕಾಂಡ ಈಗಲೂ ಸಿಖ್ಖರನ್ನು ಕಾಡುತ್ತಿದೆ. ಕಾಂಗ್ರೆಸ್ ಇದುವರೆಗೆ ದುರಂತದ ಬಗ್ಗೆ ಕ್ಷಮೆ ವ್ಯಕ್ತಪಡಿಸಿಲ್ಲ. ಕೆಲ ಕಾಂಗ್ರೆಸ್ ನಾಯಕರ ಮೇಲೆ ನರಹತ್ಯೆಗೆ ನೇರವಾಗಿ ಪ್ರಚೋದನೆ ನೀಡಿದ ಆಪಾದನೆಯೂ ಇತ್ತು. ನ್ಯಾಯಾಲಯದಲ್ಲಿ ಮೊಕದ್ದಮೆ ವಿಚಾರಣೆಯಾಗಿ ಆ ನಾಯಕರುಗಳಿಗೆ ಮುಕ್ತಿಯೂ ದೊರಕಿತು. ಆದರೂ ಇಂದಿರಾ ಗಾಂಧಿ ಹತ್ಯೆಯ ನಂತರ ನಡೆದ ಸಿಖ್ಖರ ನರಮೇಧದ ಕಳಂಕ ಕಾಂಗ್ರೆಸ್ಸಿಗೆ ಅಂಟಿದೆ. ಇನ್ನೂಕೂಡ ಗುಜರಾತ್‌ನಲ್ಲಿ ಭಾಜಪದ ಮೋದಿ ಆಡಳಿತಾವಧಿಯಲ್ಲಿ ೨೦೦೨ರಲ್ಲಿ ನಡೆದ ಕೋಮುಗಲಭೆಗಳಲ್ಲಿ ಜರುಗಿದ ಮುಸ್ಲಿಮರ ಹತ್ಯಾಕಾಂಡದ ಪ್ರಕರಣ ಪ್ರಸ್ತಾಪವಾದಾಗಲೆಲ್ಲ, ದೆಹಲಿಯಲ್ಲಿ ಕಾಂಗ್ರೆಸ್ ಆಡಳಿತ ಕಾಲದಲ್ಲಿ ಸಿಖ್ಖರ ಮಾರಣಹೋಮದ ಪ್ರಸ್ತಾಪ ಬರುತ್ತದೆ. ಅದೇನೇ ಇರಲಿ ಈ ಎರಡೂ ಪ್ರಕರಣಗಳು ಭಾರತದ ಧರ್ಮನಿರಪೇಕ್ಷತೆಗೆ ಹತ್ತಿರುವ ಕಪ್ಪು ಚುಕ್ಕೆಯಾಗಿವೆ.

ಭಾರತದ ಪ್ರಧಾನಿಯಾಗಿ ಹದಿನಾರು ವರ್ಷಗಳ ದೀರ್ಘಕಾಲ ಆಡಳಿತದ ಸಾಧಕ-ಬಾಧಕಗಳನ್ನು ಇತಿಹಾಸ ನಿರ್ಧರಿಸುತ್ತದೆ. ಸ್ವಾತಂತ್ರ್ಯಾನಂತರ ದೇಶದ ಆಡಳಿತದ ಚುಕ್ಕಾಣಿ ಹಿಡಿದ ತಂದೆ ಜವಹರಲಾಲ್ ನೆಹರು ರೂಪಿಸಿದ ಜಾಡಿನಲ್ಲೇ ಕ್ರಮಿಸಿದ ಇಂದಿರಾ ಗಾಂಧಿಯವರ ಗುರಿಯೂ ಭಾರತವನ್ನು ಸ್ವತಂತ್ರ, ಸಾರ್ವಭೌಮ, ಸ್ವಾವಲಂಬಿ ರಾಷ್ಟ್ರವಾಗಿಸುವುದಾಗಿತ್ತು. ದೃಢನಿರ್ಧಾರಗಳು ಮತ್ತು ರಾಜಕೀಯ ಚಾಣಾಕ್ಷತೆಯನ್ನು ಮೆರೆದ ಇಂದಿರಾ ಗಾಂಧಿ ಜನಪದ ಧೋರಣೆಗಳನ್ನು ಅನುಸರಿಸಿದ್ದಾಗ್ಯೂ ಸಮಾಜವಾದದ ಗುರಿಯನ್ನೇನೂ ಹೊಂದಿರಲಿಲ್ಲ. ಬಂಡವಾಳಶಾಹಿ ವ್ಯವಸ್ಥೆಯನ್ನು ಬಲಗೊಳಿಸಲು ಬದ್ಧರಾಗಿದ್ದ ಅವರು ಅದನ್ನು ನಿಯಂತ್ರಣದಲ್ಲಿರಿಸುವ ಗುರಿಯನ್ನು ಹೊಂದಿದ್ದರು. ೧೯೬೯ರಲ್ಲಿ ಕಾಂಗ್ರೆಸ್ ವಿಭಜನೆಗೊಂಡಾಗ ಬ್ಯಾಂಕ್‌ಗಳನ್ನು ರಾಷ್ಟ್ರೀಕರಣ ಮಾಡಿದ್ದು, ರಾಜಮಹಾರಾಜರುಗಳ ಪ್ರೀವಿಪರ್ಸ್ ರದ್ದುಗೊಳಿಸಿದ್ದು, ೧೯೭೧ರಲ್ಲಿ ಬಂಗ್ಲಾದೇಶ ವಿದ್ಯಮಾನಗಳ ಕುರಿತು ಅವರು ತಳೆದ ದೃಢವಾದ ನಿಲುವು ಅವರ ಜನಪ್ರಿಯತೆಯನ್ನು ಹೆಚ್ಚಿಸಿತು. ಅದೇ ಸಮಯದಲ್ಲಿ ಅವರು ಅಧಿಕಾರಕ್ಕೆ ಅಂಟಿಕೊಂಡಿರಲು ದೇಶದ ಮೇಲೆ ಹೇರಿದ ತುರ್ತು ಪರಿಸ್ಥಿತಿ ಅವರಿಗೇ ಮಾರಕವಾಯಿತು. ಚುನಾವಣೆಗಳಲ್ಲಿ ಜನ ಅವರಿಗೆ ತಕ್ಕ ಪಾಠ ಕಲಿಸಿದರು. ಅಧಿಕಾರಾವಧಿಯಲ್ಲಿ ಅವರ ಸಾಧನೆಗಳೆಲ್ಲ ತುರ್ತು ಪರಿಸ್ಥಿತಿಯ ಕಾಲದಲ್ಲಿ ನಡೆದ ಅತಿರೇಕಗಳಿಂದಾಗಿ ಮುಚ್ಚಿಹೋಯಿತು. ಸರ್ವಾಧಿಕಾರಿ ಧೋರಣೆಯ ಕಳಂಕ ಮಾತ್ರ ಖಾಯಂ ಆಗಿ ಅಂಟಿಕೊಂಡಿತು. ಸ್ವಾತಂತ್ರ್ಯ ಹೋರಾಟಗಾರರ ಪರಂಪರೆಯಲ್ಲಿ ಬೆಳೆದ ಇಂದಿರಾ ಗಾಂಧಿ ನೇರವಾಗಿ ರಾಜಕೀಯ ಪ್ರವೇಶ ಮಾಡಿದ್ದು ತಂದೆ ನೆಹರು ಆಡಳಿತದ ಕೊನೆಯ ಕಾಲಾವಧಿಯಲ್ಲಿ, ಕಾಂಗ್ರೆಸ್ ಸಂಸ್ಥೆಯ ಅಧ್ಯಕ್ಷರಾಗಿದ್ದಾಗಲೂ ಅವರಲ್ಲಿ ಸರ್ವಾಧಿಕಾರಿ ಪ್ರವೃತ್ತಿ ಕಂಡುಬಂದಿತ್ತು. ಕೇರಳದಲ್ಲಿ ಕಮ್ಯುನಿಸ್ಟ್ ಸರಕಾರವನ್ನು ಸಂವಿಧಾನ ಬಾಹಿರವಾಗಿ ವಜಾ ಮಾಡಿದ್ದರಲ್ಲಿ ಆಕೆಯ ಪಾತ್ರ ಕಡಿಮೆಯದ್ದೇನಾಗಿರಲಿಲ್ಲ. ಅದೇನೇ ಇರಲಿ, ಕಾಂಗ್ರೆಸ್ ಸಂಘಟನೆಯಲ್ಲಿ ವಂಶಪಾರಂಪರ್ಯವನ್ನು ರೂಢಿಗೆ ತಂದ ಕುಖ್ಯಾತಿ ಕೂಡ ಇಂದಿರಾ ಗಾಂಧಿಯವರಿಗೆ ಸಲ್ಲುತ್ತದೆ. ಕಿರಿಯ ಮಗ ಸಂಜಯ ಗಾಂಧಿಯನ್ನು ತಮ್ಮ ಉತ್ತರಾಧಿಕಾರಿಯಾಗಿ ರಾಜಕೀಯ ರಂಗಕ್ಕೆ ತಂದರು. ತುರ್ತು ಪರಿಸ್ಥಿತಿಯ ಕಾಲದಲ್ಲಿ ಈತ ಯಾವುದೇ ಅಧಿಕಾರ ಸ್ಥಾನದಲ್ಲಿಲ್ಲದೇ ಹೋದರೂ ಆಡಳಿತೆಯಲ್ಲಿ ಸಾಕಷ್ಟು ಪ್ರಭಾವಿಯಾಗಿದ್ದ. ಕಾಂಗ್ರೆಸ್ ಸಂಘಟನೆಯ ಮೇಲೆ ಹಿಡಿತವನ್ನು ಸಾಧಿಸಿದ್ದ. ಪಾರ್ಲಿಮೆಂಟ್ ಸದಸ್ಯನಾಗಿದ್ದ ಸಂಜಯ ಗಾಂಧಿ ಅಪಘಾತದಲ್ಲಿ ಮೃತನಾದಾಗ ಇಂದಿರಾ ಗಾಂಧಿ ಹಿರಿಯ ಮಗ ರಾಜೀವ ಗಾಂಧಿಯನ್ನು ಬಲವಂತದಿಂದ ರಾಜಕೀಯಕ್ಕೆ ತಂದು ಪಾರ್ಲಿಮೆಂಟ್ ಸದಸ್ಯನನ್ನಾಗಿ ಮಾಡಿದರು. ವೃತ್ತಿಯಲ್ಲಿ ವಿಮಾನ ಚಾಲಕನಾಗಿದ್ದ ರಾಜೀವ ಗಾಂಧಿ ಮುಂದೆ ತಾಯಿಯ ನಿಧನಾನಂತರ ಪ್ರಧಾನಿಯಾದರು. ಅವರ ಹತ್ಯೆಯಾದ ಮೇಲೆ ಕಾಂಗ್ರೆಸ್ ಸಂಘಟನೆ ಮಡದಿ ಸೋನಿಯಾ ಗಾಂಧಿ ಮಡಿಲಿಗೆ ಬಂದು ಈಗಲೂ ಮುಂದುವರಿಯುತ್ತಿದೆ. ಈಗ ಮಗ ರಾಹುಲ್ ಗಾಂಧಿಯನ್ನು ನಾಯಕತ್ವಕ್ಕೆ ಸಜ್ಜುಗೊಳಿಸಲಾಗುತ್ತದೆ. ಹಾಗಾಗಿ ಕಾಂಗ್ರೆಸ್‌ನಲ್ಲಿ ವಂಶಪಾರಂಪರ್ಯ ಪದ್ಧತಿ ಮೂರು ದಶಕಗಳಿಗೂ ಹೆಚ್ಚುಕಾಲದಿಂದ ಬೇರೂರಿದೆ.



ಕಾಂಗ್ರೆಸ್ ಸಂಘಟನೆ ಮತ್ತು ಆಡಳಿತದ ಮೇಲೆ ಪರಮಾಧಿಕಾರ ಹೊಂದಿದ್ದ ಇಂದಿರಾ ಗಾಂಧಿ ಅಧಿಕಾರದ ವಿಕೇಂದ್ರೀಕರಣಕ್ಕೆ ಅಗತ್ಯವಾದ ಒತ್ತು ನೀಡಲಿಲ್ಲ. ಆಡಳಿತೆಯಲ್ಲಿ ಅಧಿಕಾರಶಾಹಿಯ ಮೇಲೆ ಅವಲಂಬನೆ ಅಧಿಕವಾಗಿದ್ದುದರಿಂದ ಏನೇ ಪುರೋಗಾಮಿ ಸುಧಾರಣೆಗಳನ್ನು, ಕ್ರಮಗಳನ್ನು ತೆಗೆದುಕೊಂಡರೂ ಅದು ಜನಸಾಮಾನ್ಯರನ್ನು ತಲುಪಲಿಲ್ಲ. ದೇಶದ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರಶಾಹಿ ಹಸ್ತ ಈಗಲೂ ಬಲವಾಗಿಯೇ ಬೇರೂರಿದೆ. ಕಾಂಗ್ರೆಸ್ ಸಂಘಟನೆಯಲ್ಲಿ ನಾಯಕತ್ವದ ಮೇಲೆ ವಿಶ್ವಾಸ ಬೆಳೆಸಿದ್ದರಿಂದ ಅದು ಕಾರ್ಯಕರ್ತರ ಪಡೆಯನ್ನು ಕಟ್ಟುವ ಗೋಜಿಗೆ ಹೋಗಲೇ ಇಲ್ಲ. ಚುನಾವಣೆಗಳ ಕಾಲದಲ್ಲಿ ನಿಷ್ಠಾವಂತರಾದ

**ಸಿ. ಆರ್. ಕೃಷ್ಣರಾವ್**



ಆರ್ಯಭಟ ಉಪಗ್ರಹ

ಕಾರ್ಯಕರ್ತರನ್ನು ಕಡೆಗಣಿಸಿ ಸಂದರ್ಭ ಸಾಧಕರಿಗೆ ಮಣೆಹಾಕುವ ಪ್ರವೃತ್ತಿ ಕಾಂಗ್ರೆಸ್ಸಿನಲ್ಲಿ ಬೆಳೆದದ್ದು ಅದು ಇಂದು ಮೂಲೆಗುಂಪಾಗಲು ಒಂದು ಕಾರಣ ಎನ್ನಬಹುದು. ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಬೆಳೆದದ್ದೇ ಹಾಗೆ. ಇಂದಿರಾ ಗಾಂಧಿ ಆಡಳಿತಕಾಲದ ಸಾಧನೆಗಳನ್ನು ಪಟ್ಟಿಮಾಡುವುದು ಈ ಲೇಖನದ ಉದ್ದೇಶವಲ್ಲ. ಸುಮಾರು ಮೂರು ದಶಕಗಳ ಕಾಲದ ಭಾರತದ ಪ್ರಗತಿಯನ್ನು ಅವಲೋಕಿಸಿದರೆ ಅದು ನಿರೀಕ್ಷಿತ ಪ್ರಮಾಣವನ್ನು ತಲುಪಲಿಲ್ಲ ಎನ್ನುವುದು ಸತ್ಯ. ಭಾರತದಲ್ಲಿ ೧೯೫೭ರಲ್ಲಿ ಬಂಡವಾಳ ಹೂಡಿಕೆ ೧೦೭೮ ಕೋಟಿ ರೂ.ಗಳಾಗಿದ್ದು ೩೦,೦೦೦ ಕಂಪೆನಿಗಳು ದಾಖಲಾಗಿತ್ತು. ೧೯೮೨ರ ವೇಳೆಗೆ ಅದು ದ್ವಿಗುಣಗೊಂಡು ೭೨,೪೦೨ ಕಂಪೆನಿಗಳಾಗಿದ್ದು ಬಂಡವಾಳ ಹೂಡಿಕೆ ೧೮,೯೩೬ ಕೋಟಿ ರೂ.ಗಳಾಗಿದ್ದುವು. ಸಣ್ಣ ಕೈಗಾರಿಕೆಗಳ ಬೆಳವಣಿಗೆಗೆ ಹೆಚ್ಚಿನ ಗಮನ ನೀಡಲಾಗಿತ್ತು. ೨೦೧೪ರಲ್ಲಿ ಮೂರು ದಶಕಗಳ ಅಲ್ಪಾವಧಿಯಲ್ಲಿ ಭಾರತ ಅಂತರಿಕ್ಷಯಾನದಲ್ಲಿ ಮಂಗಳಗ್ರಹಕ್ಕೆ ಉಪಗ್ರಹ ರವಾನಿಸಿ ಯಶಸ್ಸು ಸಾಧಿಸಿದೆ. ಅಂತರಿಕ್ಷ ಅನ್ವೇಷಣೆಯಲ್ಲಿ ಮುಂದುವರಿದ ರಾಷ್ಟ್ರಗಳ ಜೊತೆ ಅಗ್ರಪಂಕ್ತಿಗೆ ಸೇರಿದೆ. ಇದು ಸಾಧ್ಯವಾದದ್ದು ೧೯೭೧ರಲ್ಲಿ ವಿಜ್ಞಾನಿ ಡಾ॥ ವಿಕ್ರಮ್ ಸಾರಾಭಾಯಿಯವರ ಉಪಕ್ರಮದಿಂದಾಗಿ. ಅಂತರಿಕ್ಷ ಅನ್ವೇಷಣೆಗೆ ಒತ್ತುಕೊಟ್ಟ ಅವರು ಈ ಕ್ಷೇತ್ರದಲ್ಲಿ ಅಂದಿನ ಸೋವಿಯೆತ್ ಒಕ್ಕೂಟದ ಸಹಕಾರ ಪಡೆದುಕೊಂಡರು. ಅನಂತರ ಅಸ್ತಿತ್ವಕ್ಕೆ ಬಂದ ಭಾರತೀಯ ಅಂತರಿಕ್ಷ ಅನ್ವೇಷಣಾ ಸಂಸ್ಥೆ (ಇಸ್ರೋ) ಸೋವಿಯೆತ್ ಒಕ್ಕೂಟದ ನೆರವಿನಿಂದ ೧೯೭೫ರಲ್ಲಿ ಆರ್ಯಭಟ-೧ ಭೂಕಕ್ಷೆಗೆ ಹಾರಿಸಿ ವಿಕ್ರಮ ಸಾಧಿಸಿತು. ಅನಂತರ ಆರ್ಯಭಟ-೨ ಕೃತಕ ಉಪಗ್ರಹ ಹಾರಿಸಿದ್ದಲ್ಲದೆ, ಮಾನವ ಚಾಲಿತ ಉಪಗ್ರಹವನ್ನೂ ಕಕ್ಷೆಗೆ ಹಾರಿಸಿ ದಾಖಲೆ ನಿರ್ಮಿಸಿತು. ರಾಕೇಶ್ ಶರ್ಮ ಭಾರತದ ಪ್ರಥಮ ಗಗನಯಾನಿಯಾದರು. ಅಂತರಿಕ್ಷ ಯಾನದಲ್ಲಿ ವಿಕ್ರಮ ಸಾಧಿಸಿದ ಭಾರತ ಪರಮಾಣು ಕ್ಷೇತ್ರದಲ್ಲೂ ಮುಂದುವರಿಯಿತು. ಪರಮಾಣುವಿನ ಶಾಂತಿಯುತ ಬಳಕೆಗೆ ಪ್ರಾಶಸ್ತ್ಯ ನೀಡಿದ ಭಾರತ ವಿದ್ಯುಚ್ಛಕ್ತಿ ಉತ್ಪಾದನೆಗೆ ನ್ಯೂಕ್ಲಿಯರ್ ಶಕ್ತಿಯನ್ನು ಬಳಸಿಕೊಂಡಿತ್ತು. ೧೯೭೪ರಲ್ಲಿ ಮೇ ೧೪ರಂದು ರಾಜಸ್ಥಾನದ ಪೋಕ್ರಾನ್ ಮರುಭೂಮಿ ಪ್ರದೇಶದಲ್ಲಿ ಭೂಗರ್ಭದಲ್ಲಿ ನ್ಯೂಕ್ಲಿಯರ್ ಸ್ಫೋಟದ ಪ್ರಯೋಗ ನಡೆಸಿ ನ್ಯೂಕ್ಲಿಯರ್ ಶಕ್ತ ರಾಷ್ಟ್ರ ಎನಿಸಿಕೊಂಡಿತು. ಮುಂದೆ ಭಾಜಪ ನೇತೃತ್ವದ ಎನ್.ಡಿ.ಎ. ಸರಕಾರದ ಪ್ರಧಾನಿಯಾಗಿದ್ದ ವಾಜಪೇಯಿ ಅಧಿಕಾರಾವಧಿಯಲ್ಲಿ ಅದೇ ಪೋಕ್ರಾನ್‌ನಲ್ಲಿ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗ ನಡೆಸಿತು. ಇದರ ಪರಿಣಾಮಗಳನ್ನು ಮುಂದೆ ಪರಿಶೀಲಿಸೋಣ.

ಶ್ರೀಮತಿ ಇಂದಿರಾ ಗಾಂಧಿ ಧರ್ಮನಿರಪೇಕ್ಷತೆಯ ಕಟ್ಟಾ ಪ್ರತಿಪಾದಕಿಯಾಗಿದ್ದರೂ ಮತೀಯವಾದಿ ಸಂಘಪರಿವಾರದ ಪಕ್ಷ ಬೆಳೆದದ್ದೂ ಅವರ ಅಧಿಕಾರಾವಧಿಯಲ್ಲೇ ಎನ್ನಬಹುದು. ಪಾರ್ಲಿಮೆಂಟಿನಲ್ಲಿ ಕೇವಲ ೨ ಸ್ಥಾನ ಪಡೆದಿದ್ದ ಹಿಂದುತ್ವವಾದಿ ಪಕ್ಷ ಜನಸಂಘ ೯೦ ಸ್ಥಾನಗಳನ್ನು ಪಡೆದುಕೊಂಡು ರಾಷ್ಟ್ರೀಯ ಪಕ್ಷವಾಗಿ ಹೊರಹೊಮ್ಮಿದ್ದು ಕೂಡ ಅವರ ಕಾಲದಲ್ಲೇ. ತುರ್ತು ಪರಿಸ್ಥಿತಿ ಮತ್ತು ಅನಂತರದ ಜನತಾ ಪ್ರಯೋಗ ಅದಕ್ಕೆ ಸಾಕಷ್ಟು ಬಲ ನೀಡಿತು. ಜನತಾ ಪ್ರಯೋಗವಾದ ಮೇಲೆ ಭಾರತೀಯ ಜನತಾ ಪಕ್ಷವಾಗಿ (ಭಾಜಪ) ಮಾರ್ಪಾಟುಗೊಂಡ ಈ ಪಕ್ಷ ಏಳು-ಬೀಳುಗಳನ್ನು ಕಂಡರೂ ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಬೆಳೆದಿರುವುದು ಗಮನಿಸಬೇಕಾದ ಸಂಗತಿ. ಜನತಾ ಪಾರ್ಟಿ ಪ್ರಯೋಗದಲ್ಲಿ ಅಧಿಕಾರದ ಸವಿಯನ್ನನುಭವಿಸಿದ ಈ ಪಕ್ಷ ಮತ್ತೆ ಅಧಿಕಾರಕ್ಕೆ ಬಂದದ್ದು ಒಂದು ದಶಕದ ನಂತರ. ಪೂರ್ಣಾವಧಿ ಅಧಿಕಾರದಲ್ಲಿದ್ದ ಮೊದಲ ಸಮ್ಮಿಶ್ರ ಸರಕಾರ ಭಾಜಪ ನೇತೃತ್ವದಲ್ಲಿ ಇಪ್ಪತ್ತನೇ ಶತಮಾನದ ಕೊನೆಯಲ್ಲಿ ಅಸ್ತಿತ್ವಕ್ಕೆ ಬಂದ ಎನ್‌ಡಿಎ ಸರಕಾರ. ಇದಾದ ಮೇಲೆ ಹತ್ತು ವರ್ಷಗಳ ನಂತರ ಈಗ ಮತ್ತೆ ಅದು ಅಧಿಕಾರ ಗ್ರಹಣ ಮಾಡಿದೆ. ಈ ಬೆಳವಣಿಗೆಗಳನ್ನು ವಿವರವಾಗಿ ನಂತರ ಅವಲೋಕಿಸೋಣ.

ತಾಯಿಯ ಹತ್ಯೆಯಾದ ದಿನವೇ ರಾತ್ರೆ ಪ್ರಧಾನಿಯಾಗಿ ರಾಜೀವ ಗಾಂಧಿ ಅಧಿಕಾರ ವಹಿಸಿಕೊಂಡರು. ಹದಿನಾಲ್ಕು ವರ್ಷ ವಿಮಾನ ಚಾಲಕನಾಗಿದ್ದ ಈತನಿಗೆ ರಾಜಕೀಯ ಪ್ರವೇಶಿಸಲು ಆಸಕ್ತಿಯೇ ಇರಲಿಲ್ಲ. ಅನುಭವವೂ ಇರಲಿಲ್ಲ. ಅನಿವಾರ್ಯವಾಗಿ ಪ್ರಧಾನಿ ಅಧಿಕಾರ ಸ್ವೀಕರಿಸಬೇಕಾಯಿತು. ಅಧಿಕಾರ ವಹಿಸಿಕೊಂಡ ಮೇಲೆ ಇಂದಿರಾ ಗಾಂಧಿ ಹತ್ಯೆಯ ನಂತರ ದೇಶದಲ್ಲಿ, ಮುಖ್ಯವಾಗಿ ದೆಹಲಿ, ಹರ್ಯಾಣಗಳಲ್ಲಿ ಗಲಭೆಯನ್ನು ನಿಯಂತ್ರಿಸುವುದಕ್ಕೆ ಆದ್ಯತೆ ನೀಡುವುದು ಅಗತ್ಯವಾಗಿತ್ತು. ಈ ವಿಚಾರದಲ್ಲಿ ಸರಕಾರ ಸರಿಯಾದ ಕ್ರಮ ತೆಗೆದುಕೊಳ್ಳದೆ ಸಂಭವಿಸಿದ ದುರಂತದ ಕಳಂಕ ಅವರಿಗೂ ಅಂಟಿತ್ತು. ಪ್ರಧಾನಿಯಾದ ಮೂರು ತಿಂಗಳಾದ ಮೇಲೆ ಡಿಸೆಂಬರ್ ೧೯೮೪ರಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಭಾರೀ ಬಹುಮತವನ್ನು ಗಳಿಸಿತು. ಕೆಲ ತಿಂಗಳ ನಂತರ ಪಂಜಾಬ್ ಮತ್ತು ಅಸ್ಸಾಮ್ ರಾಜ್ಯಗಳಲ್ಲಿ ನಡೆದ ಚುನಾವಣೆಯ ಫಲಿತಾಂಶವನ್ನೂ ಸೇರಿಸಿದರೆ ಕಾಂಗ್ರೆಸ್ ಪಾರ್ಲಿಮೆಂಟಿನ ೫೪೩ ಸ್ಥಾನಗಳ ಪೈಕಿ ೪೧೫ ಸ್ಥಾನಗಳನ್ನು ಪಡೆಯಿತು. ರಾಜೀವ ಗಾಂಧಿ ಉತ್ತರಪ್ರದೇಶದ ಅಮೇಥಿ ಕ್ಷೇತ್ರದಿಂದ ಭಾರಿ ಬಹುಮತದಿಂದ ಆಯ್ಕೆಯಾದರು. ಅವರ ವಿರುದ್ಧ ಸಂಜಯ ಗಾಂಧಿಯ ಮಡದಿ ಮೇನಕಾ ಗಾಂಧಿ ಸ್ಪರ್ಧಿಸಿದ್ದರು. ಇಂದಿರಾಗಾಂಧಿ ಕೊಲೆಯ ನಂತರ ನಡೆದ ಈ ಚುನಾವಣೆಗಳಲ್ಲಿ ಸಹಾನುಭೂತಿ ಅಲೆಯೇ ಕಾಂಗ್ರೆಸ್ಸಿನ ಬಂಡವಾಳವಾಯಿತು.

ರಾಜೀವ ಗಾಂಧಿ ಅಧಿಕಾರ ವಹಿಸಿಕೊಂಡ ಎರಡು ವಾರಗಳಲ್ಲಿ ಮಧ್ಯಪ್ರದೇಶದ ರಾಜಧಾನಿ ಭೋಪಾಲದಲ್ಲಿ ಭಾರಿ ದುರಂತ ಸಂಭವಿಸಿತು. ಅಮೆರಿಕದ ಯೂನಿಯನ್ ಕಾರ್ಬೈಡ್ ಕಂಪೆನಿ ಸ್ಥಾಪಿಸಿದ್ದ ರಾಸಾಯನಿಕ ಕಾರ್ಖಾನೆಯಲ್ಲಿ ವಿಷಾನಿಲ ಸೋರಿಕೆಯಾಗಿ ಸಂಭವಿಸಿದ ದುರಂತದಲ್ಲಿ ೨,೦೦೦ಕ್ಕೂ ಹೆಚ್ಚು ಮಂದಿ ಸಾವಿಗೀಡಾದರು. ಈ ಅನಾಹುತದ ಪರಿಣಾಮ ಭೋಪಾಲದ ಜನರನ್ನು ಈಗಲೂ ಕಾಡುತ್ತಿದೆ. ಈ ಬಹುರಾಷ್ಟ್ರೀಯ ಸಂಸ್ಥೆ ಸಮರ್ಪಕವಾದ ಸುರಕ್ಷತಾಕ್ರಮಗಳನ್ನು ಅನುಸರಿಸದಿದ್ದುದೇ ದುರಂತಕ್ಕೆ ಕಾರಣ. ವಿಷಾನಿಲದ ಪರಿಣಾಮ ಸಾವಿರಾರು ಜನರನ್ನು ಅನಾರೋಗ್ಯಕ್ಕೀಡು ಮಾಡಿತು. ಈ ದುರ್ಘಟನೆಯನ್ನು ಹಿರೋಷಿಮಾ, ನಾಗಸಾಕಿ ಜನರ ಮೇಲೆ ಅಮೆರಿಕ ನಡೆಸಿದ ಪರಮಾಣು ದಾಳಿಯ ಪರಿಣಾಮಗಳಿಗೆ ಹೋಲಿಸಬಹುದು. ಈ ದುರ್ಘಟನೆ ನಂತರ ವಿಕಲಾಂಗ ಮಕ್ಕಳ ಜನನದ ಸಂಖ್ಯೆ ಅಧಿಕಗೊಂಡಿತು. ಇಷ್ಟಾದರೂ ಈ ಬಹುರಾಷ್ಟ್ರೀಯ ಕಂಪೆನಿ ಹಾನಿಗೀಡಾದ ಬಡಜನರಿಗೆ ಪರಿಹಾರ ನೀಡಲು ಸಾಕಷ್ಟು ಕಾಲ ಎಳೆದಾಡಿತು. ಕಂಪೆನಿ ಹೊಣೆಗಾರಿಕೆಯಿಂದ ಜಾರಿಕೊಳ್ಳಲು ಅಮೆರಿಕ ಹಾಗೂ ಭಾರತದ ನ್ಯಾಯಾಲಯಗಳಲ್ಲಿ ಕಾನೂನಿನ ಸಮರ ನಡೆಸಿತು. ಇನ್ನೂ ಸಹ ಸಂತ್ರಸ್ತರಿಗೆ ತೃಪ್ತಿ ನೀಡುವ ಪರಿಹಾರ ಲಭಿಸಿಲ್ಲ. ಕಂಪೆನಿ ನ್ಯಾಯಾಲಯಗಳು ತೀರ್ಮಾನಗಳಿಗನುಸಾರವಾಗಿ ನೀಡಿದ ಪರಿಹಾರಧನದ ವಿತರಣೆ ಕೂಡ ಸಮರ್ಪಕವಾಗಿ ಆಗಲಿಲ್ಲ ಅಧಿಕಾರಶಾಹಿಗಳ ಮಂದಗತಿಯಿಂದಾಗಿ. ಈ ಅವಘಡದಲ್ಲಿ ತೊಂದರೆಗೀಡಾದವರೆಲ್ಲ ಬಡ ಕಾರ್ಮಿಕರೆ. ಕೇಂದ್ರ ಸರಕಾರವು ಈ ಬಹುರಾಷ್ಟ್ರೀಯ ಕಂಪೆನಿ ಬಗ್ಗೆ ತಳೆದ ಮೃದು ಧೋರಣೆಯೂ ಅಸಮರ್ಪಕ ಪರಿಹಾರಕ್ಕೆ ಒಂದು ಕಾರಣ.

## ತಿದ್ದುಪಡಿ

ಕಳೆದ ಸಂಚಿಕೆಯಲ್ಲಿ ಪ್ರಕಟವಾದ ಸ್ವಾತಂತ್ರ್ಯೋತ್ತರ ಭಾರತ ೧೦ನೇ ಲೇಖನದಲ್ಲಿ ಚಿಕ್ಕಮಗಳೂರು ಕ್ಷೇತ್ರದಲ್ಲಿ ಇಂದಿರಾ ಗಾಂಧಿ ವಿರುದ್ಧವಾಗಿ ಸ್ಪರ್ಧಿಸಿದ್ದವರು ಎ. ಪಿ. ಜೈನ್ ಎಂದು ತಪ್ಪಾಗಿ ಪ್ರಕಟವಾಗಿದೆ. ಓದುಗರೊಬ್ಬರು ದೂರವಾಣಿ ಮೂಲಕ ಅದನ್ನು ಗಮನಕ್ಕೆ ತಂದಿದ್ದಾರೆ. ಅವರ ವಿರುದ್ಧ ಸ್ಪರ್ಧಿಸಿದ್ದವರು ಕರ್ನಾಟಕದ ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು.

– ಸಂ.

ಯೂನಿಯನ್ ಕಾರ್ಬೈಡ್ ಕಂಪೆನಿಯ ವ್ಯವಸ್ಥಾಪಕ ನಿರ್ದೇಶಕನನ್ನು ಬಂಧಿಸದೆ ಪರಾರಿಯಾಗಲು ಅವಕಾಶ ನೀಡಿದ ಆಪಾದನೆ ಸರಕಾರದ ಮೇಲಿದೆ.

ಈ ಎಲ್ಲ ಅವಾಂತರಗಳ ಮಧ್ಯೆ ಪಂಜಾಬ್ ಮತ್ತು ಅಸ್ಸಾಮ್ ರಾಜ್ಯಗಳಲ್ಲಿದ್ದ ಪ್ರಕ್ಷುಬ್ಧ ಪರಿಸ್ಥಿತಿಯನ್ನು ನಿವಾರಿಸುವುದು ಅಗತ್ಯವಾಗಿತ್ತು. ಪ್ರತ್ಯೇಕವಾದಿಗಳ ಆರ್ಭಟ ಈ ಎರಡೂ ರಾಜ್ಯಗಳಲ್ಲಿ ಪ್ರಬಲವಾಗಿ ಹರಡಿತ್ತು. ಮಾತುಕತೆಗಳ ಮೂಲಕವಾಗಿ ಪರಿಸ್ಥಿತಿಯನ್ನು ತಹಬಂದಿಗೆ ತಂದದ್ದು ರಾಜೀವ ಗಾಂಧಿ ಸರಕಾರದ ಸಾಧನೆಗಳಲ್ಲಿ ಒಂದು. ಏನೇ ಒಪ್ಪಂದವಾಗಿದ್ದರೂ ಈಗಲೂ ಕೂಡ ಈ ಎರಡೂ ರಾಜ್ಯಗಳಲ್ಲಿ ಪ್ರತ್ಯೇಕವಾದದ ಸೊಲ್ಲು ಅಡಗಿಲ್ಲ. ರಾಜೀವ ಗಾಂಧಿ ಆಡಳಿತಕಾಲದಲ್ಲಿ ಆಧುನಿಕ ತಂತ್ರಜ್ಞಾನವನ್ನು ಭಾರತಕ್ಕೆ ತರಲು ನಡೆಸಿದ ಪ್ರಯತ್ನ ಗಮನಾರ್ಹ. ನೆಹರು – ಇಂದಿರಾ ಗಾಂಧಿ ನೀತಿಗಳಿಂದ ದೂರ ಸರಿಯುವ ಇಂಗಿತವನ್ನು ತೋರಿದ್ದನ್ನು ಅವರ ನೀತಿಗಳಲ್ಲಿ ಕಾಣಬಹುದಾಗಿತ್ತು. ಎಂಬತ್ತರ ದಶಕದ ಹೊತ್ತಿಗೆ ಮಾಹಿತಿ ತಂತ್ರಜ್ಞಾನ ಕ್ಷೇತ್ರ ಭಾರತದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿತ್ತು. ದೂರಸಂಪರ್ಕ ಕ್ಷೇತ್ರದಲ್ಲಿ ತಾಂತ್ರಿಕ ಮುನ್ನಡೆಯಾದದ್ದು ಆಗಲೇ. ಅಮೆರಿಕದಲ್ಲಿ ತರಬೇತಿ ಪಡೆದಿದ್ದ ಸ್ಯಾಮ್ ಪಿತ್ರೋಡಾರನ್ನು ಕರೆಸಿಕೊಂಡು ಸಂಪರ್ಕಾಭಿವೃದ್ಧಿಗಾಗಿ ಕೇಂದ್ರವೊಂದನ್ನು ಸ್ಥಾಪಿಸಲಾಯಿತು. ಆತ ಪ್ರಧಾನಿ ರಾಜೀವ ಗಾಂಧಿಗೆ ತಂತ್ರಜ್ಞಾನದ ಸಲಹೆಗಾರನಾಗಿದ್ದ. ಕೈಗಾರಿಕಾಭಿವೃದ್ಧಿಗೆ ಪ್ರಾಧಾನ್ಯತೆ ನೀಡಿದ ರಾಜೀವ ಗಾಂಧಿ ಪರಿಸರ ರಕ್ಷಣೆಗೂ ಕ್ರಮ ತೆಗೆದುಕೊಂಡರು. ಪರಿಸರ ರಕ್ಷಣೆಗಾಗಿ ಹೊಸ ಮಂತ್ರಾಲಯ ಸ್ಥಾಪನೆಯಾಗಿದ್ದು ಅವರ ಆಡಳಿತ ಕಾಲದಲ್ಲೇ. ಹೊಸ ಕೈಗಾರಿಕೆಗಳ ಸ್ಥಾಪನೆಗೆ ಪರಿಸರ ರಕ್ಷಣಾ ಸಚಿವಾಲಯದ ಅನುಮತಿ ಕಡ್ಡಾಯವಾಗಿಸಲಾಯಿತು. ಗಂಗಾನದಿಯ ಮಾಲಿನ್ಯವನ್ನು ತೊಡೆದು ಹಾಕುವ ಮೊದಲ ಪ್ರಯತ್ನ ನಡೆದದ್ದೂ ಅವರ ಅಧಿಕಾರಾವಧಿಯಲ್ಲೇ. ಅದು ನಿರೀಕ್ಷಿತ ಫಲ ಕೊಡಲಿಲ್ಲ. ಈಗ ಅಧಿಕಾರದಲ್ಲಿರುವ ಮೋದಿ ಸರಕಾರ ಮತ್ತೆ ಗಂಗಾನದಿಯನ್ನು ಶುದ್ಧಗೊಳಿಸುವ ಯೋಜನೆಯನ್ನು ಕೈಗೆತ್ತಿಕೊಂಡಿದೆ.




ರಾಕೇಶ್ ಶರ್ಮ

ವಿದೇಶಾಂಗ ನೀತಿಯ ಕ್ಷೇತ್ರದಲ್ಲಿ ನೆಹರು–ಇಂದಿರಾ ನೀತಿಯನ್ನೇ ಮುಂದುವರಿಸಿಕೊಂಡು ಹೋದ ರಾಜೀವ ಗಾಂಧಿ ಅಲಿಪ್ತ ನೀತಿಗೆ ಬದ್ಧರಾಗಿದ್ದರು. ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಗೆ ಕಟಿಬದ್ಧರಾಗಿದ್ದ ಅವರು ೧೯೮೮ರ ಜೂನ್‌ನಲ್ಲಿ ನಡೆದ ನಿರಾಯುಧೀಕರಣ ಕುರಿತ ವಿಶ್ವಸಂಸ್ಥೆಯ ತೃತೀಯ ವಿಶೇಷ ಮಹಾ ಅಧಿವೇಶನದಲ್ಲಿ ೨೦೧೦ರ ವೇಳೆಗೆ ಎಲ್ಲ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಗೆ ಕರೆ ನೀಡಿದರು. ಸೋವಿಯೆತ್ ಒಕ್ಕೂಟದ ಜೊತೆ ಮೈತ್ರಿ ಸಂಬಂಧಗಳನ್ನು ಮುಂದುವರಿಸಿಕೊಂಡು ಹೋದ ಅವರು ನೆರೆಯ ಚೀಣಾದೊಂದಿಗೆ ಸಂಬಂಧಗಳನ್ನು ವರ್ಧಿಸಲು ಕ್ರಮ ಕೈಗೊಂಡರು. ೧೯೬೨ರಲ್ಲಿ ಚೀಣಾ ಯುದ್ಧದ ನಂತರ ಎರಡೂ ದೇಶಗಳ ಮಧ್ಯೆ ಸಂಬಂಧಗಳು ಶಿಥಿಲಗೊಂಡಿದ್ದವು. ಅದನ್ನು ಸಹಜಸ್ಥಿತಿಗೆ ತರುವ ಪ್ರಯತ್ನವಾಗಿ ರಾಜೀವ ಗಾಂಧಿ ೧೯೮೮ರಲ್ಲಿ ಚೀಣಾಗೆ ಭೇಟಿ ನೀಡಿದರು. ೧೯೫೪ರಲ್ಲಿ ಚೀಣಾಗೆ ಪ್ರಧಾನಿ ನೆಹರು ನೀಡಿದ್ದ ನಂತರ ಮೂವತ್ತನಾಲ್ಕು ವರ್ಷಗಳಾದ ಮೇಲೆ ಭಾರತದ ಪ್ರಧಾನಿಯು ನೀಡಿದ ಭೇಟಿಯಾಗಿತ್ತು ಅದು. ಆಗ ಚೀಣಾದಲ್ಲಿ ಅಧಿಕಾರದಲ್ಲಿದ್ದ ಡೆಂಗ್ ಕ್ಸಿಯಾವೊ ಪಿಂಗ್ ಜೊತೆ ಮಾತುಕತೆ ನಡೆಸಿದ ರಾಜೀವ ಗಾಂಧಿ ಸಂಬಂಧಗಳ ಸುಧಾರಣೆಗೆ ಬುನಾದಿ ನಿರ್ಮಿಸಿದರು.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ.–೮೫

## ಈ ಕಾಲದಲಿ

ಕಾವ್ಯಲೋಕ

ಅವನು ಧರ್ಮದ ಹೆಸರು ಹೇಳಿದನು
ಇವನೂ ಧರ್ಮದ ಹೆಸರನ್ನೇ ಹೇಳುವನು
ಅವರ ಮಾತುಗಳೂ ಧರ್ಮದ ಹಾಗೇ,
ಎಷ್ಟೊಂದು ಭಿನ್ನ ...

ಅವನು ದೇವರನ್ನು ನೆನೆಯುವನು
ಇವನೂ ದೇವರನ್ನೇ ಧ್ಯಾನಿಸುವವನು
ಅವರ ಪ್ರಾರ್ಥನೆಗಳೂ ದೇವರ ಹಾಗೇ,
ಎಷ್ಟೊಂದು ಭಿನ್ನ ...

ಅವನು ಧರ್ಮ ರಕ್ಷಿಸುವೆ ಎಂದನು
ಇವನೂ ಧರ್ಮರಕ್ಷಣೆಯ ಮಾತೇ ಆಡಿದನು
ಧರ್ಮರಕ್ಷಣೆಯ ಭಾಷೆ ಭಿನ್ನವಾಗಲಿಲ್ಲ
ಅವರವರ ಧರ್ಮದ ಹಾಗೆ...

ಧರ್ಮದ ಉಳಿವಿಗಾಗಿ ಅವ ಕತ್ತಿ ಹಿಡಿವೆನೆಂದನು
ಧರ್ಮದ ಬೆಳವಣಿಗೆಗಾಗಿ ಇವ ಖಡ್ಗ ಹಿಡಿವೆನೆಂದನು
ಧರ್ಮ ಉಳಿದು ಬೆಳೆಯುವ ದಾರಿ ಭಿನ್ನವಾಗಲಿಲ್ಲ
ಅವರವರ ಧರ್ಮದ ಹಾಗೆ...



ಮನುಷ್ಯರ ಕೊಲುವುದೂ ಧರ್ಮವೆನಿಸಿರುವ ಕಾಲದಲಿ
ಎಲ್ಲಿಯೇ ನೋಡು ಬಸು, ಉನ್ಮಾದಿತ ಕಣ್ಣು ತೆರೆದಿರುವುದಿಲ್ಲ.

**ಬಸೂ**
ಲಡಾಯಿ ಪ್ರಕಾಶನ, ಗದಗ




# ರೋಹಿಣಿಯ ಶಕಟ

**ಶು**ಭ್ರ ಆಕಾಶ ಈ ತಿಂಗಳು ದೊರಕುವುದರಿಂದ ನಭಾವಲೋಕನ ದಿನವೂ ಸಾಧ್ಯವಾಗಬಹುದು. ಆದ್ದರಿಂದ, ಕೆಲವು ಆಕಾಶಕಾಯಗಳ ಚಲನೆಯನ್ನು ಗಮನಿಸುವುದು ಸಾಧ್ಯವಾಗುವುದು. ಉದಾಹರಣೆಗೆ ತಿಂಗಳ ಮೊದಲ ದಿನಗಳಲ್ಲಿ ಪಶ್ಚಿಮದ ಅಂಚಿನಲ್ಲಿ ಕಾಣುವ ವೃಶ್ಚಿಕ ತಿಂಗಳ ಕೊನೆಗೆ ಕಾಣದಾಗುವುದು. ಹಾಗೆಯೇ ಪೂರ್ವದ ಅಂಚಿನಲ್ಲಿ ತಿಂಗಳ ಆರಂಭದಲ್ಲಿ ಕಾಣದಿದ್ದ ರೋಹಿಣಿ ನಕ್ಷತ್ರ ತಿಂಗಳ ಕೊನೆಗೆ ಕಾಣುವುದು. ಕಳೆದ ತಿಂಗಳು ಸುದ್ದಿ ಮಾಡಿದ್ದ ಮಂಗಳ ಗ್ರಹ ಈಗ ದಿನೇ ದಿನೇ ಪಶ್ಚಿಮಕ್ಕೆ ಸರಿಯುತ್ತಿದೆ. ೨೬ರಂದು ಮಂಗಳವನ್ನು ಗುರುತಿಸಲು ಚಂದ್ರನ ಸಹಾಯ ಪಡೆಯಬಹುದು. ಆ ಮುಂದೆ ಅದನ್ನು ಹುಡುಕುವುದೇ ಕಷ್ಟವಾಗಬಹುದು. ತಿಂಗಳ ಕೊನೆಗೆ ಸಂಜೆಗೆಂಪಿನಲ್ಲಿ ಕರಗಿಹೋಗುತ್ತದೆ. ಶನಿಗ್ರಹವಂತೂ ತಿಂಗಳ ಮೊದಲಲ್ಲೇ ಕಾಣುವುದು ಕಷ್ಟ. ಹೀಗೆ ಸಂಜೆ ಆಕಾಶದ ಪ್ರಕಾಶಮಾನ ಚುಕ್ಕೆಗಳೆಲ್ಲಾ ಕಳೆದುಹೋಗುವುದನ್ನು ತಪ್ಪಿಸಲೋ ಎಂಬಂತೆ ನಕ್ಷತ್ರಲೋಕವನ್ನು ಬೆಳಗಿಸಲು ಶುಕ್ರ ತಿಂಗಳ ಕೊನೆಗೆ ದಿಗಂತದ ಅಂಚಿನಲ್ಲಿ ಹಾಜರಾಗುತ್ತದೆ.

ಸಂಜೆಯ ಆಕಾಶದಲ್ಲಿ ಎದ್ದು ಕಾಣುವ ಪುಂಜಗಳೆಂದರೆ ನೈಋತ್ಯ ದಿಕ್ಕಿನಲ್ಲಿ ವೃಶ್ಚಿಕ ಮತ್ತು ಧನು. ಆಕಾಶಗಂಗೆಯ ಕೇಂದ್ರಭಾಗ ಇಲ್ಲಿರುವುದರಿಂದ ನಕ್ಷತ್ರಗಳ ದಟ್ಟಣೆ ಹೆಚ್ಚು. ಇದನ್ನು ಗುರುತಿಸಲು ಮಂಗಳಗ್ರಹವನ್ನೇ ಬಳಸಬಹುದು. ಅದು ಧನುರಾಶಿಯ ಮೂಲಕ ಹಾದುಹೋಗುತ್ತದೆ. ವಾಯುವ್ಯದಲ್ಲಿ ಕಾಣುವ ಮೂರು ಪ್ರಮುಖ ಪುಂಜಗಳು – ಗರುಡ (ಅಕ್ವಿಲಾ), ರಾಜಹಂಸ (ಸಿಗ್ನಸ್) ಮತ್ತು ವೀಣಾ (ಲೈರಾ) – ಇದರಲ್ಲಿಯ ಮೂರು ಪ್ರಕಾಶಮಾನ ನಕ್ಷತ್ರಗಳು ಕ್ರಮವಾಗಿ ಶ್ರವಣ (ಆಲ್ಟೇರ್), ಹಂಸಾಕ್ಷಿ (ದೆನೆಬ್) ಮತ್ತು ಅಭಿಜಿತ್ (ವೇಗಾ) – ಇವು ತ್ರಿಕೋಣಾಕಾರದಲ್ಲಿ ಕಾಣುವುವು. ಉತ್ತರದಲ್ಲಿ ಕುಂತಿ (ಕೆಸಿಯೋಪಿಯಾ) ಕಾಣುವುದು. ನೆತ್ತಿಯ ಮೇಲೆ ಚೌಕಾಕಾರದಲ್ಲಿ ಕಾಣುವುದು – ನಕುಲ (ಪೆಗಸಸ್). ಮಕರ ಮತ್ತು ಕುಂಭ ರಾಶಿಗಳು ಅಷ್ಟೇನೂ ಪ್ರಕಾಶಮಾನವಾಗಿಲ್ಲದಿದ್ದರೂ ಆಕಾಶ ಶುಭ್ರವಾಗಿರುವುದರಿಂದ ಗುರುತಿಸಬಹುದು. ಕುಂಬದ ದಕ್ಷಿಣಕ್ಕೆ ಇರುವ ಎರಡು ಚುಕ್ಕೆಗಳು ಬಕ ಎಂಬ ಪುಂಜಕ್ಕೆ ಸೇರಿವೆ. ನಕುಲ ಚೌಕದ ಪಕ್ಕ ಕಾಣುವ ಎರಡು ಪಂಚಕೋನಾಕೃತಿಗಳೇ ಮೀನರಾಶಿಯ ಮೀನುಗಳು. ರಾಶಿ ಚಕ್ರದ ವೃಶ್ಚಿಕ, ಧನು, ಮಕರ, ಕುಂಭ, ಮೀನ, ಮೇಷ ಇವು ಕ್ರಮವಾಗಿ ಉತ್ತರಕ್ಕೆ ತಿರುಗಿರುವುದನ್ನು ಗಮನಿಸಿ, ರಾಶಿಚಕ್ರ ಓರೆಯಾಗಿದೆ ಎಂದು ತಿಳಿಯಬಹುದು.

ತಿಂಗಳ ಮೊದಲ ದಿನ ಬುಧಗ್ರಹದ ಗರಿಷ್ಠ ಕೋನೋನ್ನತಿ. ಅಂದರೆ ಅದನ್ನು ಪತ್ತೆಮಾಡಲು ಸದವಕಾಶ. ಇದು ಬೆಳಗಿನ ಜಾವ ಕಾಣುತ್ತದೆ. ಗುರುಗ್ರಹವೂ ಬೆಳಗಿನ ಜಾವ ಕಾಣುತ್ತದೆ. ೧೪ರಂದು ಬೆಳಗಿನ ಜಾವ ಅರ್ಧಚಂದ್ರನ ಪಕ್ಕದಲ್ಲಿ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಅದು. ಮಧ್ಯರಾತ್ರಿಗೆ ಉದಯಿಸುತ್ತದೆ.

ಶನಿಗ್ರಹ ಸೂರ್ಯನಿಗೆ ಸಮೀಪವಾಗಿರುವುದರಿಂದ ಈ ತಿಂಗಳುದ್ದಕ್ಕೂ ಕಾಣುವುದಿಲ್ಲ. ಸೋಹೋ ಎಂಬ ನೌಕೆಯ ಚಿತ್ರಗಳನ್ನು ಇಂಟರ್‌ನೆಟ್‌ನಲ್ಲಿ ನೋಡಿ ಶನಿಗ್ರಹವನ್ನು ಗುರುತಿಸಬಹುದು. ಅದು ೧೮ರಂದು ಸೂರ್ಯನೊಡನೆಯೇ ಉದಯಿಸಿ, ಕಂತುತ್ತದೆ ಎಂಬ ಅಂಶವನ್ನೂ ತಿಳಿಯಬಹುದು. ಜೊತೆಗೆ ಬುಧಗ್ರಹವನ್ನೂ ಗುರುತಿಸಬಹುದು. ತಿಂಗಳ ಕೊನೆಗೆ ಬುಧಗ್ರಹ ಸೂರ್ಯನ ಇನ್ನೊಂದು ಬದಿಯಿಂದ ಹಾದುಹೋಗಲು ಸಜ್ಜಾಗಿರುತ್ತದೆ.

ಈ ತಿಂಗಳಲ್ಲಿ ಚಂದ್ರ ಯುರೇನಸ್ ಗ್ರಹವನ್ನು ಮರೆ ಮಾಡುವ ಆಚ್ಛಾದನೆ ನಡೆಯಲಿದೆ. ಆ ನೋಟ ನಮಗಿಲ್ಲ; ಆದರೆ ಆ ರಾತ್ರಿ (೪ರಂದು) ಚಂದ್ರನ ಆಸುಪಾಸನ್ನು ದುರ್ಬೀನಿನ ಮೂಲಕ ಹುಡುಕಿದಲ್ಲಿ ಯುರೇನಸ್ ಗ್ರಹ ಒಂದು ಚುಕ್ಕೆಯಂತೆ ಕಾಣಬಹುದು.

ನವೆಂಬರ್ ೧೭ – ೧೮ರ ಅವಧಿಯಲ್ಲಿ ಪ್ರತಿ ವರ್ಷದಂತೆ ಈ ವರ್ಷವೂ ಉಲ್ಕಾವೃಷ್ಟಿ ನಡೆಯಲಿದೆ. ಚಂದ್ರನ ಬೆಳಕೂ ಅಡ್ಡಿಯಾಗುವುದಿಲ್ಲ. ಆದ್ದರಿಂದ, ಆ ಮುಂಜಾವುಗಳಲ್ಲಿ ಆಕಾಶವನ್ನು ಗಮನಿಸಿದರೆ ಗಂಟೆಗೆ ೨೦–೩೦ ಉಲ್ಕೆಗಳು ಕಾಣುವುವು. ಇವು ಸಿಂಹರಾಶಿಯಿಂದ ಹೊರಟಂತೆ ಕಾಣುವುದರಿಂದ ಲಿಯೋನಿಡ್ಸ್ ಎಂಬ ಹೆಸರಿದೆ.

ಈ ತಿಂಗಳ ಹುಣ್ಣಿಮೆಯ ಚಂದ್ರನನ್ನು ಗಮನಿಸಿ. ೭ರ ಸಂಜೆ ಚಂದ್ರನ ಪಕ್ಕ ಕಾಣುವ ನಕ್ಷತ್ರಗುಚ್ಛವೇ ಕೃತ್ತಿಕಾ. ಆದ್ದರಿಂದ ಈ ತಿಂಗಳ ಹೆಸರು ಕಾರ್ತಿಕ. ಇನ್ನೂ ಸ್ವಲ್ಪ ಕೆಳಗೆ (ಪೂರ್ವಕ್ಕೆ) ಕಾಣುವ ಕೆಂಪು ನಕ್ಷತ್ರ ರೋಹಿಣಿ. ಇದನ್ನೊಳಗೊಂಡ ಇಂಗ್ಲಿಷ್ V ಆಕಾರದ ನಕ್ಷತ್ರಗುಚ್ಛಕ್ಕೆ ಹಯಡೆಸ್ ಎಂಬ ಹೆಸರಿದೆ. ಇದನ್ನು ಭಾರತೀಯರು ರೋಹಿಣೀ ಶಕಟ (ಗಾಡಿ) ಎಂದು ಕರೆದಿದ್ದಾರೆ. ೮ರಂದು ಚಂದ್ರ ಈ ಗುಚ್ಛದೊಳಗೇ ಕುಳಿತಿರುವಂತೆ ಕಾಣುತ್ತದೆ. ಇದನ್ನು ಲೆಕ್ಕ ಹಾಕಿ ತಿಳಿಯುವ ವಿಧಾನ ಭಾರತೀಯ ಖಗೋಳ ಪಠ್ಯಗಳಲ್ಲಿ ವಿಶೇಷವಾಗಿ ಕಂಡುಬರುವುದು. ಆ ಪರಿಚ್ಛೇದಕ್ಕೆ ರೋಹಿಣೀ ಶಕಟ ಭೇದ ಎಂದೇ ಹೆಸರಿದೆ.



*ನವೆಂಬರ್ ೭ ಮತ್ತು ೮ರಂದು ಚಂದ್ರ ಸ್ಥಾನಗಳು – ರೋಹಿಣಿ ಶಕಟ ಎಂಬುದು ಹಯಡೆಸ್ ಎಂಬ ನಕ್ಷತ್ರ ಗುಚ್ಛ – ಇಂಗ್ಲಿಷ್ ವಿ ಅಕ್ಷರದ ಆಕಾರದಲ್ಲಿದೆ.*

**ನವೆಂಬರ್ ಖಗೋಳ ದಿನಚರಿ** (*✶ ಛಾಯಾಗ್ರಹಣಕ್ಕೆ ಸದವಕಾಶ*)

೧ ಮುಂಜಾವು – ಬುಧಗ್ರಹದ ಗರಿಷ್ಠ ಕೋನೋನ್ನತಿ✶
೩ ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ
೪ ಯುರೇನಸ್‌ನ ಆಚ್ಛಾದನೆ
೭ ಹುಣ್ಣಿಮೆ ೦೩:೫೩✶
೧೪ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ನಡುರಾತ್ರಿಗೆ; ಗುರು ಚಂದ್ರ ಜೋಡಿ✶
೧೫ ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ
೧೮ ಶನಿಗ್ರಹದ ಯುತಿ
೧೭–೧೮ ಲಿಯೋನಿಡ್ಸ್ ಉಲ್ಕಾವೃಷ್ಟಿ✶
೨೨ ಅಮಾವಾಸ್ಯೆ ೧೮:೦೨ಕ್ಕೆ
೨೩ ಚಂದ್ರ – ಶುಕ್ರ ಜೋಡಿ
೨೬ ಮಂಗಳ–ಚಂದ್ರ ೭ ಡಿಗ್ರಿ ಅಂತರದಲ್ಲಿ✶
೨೭ ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ
೨೯ ಚಾಂದ್ರಮಾಸದ ಮೊದಲ ಪಾದ

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

ದಿನಬೆಳಗಾಗ ಪತ್ರಿಕೆಯ ಪುಟಗಳನ್ನು ತೆರೆಯುತ್ತಿದ್ದಂತೆಯೆ ದೇಶದ ಯಾವುದೋ ಒಂದು ಭಾಗದಲ್ಲಿ 'ಅತ್ಯಾಚಾರ' ನಡೆದ ಸುದ್ದಿ ಕಣ್ಣಿಗೆ ಬೀಳುತ್ತದೆ. ಸರಿ; ಅಪರಾಧಿಯನ್ನು ಕೂಡಲೇ ಬಂಧಿಸಬೇಕು; ಅಪರಾಧಿಗೆ ಮರಣದಂಡನೆಯನ್ನೇ ವಿಧಿಸಬೇಕು; ಪೊಲೀಸರು ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುತ್ತಿಲ್ಲ, ಸರ್ಕಾರವು ನಿಷ್ಕ್ರಿಯವಾಗಿದೆ – ಎಂಬಂಥ ಘೋಷಣೆಗಳೊಡನೆ ಬೀದಿಗಿಳಿದು ಪ್ರತಿಭಟಿಸುವ ಮೆರವಣಿಗೆಗಳು (ಎಷ್ಟೋ ವೇಳೆ ಸ್ವತಃ ಅಪರಾಧಿಯೂ ಇಂತಹ ಮೆರವಣಿಗೆಯಲ್ಲಿ ಸೇರಿಕೊಂಡಿದ್ದರೆ ಆಶ್ಚರ್ಯವಿಲ್ಲ!). ವಿಧಾನಸಭೆಗಳಲ್ಲಿ ಪ್ರತಿಪಕ್ಷಗಳು ಸರ್ಕಾರದ ವಿರುದ್ಧ 'ಧರಣಿ' ನಡೆಸುತ್ತವೆ; ಸಭಾತ್ಯಾಗ ಮಾಡುತ್ತವೆ. ವಿರೋಧ ಪಕ್ಷದ ರಾಜಕಾರಣಿಗಳು "ಲೈಂಗಿಕ ದೌರ್ಜನ್ಯಗಳನ್ನು ಹತ್ತಿಕ್ಕಲು ಗೂಂಡಾ ಕಾಯಿದೆಯನ್ನು ಜಾರಿಗೆ ತರಬೇಕು; 'ಕಂಡಲ್ಲಿ ಗುಂಡಿಕ್ಕುವ' ಸ್ವಾತಂತ್ರ್ಯವನ್ನು ಪೊಲೀಸರಿಗೆ ಕೊಡಬೇಕು" – ಎಂದು ಒತ್ತಾಯಿಸುತ್ತಾರೆ. ವಕೀಲರ ಪರಿಷತ್ತು ಕೂಡ ಲೈಂಗಿಕ ದೌರ್ಜನ್ಯವನ್ನು ತೀವ್ರವಾಗಿ ಖಂಡಿಸುತ್ತದೆ. (ಆದರೆ ಯಾವ ನ್ಯಾಯವಾದಿಯೂ "ಆರೋಪಿಯ ಪರ ವಕಾಲತ್ತು ವಹಿಸಕೂಡದೆಂದು" ಠರಾವು ಮಾಡುವುದು ಸಾಧ್ಯವೆ?)

ಪತ್ರಿಕೆಗಳಲ್ಲಿ ಎಲ್ಲ ಬಗೆಯ ಲೈಂಗಿಕ ದೌರ್ಜನ್ಯಗಳನ್ನು 'ಅತ್ಯಾಚಾರ'ವೆಂದೇ ವರದಿ ಮಾಡಲಾಗುತ್ತದೆ. ಇದೆಲ್ಲಕ್ಕಿಂತ ಹೆಚ್ಚಾಗಿ ಇಂಗ್ಲಿಷಿನ 'ರೇಪ್' (Rape = ಬಲಾತ್ಕಾರ ಸಂಭೋಗ, ಅಕ್ರಮ ಸಂಭೋಗ) ಪದದ ಬಳಕೆ ನಮ್ಮಲ್ಲಿ ಎಷ್ಟು ಸರಾಗವಾಗಿಬಿಟ್ಟಿದೆಯೆಂದರೆ, ವಿದ್ಯಾವಂತಳಾದ ಮನೆಯೊಡತಿಯಿಂದ ಹಿಡಿದು ಅನಕ್ಷರಸ್ಥಳಾದ ಮನೆಗೆಲಸದಾಕೆಯವರೆಗೆ ಎಲ್ಲರೂ ಈ ಶಬ್ದವನ್ನು ನಿಸ್ಸಂಕೋಚವಾಗಿ ಅಂದು ಬಿಡುತ್ತಾರೆ. (ನಿನ್ನೆ ರಾತ್ರಿ ನನ್ನ ಗಂಡ ನನ್ನನ್ನು 'ರೇಪ್' ಮಾಡಿದ; ಮೂರು ನಾಲ್ಕು ದಿನಗಳಿಗೊಮ್ಮೆ 'ರೇಪ್' ಮಾಡುತ್ತಾನೆ – ಎಂಬಂಥ ವಿಚಿತ್ರ ಪ್ರಯೋಗಗಳೂ ಕೇಳಿಬರುವುದುಂಟು!).

ಚಿಕ್ಕಮಕ್ಕಳು, ಬುದ್ಧಿಮಾಂದ್ಯರು, ಅಪರಿಚಿತರು, ಅಸಹಾಯಕರಾದ – ಹೆಂಗಸರ ಮೇಲೆ

# ಲೈಂಗಿಕ ದೌರ್ಜನ್ಯ: ಹಲವು ಆಯಾಮಗಳು



ಹಲ್ಲೆಮಾಡಿ ಲೈಂಗಿಕ ಸಂಪರ್ಕ ಮಾಡುವುದು ವಿಕೃತ ಮನಸ್ಸಿನ ಹೀನ ಕೃತ್ಯವೆಂಬುದು ನಿರ್ವಿವಾದ; ಹಾಗೆಯೆ ದರೋಡೆ ಮಾಡಲು ಬಂದವರನ್ನು ಪ್ರತಿಭಟಿಸುವ ಹೆಂಗಸರನ್ನು ಹಿಂಸಿಸಿ ಗಾಯಗೊಳಿಸಿ, ಬಾಯಿ ಮುಚ್ಚಿಸಿ ಲೈಂಗಿಕ ದೌರ್ಜನ್ಯ ನಡೆಸುವುದು ಸಾಮೂಹಿಕ ಅತ್ಯಾಚಾರ ಕೂಡ. ಇವೆಲ್ಲ ಘೋರ ಹೀನಾತಿಹೀನ ಅಪರಾಧಗಳು – ಇಂತಹ ಪ್ರಕರಣಗಳಲ್ಲಿ ಕಾನೂನು ಪ್ರಕಾರ ಸಾಧ್ಯವಿರುವ ಅತ್ಯಂತ ಕಠಿಣವಾದ ಶಿಕ್ಷೆಯನ್ನು ವಿಧಿಸಬೇಕೆಂಬ ಬಗೆಗೆ ಭಿನ್ನಾಭಿಪ್ರಾಯವಿರುವುದು ಸಾಧ್ಯವಿಲ್ಲ.

ಈ ಹಿನ್ನೆಲೆಯಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಸಂಬಂಧಿಸಿದಂತೆ ದೆಹಲಿಯ ಆರು ಜಿಲ್ಲಾ ನ್ಯಾಯಾಲಯಗಳಲ್ಲಿ ೨೦೧೩ರಲ್ಲಿ ದಾಖಲಾದ ೫೮೩ ಮೊಕದ್ದಮೆಗಳು ಮತ್ತು ಅವುಗಳ ಫಲಿತಾಂಶಗಳನ್ನು 'ದಿ ಹಿಂದು' ಪತ್ರಿಕೆಯು ಸಮೀಕ್ಷಿಸಿ ಮೂರು ಕಂತುಗಳಲ್ಲಿ (ಜುಲೈ ೩೦, ೩೧, ಆಗಸ್ಟ್ ೧) ಪ್ರಕಟಿಸಿರುವ ವರದಿಯು ಪರಿಶೀಲನಾರ್ಹವಾಗಿದೆ:

ಮೇಲೆ ಹೇಳಿದ ೫೮೩ ಮೊಕದ್ದಮೆಗಳನ್ನು ೮ ಜನ ಮಹಿಳಾ ನ್ಯಾಯಾಧಿಪತಿಗಳೂ ಸೇರಿದಂತೆ ಒಟ್ಟು ೨೯ ಜನ ನ್ಯಾಯಮೂರ್ತಿಗಳು ವಿಚಾರಣೆ ನಡೆಸಿದರು.

ಶಿಕ್ಷೆ ವಿಧಿಸುವ ವಿಚಾರದಲ್ಲಿ ಖಾಯಂ ನ್ಯಾಯಾಧೀಶರು ಮತ್ತು ಶೀಘ್ರ ವಿಚಾರಣೆ ನಡೆಸುವ ಸಲುವಾಗಿ ನೇಮಕಗೊಂಡ ಹೆಚ್ಚುವರಿ ಸತ್ರಪ ನ್ಯಾಯಾಧೀಶರುಗಳ (ಅಡಿಷನಲ್ ಸೆಶನ್ಸ್ ಜಡ್ಜ್) ನಡುವೆ ಸಾಕಷ್ಟು ವ್ಯತ್ಯಾಸಗಳು ಕಂಡುಬಂದವು. ನ್ಯಾಯಮೂರ್ತಿ ಎಂ. ಸಿ. ಗುಪ್ತಾ ಅವರು ಅತ್ಯಂತ ಹೆಚ್ಚು ಪ್ರಕರಣಗಳಲ್ಲಿ ಶೇ. ೯೩ರಷ್ಟು ಶಿಕ್ಷೆ ವಿಧಿಸಿದ್ದರು. ಇನ್ನಿತರ ನ್ಯಾಯಮೂರ್ತಿಗಳು ಶೇ. ೧೦ರಿಂದ ೨೦ರ ಪ್ರಮಾಣದಲ್ಲಿ ಶಿಕ್ಷೆ ವಿಧಿಸಿದ್ದರು.

**ಮೊಕದ್ದಮೆಗಳ ದಾಖಲಾತಿ**

ಲೈಂಗಿಕ ದೌರ್ಜನ್ಯ ಪ್ರಕರಣಗಳು ಭಾರತೀಯ ದಂಡಸಂಹಿತೆ (ಐ.ಪಿ.ಸಿ.) ವಿಭಾಗ ೩೭೬ (ಅತ್ಯಾಚಾರ), ೩೭೬ (ಎ) (ಬಂಧನದಲ್ಲಿಟ್ಟು ಅತ್ಯಾಚಾರ), ೩೭೬ (೨.೭) ಹನ್ನೆರಡು ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳ ಮೇಲಿನ ಅತ್ಯಾಚಾರ ಹಾಗೂ ೩೭೬ (g) (ಸಾಮೂಹಿಕ ಅತ್ಯಾಚಾರ)ಗಳ ಅಡಿ ದಾಖಲಾಗುತ್ತವೆ.

ಮಕ್ಕಳ ಮೇಲಿನ ಲೈಂಗಿಕ ದೌರ್ಜನ್ಯವನ್ನು ಈಗ, ಲೈಂಗಿಕ ದೌರ್ಜನ್ಯದಿಂದ ಮಗುವಿಗೆ ರಕ್ಷಣೆ ನೀಡುವ ಪೋಕ್ಸೋ (POCSO - 2012) ಕಾಯ್ದೆಯ ಅಡಿಯಲ್ಲಿ ದಾಖಲಿಸಲಾಗುತ್ತದೆ. ಕೆಲವು ಮೊಕದ್ದಮೆಗಳನ್ನು ಪೋಕ್ಸೋ ಮತ್ತು ಸಾಮಾನ್ಯ ಪೊಲೀಸು ಕಾಯ್ದೆ ವಿಭಾಗಗಳೆರಡರ ಪ್ರಕಾರವೂ ದಾಖಲಿಸಿ, ವಿಚಾರಣೆ ಗೊಳಪಡಿಸಲಾಗುತ್ತದೆ.

**ವಿಚಾರಣೆಯ ಸ್ವರೂಪ**

ನ್ಯಾಯಾಲಯಗಳಲ್ಲಿ ಮೊಕದ್ದಮೆಯ ವಿಚಾರಣೆ ನಡೆಯುವಾಗ ದೂರು ದಾಖಲಿಸಿದ ಸಂತ್ರಸ್ತೆಯ ಹೇಳಿಕೆ, ವೈದ್ಯಕೀಯ ಸಾಕ್ಷ್ಯ ಪುರಾವೆ ಸಂತ್ರಸ್ತೆಯ ವಯಸ್ಸು, ಲೈಂಗಿಕ ಸಂಪರ್ಕಕ್ಕೆ ಒಪ್ಪಿಗೆ ಅಥವಾ ಪ್ರತಿಭಟನೆ ಈ ಎಲ್ಲ ವಿಚಾರಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ.

ಮೇಲೆ ಹೇಳಿದ ೫೮೩ ಪ್ರಕರಣಗಳ ಪೈಕಿ ೧೨೩ ಪ್ರಕರಣಗಳಲ್ಲಿ ದೂರು ದಾಖಲಿಸಿದವರು ಪತ್ತೆಯಾಗಲಿಲ್ಲ ಅಥವಾ ನ್ಯಾಯಾಲಯದಲ್ಲಿ ಹಾಜರಾಗಿ ಹೇಳಿಕೆ ನೀಡಲಿಲ್ಲ ಅಥವಾ ಪ್ರತಿಕೂಲ ಸಾಕ್ಷ್ಯ ನುಡಿದರು. ಅಂದರೆ, ತಾವು 'ಅತ್ಯಾಚಾರ'ವೆಂದು ದೂರು ದಾಖಲಿಸಿಲ್ಲವೆಂದರು ಅಥವಾ ಸುಳ್ಳು ದೂರು ಕೊಟ್ಟಿರುವುದಾಗಿ ಒಪ್ಪಿಕೊಂಡರು. ಇವುಗಳಲ್ಲಿ ಕೆಲವು ಪ್ರಕರಣಗಳು ದೂರು ದಾಖಲಿಸಿದ ಹೆಂಗಸು ದೂರನ್ನು ಹಿಂಪಡೆಯುವಂತೆ ಆಕೆಯ ಬಂಧುಗಳು, ಸಮಾಜದ ಹಿರಿಯರು ಹೇರಿದ ಒತ್ತಡದಿಂದ ನಡೆದಿರಬಹುದು. ಎರಡು ಪ್ರಕರಣಗಳಲ್ಲಿ ನ್ಯಾಯಾಲಯದಲ್ಲಿ ಹೇಳಿಕೆ ನೀಡುವ ಮುಂಚೆ ಸಮಾಜದ ಮುಖಂಡರು ಮಧ್ಯಪ್ರವೇಶಿಸಿ, ದೂರನ್ನು ಹಿಂಪಡೆಯುವಂತೆ ಒತ್ತಾಯ ಮಾಡಲಾಯಿತೆಂದು ಹೇಳಲಾಯಿತು. ಇನ್ನು ಹಲವು ಪ್ರಕರಣಗಳಲ್ಲಿ ಹಣದಾಸೆಯಿಂದ ಅಥವಾ ಆಸ್ತಿಪಾಸ್ತಿಗಳ ಬಗೆಗಿನ ಜಗಳದ ಕಾರಣದಿಂದ 'ಅತ್ಯಾಚಾರ'ದ ದೂರು ದಾಖಲಿಸಿದುದಾಗಿ ತಿಳಿದುಬಂದಿತು. ಸಹಜವಾಗಿಯೆ ಇಂತಹ ಮೊಕದ್ದಮೆಗಳು ನ್ಯಾಯಾಲಯಗಳಲ್ಲಿ ವಿಚಾರಣೆಯ ಹಂತದಲ್ಲಿಯೆ ಬಿದ್ದುಹೋದವು.

ನ್ಯಾಯಾಲಯಗಳಲ್ಲಿ ವಾದವಿವಾದಗಳು ಪೂರ್ಣವಾಗಿ ನಡೆದ ೪೬೦ ಮೊಕದ್ದಮೆಗಳ ಪೈಕಿ ಹೆಚ್ಚಿನವು (ಸುಮಾರು ೧೮೯ ಪ್ರಕರಣಗಳು) ಪರಸ್ಪರ ಸಮ್ಮತಿಯಿಂದ ನಡೆದ ಲೈಂಗಿಕ ಪ್ರಕ್ರಿಯೆಗಳನ್ನು ಒಳಗೊಂಡಿದ್ದವು. ೧೮೯ ಮೊಕದ್ದಮೆಗಳ ಪೈಕಿ ೧೭೪ ಪ್ರಕರಣಗಳು ಗಂಡಸು ಮತ್ತು ಹೆಂಗಸು ಜೊತೆಯಾಗಿ ಓಡಿಹೋದ ಅನಂತರ ನಾಪತ್ತೆಯಾದವರ ಪೋಷಕರು ಹೂಡಿದ ಮೊಕದ್ದಮೆಗಳಾಗಿದ್ದವು. ಈ ಪೈಕಿ ೧೦೭ ಪ್ರಕರಣಗಳಲ್ಲಿ ಯಾರ ಹೆಸರಿನಲ್ಲಿ ದೂರು ದಾಖಲಾಗಿತ್ತೋ ಆ ಹೆಂಗಸು ಪೊಲೀಸರ ಎದುರಿಗೆ, ವೈದ್ಯರ ಬಳಿ, ಸ್ಥಳೀಯ ಮ್ಯಾಜಿಸ್ಟ್ರೇಟರ ಸಮ್ಮುಖದಲ್ಲಿ ಮತ್ತು ಜಿಲ್ಲಾ ನ್ಯಾಯಾಲಯದಲ್ಲಿ ಒಂದೇ ಬಗೆಯ ಹೇಳಿಕೆ ನೀಡಿದ್ದಳು. ಪಾಟಿ ಸವಾಲಿನಲ್ಲಿ ಕೂಡ ಸುಸಂಗತವಾದ, ದೃಢವಾದ ಉತ್ತರಗಳನ್ನೇ ಕೊಟ್ಟಿದ್ದಳು.

ಮಹಿಳಾ ಸ್ವಾತಂತ್ರ್ಯ ಚಳವಳಿಗಾರರೂ, ನ್ಯಾಯವಾದಿಗಳೂ ಇಂತಹ ಪ್ರಕರಣಗಳಲ್ಲಿ ಸಂದಿಗ್ಧಕ್ಕೊಳಗಾಗುತ್ತಾರೆ. ಒಂದು ಕಡೆ ಲೈಂಗಿಕ ಸಂಪರ್ಕಕ್ಕೆ ಸಮ್ಮತಿ ಸೂಚಿಸುವ ಅಥವಾ ಪ್ರತಿಭಟಿಸುವ ಸ್ವಾತಂತ್ರ್ಯವು ಮಹಿಳೆಗೆ ಇರಬೇಕು – ಎಂದು ಪ್ರತಿಪಾದಿಸುತ್ತ, ಮತ್ತೊಂದು ಕಡೆ 'ಅತ್ಯಾಚಾರ' ನಡೆಯಿತೆಂದು ಮೊಕದ್ದಮೆ ಹೂಡುವ – ಎರಡೂ ಅವಕಾಶಗಳು ಬೇಕೆಂದು ಹೇಳಿದರೆ ಹೇಗೆ? ಆದ್ದರಿಂದ



"ಸಮ್ಮತಿಯ ಮೂಲಕ ನಡೆದ ಲೈಂಗಿಕ ಸಂಪರ್ಕವನ್ನು 'ಅತ್ಯಾಚಾರ' ಎನ್ನುವಂತಿಲ್ಲ" – ಎಂದು ಸ್ತ್ರೀ ಸ್ವಾತಂತ್ರ್ಯವಾದಿಗಳೂ, ವಕೀಲರೂ ಆದ ವೃಂದಾ ಗ್ರೋವರ್ ಅಭಿಪ್ರಾಯಪಡುತ್ತಾರೆ.

ಇಷ್ಟಾದರೂ, ಪೊಲೀಸು ಕಾನೂನಿನಲ್ಲಿ ಬದಲಾವಣೆಯಾಗುವವರೆಗೆ ಪೊಲೀಸ್ ಅಧಿಕಾರಿಗಳು ಇವುಗಳನ್ನು 'ಅತ್ಯಾಚಾರ'ವೆಂದೇ ದಾಖಲಿಸಬೇಕಾಗುತ್ತದೆ. ಅಲ್ಲದೆ, ಸಾಮಾನ್ಯವಾಗಿ ಪೊಲೀಸರಿಗೆ ಹೆಣ್ಣಿನ ಪೋಷಕರ ಬಗೆಗೆ ಸ್ವಲ್ಪ ಸಹಾನುಭೂತಿ ಇರುತ್ತದೆ. ಜೊತೆಗೆ, "ನಾವು ಇಂಥ ಪ್ರಕರಣಗಳನ್ನು 'ಅತ್ಯಾಚಾರ'ವೆಂದು ದಾಖಲಿಸದಿದ್ದರೆ ನಮ್ಮ ಮೇಲೆಯೇ ಕ್ರಮ ತೆಗೆದುಕೊಳ್ಳಲಾಗುತ್ತದೆ" ಎಂದು ದೆಹಲಿಯ ಒಬ್ಬ ಹಿರಿಯ ಪೊಲೀಸು ಅಧಿಕಾರಿ ಹೇಳಿದರಂತೆ.

೨೦೧೩ರಲ್ಲಿ ವಿಚಾರಣೆಯಾದ ಸುಮಾರು ೬೦೦ ಮೊಕದ್ದಮೆಗಳಲ್ಲಿ ೧೬೨ ಮೊಕದ್ದಮೆಗಳು ಸಾಮಾನ್ಯವಾಗಿ ಅರ್ಥೈಸುವಂತೆ 'ಅತ್ಯಾಚಾರ ಪ್ರಕರಣ'ಗಳಾಗಿದ್ದವು. ಇವುಗಳಲ್ಲಿ ೯ ಪ್ರಕರಣಗಳು ಹೆಣ್ಣಿನ ಮಾರಾಟ ಮತ್ತು ವ್ಯಭಿಚಾರಕ್ಕೆ ಸಂಬಂಧಿಸಿದ್ದವು. ೩೦ ಪ್ರಕರಣಗಳು ಹುಡುಗಿಯ/ಹೆಂಗಸಿನ ಹತ್ತಿರದ ಸಂಬಂಧಿಗಳನ್ನು ಒಳಗೊಂಡಿದ್ದರೆ, ೧೨ ಪ್ರಕರಣಗಳಲ್ಲಿ ಅಪರಿಚಿತರು, ೧೧೧ರಲ್ಲಿ ನೆರೆಹೊರೆಯವರು ಅಥವಾ ಪರಿಚಿತರು ಸೇರಿಕೊಂಡಿದ್ದರು. ತೀರ ಅಪರಿಚಿತರಿಂದ (ದೆಹಲಿಯಲ್ಲಿ, ಡಿಸೆಂಬರ್ ೧೬ರಂದು ನಡೆದ–ನಿರ್ಭಯಾ ಪ್ರಕರಣದ ಹಾಗೆ) ಅಥವಾ ಕುಟುಂಬಕ್ಕೆ ಹತ್ತಿರವಾದವರಿಂದ ನಡೆದ ಅತ್ಯಾಚಾರಗಳು ಅತ್ಯಂತ ಕ್ರೂರವಾಗಿದ್ದು ಹೆಚ್ಚಿನ ಪ್ರಮಾಣದ ಶಿಕ್ಷೆಗೆ ಗುರಿಯಾಗುತ್ತವೆ.

**ಹದಿಹರೆಯದ ಪ್ರೇಮ**

ನ್ಯಾಯಾಲಯಗಳ ಮುಂದೆ ಬರುವ ಹಲವು ಲೈಂಗಿಕ ದೌರ್ಜನ್ಯ ಪ್ರಕರಣಗಳು ಹುಡುಗಿಯ ವಯೋಮಾನಕ್ಕೆ ಸಂಬಂಧಪಟ್ಟವುಗಳಾಗಿರುತ್ತವೆ. ಹುಡುಗಿಯು ಲೈಂಗಿಕ ಸಂಪರ್ಕಕ್ಕೆ ಸಮ್ಮತಿ ಸೂಚಿಸಲು, ಅಂದರೆ 'ಪ್ರಾಪ್ತವಯಸ್ಕ'ಳಾಗಲು ಆಕೆಗೆ ಹದಿನಾರು (೧೬) ವರ್ಷಗಳಾಗಿರಬೇಕು – ಎಂಬುದು ಈಚಿನವರೆಗೆ ಕಾನೂನಿನ ನಿಯಮವಾಗಿತ್ತು. ಹೀಗಾಗಿ ಹುಡುಗಿಯು 'ಅಪ್ರಾಪ್ತ' ವಯಸ್ಕಳು ಎಂಬ ಆಧಾರದ ಮೇಲೆ ಮೊಕದ್ದಮೆ ಹೂಡಲಾಗುತ್ತಿತ್ತು. ದೆಹಲಿಯ ನ್ಯಾಯಾಲಯಗಳ ಮುಂದೆ ಬಂದ ಹಲವು ಪ್ರಕರಣಗಳಲ್ಲಿ ಹುಡುಗಿಯು 'ಅಪ್ರಾಪ್ತ' ವಯಸ್ಕಳಾಗಿದ್ದುದರಿಂದ ಯುವಕನು ತಪ್ಪಿತಸ್ಥನೆಂದು ತೀರ್ಮಾನವಾಗಿ ಶಿಕ್ಷೆಯಾಯಿತು. ಇಂತಹ ಪ್ರಕರಣಗಳನ್ನು ಕೆಲವು ನ್ಯಾಯಾಧೀಶರು ಹೆಚ್ಚು ಸಹಾನುಭೂತಿಯಿಂದ ನೋಡಿರುವುದುಂಟು. ನಿದರ್ಶನಕ್ಕೆ; ನ್ಯಾಯಮೂರ್ತಿಗಳಾದ ವೀರೇಂದ್ರ ಭಟ್ ಮತ್ತು ಕಾವೇರಿ ಬವೇಜ ಇವರು, ಆರೋಪಿಗಳಾದ ಯುವಕರು ಅಷ್ಟು ದಿನಗಳವರೆಗೆ ಬಂಧನದಲ್ಲಿದ್ದ ಅವಧಿಯನ್ನೇ ಸೂಕ್ತ ಶಿಕ್ಷೆಯೆಂದು ಪರಿಗಣಿಸಿದರು. ಅಥವಾ ಒಂದು ವಾರದ ಮಟ್ಟಿಗೆ ಮಾತ್ರ ಪೊಲೀಸರ ಕಣ್ಗಾವಲಿನಲ್ಲಿ, "ಕೆನ್"ಗಳಲ್ಲಿ, ಇರುವಂತೆ ವಿಧಿಸಿದರು. (ಆದರೆ, ೨೦೧೩ರಲ್ಲಿ ತಿದ್ದುಪಡಿಯಾದ ಕಾನೂನಿನಲ್ಲಿ ನ್ಯಾಯಾಧೀಶರಿಗಿದ್ದ ಈ ಬಗೆಯ "ವಿವೇಚನಾ ಸ್ವಾತಂತ್ರ್ಯ"ವನ್ನು ಹಿಂಪಡೆಯಲಾಗಿದೆ ಮತ್ತು ಹುಡುಗಿಯು ಲೈಂಗಿಕ ಸಂಪರ್ಕಕ್ಕೆ ಒಪ್ಪಿಗೆ ಸೂಚಿಸಬಹುದಾದ ವಯೋಮಿತಿಯನ್ನು ೧೮ (ಹದಿನೆಂಟು) ವರ್ಷಗಳಿಗೆ ಹೆಚ್ಚಿಸಿ "ಅತ್ಯಾಚಾರದ ವ್ಯಾಖ್ಯಾನ"ವನ್ನು ವಿಸ್ತರಿಸಲಾಗಿದೆ).

ಕಾನೂನಿನಲ್ಲಿ "ಪ್ರಾಪ್ತವಯಸ್ಸಿನ" ಮಿತಿಯನ್ನು ಹೆಚ್ಚಿಸಲಾಗಿದೆಯಾದರೂ ವಾಸ್ತವದಲ್ಲಿ ಆಧುನಿಕ ಆಹಾರ ಪದ್ಧತಿ, ಜೀವನ ವಿಧಾನಗಳಿಂದಾಗಿ ಹುಡುಗಿಯರು ಹಿಂದಿಗಿಂತ ಬೇಗನೇ 'ಪ್ರಾಪ್ತವಯಸ್ಕ'ರಾಗುತ್ತಾರೆಂಬುದು ತಿಳಿದುಬಂದಿದೆ. (ಸಾಂಪ್ರದಾಯಿಕ ಮದುವೆಗಳಲ್ಲಿ 'ಕನ್ಯೆಯು ಇನ್ನೂ ಎಂಟು ವರ್ಷದವಳು' ಎಂದೇ ಹೇಳಲಾಗುತ್ತದೆಯೆಂಬುದನ್ನು ಬಿಡಿ!) ಸಾಮಾನ್ಯವಾಗಿ ೧೩ರಿಂದ ೧೯ ವರ್ಷಗಳ ವಯೋಮಾನದ 'ಹದಿಹರೆಯ'ದವರಲ್ಲಿ ಲೈಂಗಿಕತೆಯ ಬಗೆಗೆ ಅದಮ್ಯ ಕುತೂಹಲ, ಅನ್ಯಲಿಂಗಿಯ ಸಾಮೀಪ್ಯದ, ಸಂಪರ್ಕದ ಬಯಕೆ ತೀವ್ರವಾಗಿರುತ್ತದೆ. ಇದನ್ನು ಹತ್ತಿಕ್ಕುವುದೂ ಸುಲಭವಲ್ಲ. ಲೈಂಗಿಕತೆಯ ಬಗೆಗೆ ಹದಿಹರೆಯದವರ ಕುತೂಹಲ ಮತ್ತು ಸಂಪರ್ಕದ ಬಯಕೆಯನ್ನು ಕೆಲಮಟ್ಟಿಗಾದರೂ ನಿಯಂತ್ರಿಸಲು "ಲೈಂಗಿಕ ಶಿಕ್ಷಣ"ವು ಸೂಕ್ತವಾದ ಮಾರ್ಗವೆಂಬುದು ಹಲವರ ಅಭಿಪ್ರಾಯ. ಆದರೆ 'ಲೈಂಗಿಕ ಶಿಕ್ಷಣ'ವೆಂದರೇನು, ತರಗತಿಗಳಲ್ಲಿ ಬೋಧಿಸಬಹುದಾದ ಲೈಂಗಿಕ ಶಿಕ್ಷಣದ ಸ್ವರೂಪವೇನು, ಅದರ ಪಠ್ಯಕ್ರಮ ಹೇಗಿರುತ್ತದೆ, ಬೋಧಕರ ಅರ್ಹತೆ ಏನಿರಬೇಕು – ಈ ಎಲ್ಲ ಅಂಶಗಳ ಬಗೆಗೆ ಸಾರ್ವಜನಿಕರಿಗೆ ಸಾಕಷ್ಟು ಮಾಹಿತಿಯಿಲ್ಲ.

ತಮ್ಮ ಮಕ್ಕಳಿಗೆ 'ಶಾಲೆಗಳಲ್ಲಿ ಲೈಂಗಿಕ ಶಿಕ್ಷಣ' ಎಂಬ ಮಾತನ್ನು ಕೇಳಿದೊಡನೆ ಮುಜುಗರಪಡುವ, ಗಾಬರಿಗೊಳ್ಳುವ ಪೋಷಕರೂ ಇದ್ದಾರೆ. 'ಸರ್ಕಾರಕ್ಕೆ, ಶಿಕ್ಷಕರಿಗೆ ಈ ಎಲ್ಲ ಉಸಾಬರಿ ಏಕೆ?' ಎಂದು ಪ್ರಶ್ನಿಸುವವರೂ ಉಂಟು. ಇನ್ನು ನಮ್ಮ ಸಾಂಪ್ರದಾಯಿಕ ಕುಟುಂಬಗಳಲ್ಲಿ ಲೈಂಗಿಕ ವಿಚಾರಗಳನ್ನು ಕುರಿತು ಮಾತಾಡುವ, ಚರ್ಚಿಸುವ ಸಾಧ್ಯತೆಯೂ ಇಲ್ಲ. ಹುಡುಗಿಯರು ಋತುಮತಿಯಾದಾಗ ಆರತಿ ಎತ್ತಿ, ಸಂಭ್ರಮಿಸುತ್ತಾರಾದರೂ, ಅನಂತರ ಹುಡುಗಿಯರಲ್ಲಿ ಉಂಟಾಗುವ ಮನೋದೈಹಿಕ ವೇದನೆ/ಸಂವೇದನೆಗಳನ್ನು ಹೇಗೆ ನಿರ್ವಹಿಸಬೇಕೆಂದು ತಿಳಿಸಿಕೊಡುವ ಅವಕಾಶಗಳಿಲ್ಲ. ಯಶವಂತ ಚಿತ್ತಾಲರ 'ಅಬೋಲಿನ' ಎಂಬ ತಾಯಿಯಿಲ್ಲದ ಹುಡುಗಿ ಕಥೆಯ ವಸ್ತು ಹಳೆಯಕಾಲದ್ದು ಎನ್ನಬಹುದಾದರೂ, ಅದರಲ್ಲಿ ಒಂದು ಸಂದೇಶವಿದೆ. ಅಬೋಲಿನ ಬಸಿರಾಗುವುದು (ಗರ್ಭಧಾರಣೆ) ಎಂದರೇನು, ಎತ್ತ – ಎಂದು ತಿಳಿಯದೆ ಯಾರೋ ಹೇಳಿದ ಮಾತನ್ನು ನಂಬುತ್ತಾಳೆ; ತನ್ನ ಗೆಳತಿ ಸುಮತಿಯ ತಾಯಿಯನ್ನು ಕೇಳಿದಾಗ ಅವರು, 'ಹುಡುಗಿಯರು ಅಂಥ ಮಾತೆಲ್ಲ ಆಡಬಾರದು' ಎಂದು ಗದರಿಸುತ್ತಾರೆ. ಹುಡುಗಿಯು ಹೆದರಿ ಪ್ರಾಣ ಕಳೆದುಕೊಳ್ಳುವುದನ್ನು ಇಲ್ಲಿ ನೆನೆಯಬಹುದು – ಈ ಹಿನ್ನೆಲೆಯಲ್ಲಿ 'ಲೈಂಗಿಕ ಶಿಕ್ಷಣ'ದ ಅಗತ್ಯವನ್ನು ಸಮರ್ಥಿಸಬಹುದಾದರೂ, ಅದನ್ನು ಜಾರಿಗೊಳಿಸುವ ಮುನ್ನ ಸಾಕಷ್ಟು ಸಿದ್ಧತೆ ಮಾಡಿಕೊಳ್ಳಬೇಕಾದ ಅಗತ್ಯವಿದೆ.

**ಅಂತರ್ಜಾತೀಯ/ಅಂತರ್‌ಧರ್ಮೀಯ ಪ್ರೇಮ**

೨೦೧೩ರಲ್ಲಿ ದೆಹಲಿಯ ೬(ಆರು) ನ್ಯಾಯಾಲಯಗಳಲ್ಲಿ ಪೂರ್ತಿಯಾಗಿ ವಿಚಾರಣೆಯಾಗಿ ತೀರ್ಪು ಹೊರಬಿದ್ದ ಮೊಕದ್ದಮೆಗಳಲ್ಲಿ (ಸೀಮಾ ಮತ್ತು ಸಮೀರ್ ಪ್ರಕರಣದ ಹಾಗೆ) ೧೭೪ ಮೊಕದ್ದಮೆಗಳು ಹುಡುಗ–ಹುಡುಗಿಯರು ಜೊತೆ ಜೊತೆಯಾಗಿ ಪಲಾಯನ ಮಾಡಿದ ಅಥವಾ (ಗಂಡಸು) ಹುಡುಗಿಯರನ್ನು ಅಪಹರಣ ಮಾಡಿ ಲೈಂಗಿಕ ಸಂಪರ್ಕ ಮಾಡಿದ ಪ್ರಕರಣಗಳಾಗಿದ್ದವು. ಇವುಗಳಲ್ಲಿ ಹೆಚ್ಚಿನವು ಅಂತರ್‌ಜಾತೀಯ/ಅಂತರ್‌ಧರ್ಮೀಯ ಜೋಡಿಗಳನ್ನು ಒಳಗೊಂಡಿದ್ದವು. ೨೦೧೩ರ ಅಕ್ಟೋಬರ್‌ನಲ್ಲಿ, ಸೀಮಾ–ಸಮೀರ್ ಮೊಕದ್ದಮೆಯ ತೀರ್ಪು ನೀಡಿದ ಹೆಚ್ಚುವರಿ ಸತ್ರ ನ್ಯಾಯಾಧೀಶರಾದ ಧರ್ಮೇಶ್ ಶರ್ಮಾ ಅವರು "ಇಂತಹ ಮೊಕದ್ದಮೆಗಳು ನ್ಯಾಯಾಂಗದಲ್ಲಿರುವ ನಮ್ಮೆಲ್ಲರನ್ನು ಕಾಡುವ ನಿರಂತರ ಸಮಸ್ಯೆಯಾಗಿದೆ" ಎಂದಿದ್ದಾರೆ. ಸೀಮಾ–ಸಮೀರ್ ಪ್ರಕರಣದಲ್ಲಿ ಹುಡುಗಿಯು ೧೬ ವರ್ಷದವಳಾಗಿದ್ದುದರಿಂದ (ಅಂದರೆ, ಆಗ ಜಾರಿಯಲ್ಲಿದ್ದ ಕಾನೂನಿನಂತೆ 'ಪ್ರಾಪ್ತವಯಸ್ಕಳು') ನ್ಯಾಯಾಲಯವು ಪ್ರೇಮಿಗಳನ್ನು ಮೊಕದ್ದಮೆಯಲ್ಲಿ ಬಿಡುಗಡೆ ಮಾಡುವುದು ಸಾಧ್ಯವಾಗಿತ್ತು. ಈಗ ತಿದ್ದುಪಡಿಯಾಗಿರುವ ಕಾಯ್ದೆಯ ಪ್ರಕಾರ ಹುಡುಗಿಯು ಪ್ರಾಪ್ತವಯಸ್ಕಳಾಗಲು ೧೮ ವರ್ಷಗಳು ತುಂಬಿರಬೇಕಾಗುತ್ತದೆ.



ಕಾನೂನಿನ ಪ್ರಕಾರ ಯುವಪ್ರೇಮಿಗಳನ್ನು ಬೇರ್ಪಡಿಸಿ, ಜೊತೆಗೂಡಿ ಪಲಾಯನ ಮಾಡಿದ ಎಣೆವಕ್ಕಿಗಳನ್ನು (ಪ್ರೇಮಪಕ್ಷಿಗಳು) ಶಿಕ್ಷಿಸಿ ಮಕ್ಕಳಿಗೊಂದು ಪಾಠ ಕಲಿಸಿದೆವೆಂದು – ಮೊಕದ್ದಮೆ ಹೂಡಿದ ಪೋಷಕರು ಸಂಭ್ರಮಿಸಬಹುದು. ಆದರೆ ಈ ವಿಚಾರದಲ್ಲಿ ಹಿರಿಯರು ಮರುಚಿಂತನೆ ಮಾಡಬೇಕಾದ ಅಗತ್ಯವೂ ಇದೆ.

'ಪಲಾಯನ ಪ್ರಕರಣಗಳ' ಬಗೆಗೆ 'ದಿ ಹಿಂದು' ಪತ್ರಿಕೆಯು ನಡೆಸಿದ ಸಮೀಕ್ಷೆಯಿಂದ ಹುಡುಗಿಯ ಪೋಷಕರ ವರ್ತನೆ ಆಘಾತಕಾರಿಯಾಗಿದೆ.

ಜೊತೆಗೂಡಿ ಪಲಾಯನ ಮಾಡಿದ ಯುವಕ ಯುವತಿಯರು ತಂಗಿದ್ದ ಸ್ಥಳಕ್ಕೆ ಹೋಗಿ ಅವರನ್ನು ಎಳೆದುಕೊಂಡು ಬರುತ್ತಾರೆ. ಕೆಲವೊಮ್ಮೆ ಪೊಲೀಸರ ವಶಕ್ಕೆ ಒಪ್ಪಿಸಿದರೂ ಅವರು ಸಾಮಾನ್ಯವಾಗಿ ಹುಡುಗನನ್ನು ಠಾಣೆಯಲ್ಲಿ ಕೂಡಿಹಾಕಿ, ಹುಡುಗಿಯನ್ನು ಪೋಷಕರ ವಶಕ್ಕೆ ಒಪ್ಪಿಸುತ್ತಾರೆ. ಪೋಷಕರು ಹುಡುಗಿಯನ್ನು ನಾನಾ ಬಗೆಗಳಲ್ಲಿ ಶಿಕ್ಷಿಸುತ್ತಾರೆ. ಬೆನ್ನುಮೂಳೆ ಮುರಿಯುವವರೆಗೂ ಹೊಡೆದು, ಮುಖದ ಮೇಲೆ 'ಆ್ಯಸಿಡ್' ಎರಚುವುದಾಗಿ ಬೆದರಿಸುವುದೂ ಉಂಟಂತೆ! ತನ್ನ ಮೇಲೆ 'ಅತ್ಯಾಚಾರವೇ' ನಡೆಯಿತೆಂದು ಹೇಳಿಕೆ ಕೊಡಲು ಸೂಚಿಸುವುದು, ಅದನ್ನೇ ದೃಢಪಡಿಸುವ ವೈದ್ಯಪರೀಕ್ಷೆಗೆ ಒಳಪಡಿಸುವುದು, ಗರ್ಭಪಾತ ಮಾಡಿಸಿಕೊಳ್ಳುವಂತೆ ಒತ್ತಾಯಿಸುವುದು ಇವೆಲ್ಲ ಹುಡುಗಿಯನ್ನು ಹಿಂಸಿಸಿ ಬುದ್ಧಿ ಕಲಿಸುವ ವಿಧಾನಗಳು!

ಸಾಮಾನ್ಯವಾಗಿ ಅಪಹರಣ ಪ್ರಕರಣಗಳಲ್ಲಿ ಹುಡುಗಿಯು ತನ್ನ ಜೊತೆಗಾರನೊಡನೆ ಪಲಾಯನ ಮಾಡಲು ಒಪ್ಪದೆ ಇದ್ದುದರಿಂದ ಅವಳಿಗೆ ತಂಪು ಪಾನೀಯದೊಡನೆ ಮಾದಕದ್ರವ್ಯವನ್ನು ಬೆರೆಸಿ ಕುಡಿಸಿ, ಆಕೆಯು ಪ್ರಜ್ಞೆ ತಪ್ಪಿದಮೇಲೆ ಎತ್ತಿಕೊಂಡು ಹೋಗಲಾಯಿತೆಂಬ ರೀತಿಯಲ್ಲಿ ಪ್ರಥಮ ಮಾಹಿತಿ ವರದಿಗಳು (ಎಫ್.ಐ.ಆರ್.) ದಾಖಲಾಗುತ್ತವೆ. ಮಾಧ್ಯಮಗಳೂ ಕೂಡ ಅದೇ ರೀತಿಯಲ್ಲಿ ವರದಿಮಾಡುತ್ತವೆ. ಆದರೆ ನ್ಯಾಯಾಲಯಗಳಲ್ಲಿ ವಿಚಾರಣೆ ನಡೆದಾಗ ಈ ವರದಿಗಳು ಸಾಬೀತಾಗುವುದಿಲ್ಲ. 'ದಿ ಹಿಂದು' ಪತ್ರಿಕೆಯು ಕಂಡುಕೊಂಡಂತೆ ನ್ಯಾಯಾಲಯಗಳ ಮುಂದೆ ಬಂದ ೧೭೪ ಪ್ರಕರಣಗಳ ಪೈಕಿ ೧೦ ಪ್ರಕರಣಗಳನ್ನು ಮಾತ್ರ, "ನಿಜವಾಗಿಯೂ ಜರುಗಿದ ಅಪಹರಣ ಮತ್ತು ಅತ್ಯಾಚಾರ ಕಾನೂನಿನ" ಅಡಿ ಪೂರ್ಣ ವಿಚಾರಣೆಗೆ ಒಳಪಡಿಸಲಾಯಿತು.

**ಮದುವೆಯಾಗುವ ಭರವಸೆ ಮತ್ತು ವಂಚನೆ**

ಮದುವೆಯ ಭರವಸೆ ಮತ್ತು ವಂಚನೆಗಳನ್ನು ಕುರಿತು ದಾಖಲಾಗುವ ಪ್ರಥಮ ಮಾಹಿತಿಯ ವರದಿಗಳು ಸಾಮಾನ್ಯವಾಗಿ ಈ ಕೆಳಗಿನ ಮಾದರಿಯಲ್ಲಿರುತ್ತವೆ : "ಆರೋಪಿಯು ಹುಡುಗಿಗೆ ಆಕೆಯನ್ನೇ ಮದುವೆಯಾಗುವ ಭರವಸೆ ಕೊಟ್ಟು ಅವಳೊಡನೆ ಲೈಂಗಿಕ ಸಂಪರ್ಕ ಬೆಳೆಸಿದ; ಹಲವು ತಿಂಗಳು/ವರ್ಷಗಳವರೆಗೆ ಹಾಗೆಯೇ ಹೇಳುತ್ತ ಲೈಂಗಿಕ ಸಂಪರ್ಕವನ್ನು ಮುಂದುವರಿಸಿದ; ಕಡೆಯದಾಗಿ ಒಂದು ಬಾರಿ ಒತ್ತಾಯದಿಂದ ಆಕೆಯೊಡನೆ ಸಂಭೋಗಿಸಿ ಆಮೇಲೆ ಮದುವೆಯನ್ನು ನಿರಾಕರಿಸಿದ. ಇಲ್ಲವೆ ನಾಪತ್ತೆಯಾಗಿ ಮೋಸ ಮಾಡಿದ." – "ಮೊಕದ್ದಮೆಯನ್ನು ಹೂಡಬೇಕಾದರೆ ನ್ಯಾಯಾಲಯದಲ್ಲಿ ಸಂತ್ರಸ್ತೆ ಮತ್ತು ಆಕೆಯ ಪೋಷಕರು ಇದೇ ರೀತಿಯ ಹೇಳಿಕೆ ಕೊಡಬೇಕಾಗುತ್ತದೆ" ಎಂದು ನಾವು ಮೊದಲೇ ಅರ್ಜಿದಾರಳಿಗೆ ಮತ್ತು ಆಕೆಯ ಪೋಷಕರಿಗೆ ಹೇಳಿಕೊಟ್ಟಿರುತ್ತೇವೆ ಎಂದು ಒಬ್ಬ ಪೊಲೀಸು ಅಧಿಕಾರಿಯು 'ದಿ ಹಿಂದು' ಪತ್ರಿಕೆಯ ವರದಿಗಾರರಿಗೆ ತಿಳಿಸಿದರಂತೆ. ಪತ್ರಿಕೆಯು ಸಮೀಕ್ಷಿಸಿದ ಹಲವು ಪ್ರಕರಣಗಳಲ್ಲಿ ಈ ಮಾತು ಸತ್ಯ ಎನಿಸಿತು. ಈ ಹಿನ್ನೆಲೆಯಲ್ಲಿ ನ್ಯಾಯಾಲಯಗಳಲ್ಲಿ ಮೊಕದ್ದಮೆ ಹೂಡುವುದಕ್ಕೆ ಪರ್ಯಾಯವಾಗಿ, ಪರಸ್ಪರ ಸಮ್ಮತಿಯಿಂದ ನಡೆಯುವ ಲೈಂಗಿಕ ಸಂಪರ್ಕವನ್ನು ಅಥವಾ ಅಂತಹ ಪ್ರಯತ್ನವನ್ನು ಸೌಹಾರ್ದದಿಂದ ಪರಿಶೀಲಿಸಿ ಸಂಘರ್ಷವನ್ನು ಸ್ಥಳೀಯವಾಗಿ ಪರಿಹರಿಸಿಕೊಳ್ಳುವ ಬಗೆಗೆ ಕೂಡ ಯೋಚಿಸಬಹುದೆನಿಸುತ್ತದೆ.

ಪ್ರಾಪ್ತವಯಸ್ಕರಾದ ಯುವಪ್ರೇಮಿಗಳ ಬದುಕನ್ನು ಬಲಿ ತೆಗೆದುಕೊಳ್ಳುವಲ್ಲಿ ಜಾತಿ ಮತ್ತು ಮತಧರ್ಮಗಳು ಕೂಡ ಪ್ರಮುಖ ಪಾತ್ರವಹಿಸುತ್ತವೆ. ಅಸಹಿಷ್ಣುಗಳಾದ ಮೇಲುಜಾತಿ/ಪಂಗಡ/ವರ್ಗಗಳ ಒತ್ತಡಕ್ಕೆ ಮಣಿದು ಪೊಲೀಸರು ಬೇಗ ಕ್ರಮ ತೆಗೆದುಕೊಳ್ಳುತ್ತಾರೆ. ಅದೇ ಕೆಳಜಾತಿ/ವರ್ಗಗಳ ಜನರ ವಿಚಾರದಲ್ಲಿ ಅಷ್ಟೊಂದು ಮುತುವರ್ಜಿ ವಹಿಸುವುದಿಲ್ಲ. ಎಫ್.ಐ.ಆರ್. ದಾಖಲಿಸಲು ಕೂಡ ಸತಾಯಿಸುತ್ತಾರೆ. ಪ್ರಾಪ್ತವಯಸ್ಕರು ಪರಸ್ಪರ ಸಮ್ಮತಿಯಿಂದ ಲೈಂಗಿಕ ಕ್ರಿಯೆಯಲ್ಲಿ ತೊಡಗಿದ್ದರೂ, ಮದುವೆಯಾಗಲು ಸಿದ್ಧರಿದ್ದರೂ ಅವರ ಪ್ರಣಯ ಪ್ರಕರಣಗಳನ್ನು 'ಅತ್ಯಾಚಾರ'ವೆಂದು ದಾಖಲಿಸಿ ಮೊಕದ್ದಮೆ ಹೂಡುವುದರಲ್ಲಿ ಪಿತೃಪ್ರಧಾನ ಸಮಾಜದ ಹಿರಿಯರು ಖಳನಾಯಕರ ಪಾತ್ರವಹಿಸುತ್ತಾರೆ. ಅಂತಿಮವಾಗಿ ನ್ಯಾಯಾಲಯಗಳಲ್ಲಿ ಪ್ರೇಮಿಗಳ ಪರವಾಗಿಯೇ ತೀರ್ಪು ಬಂದರೂ ನ್ಯಾಯಾಲಯಕ್ಕೆ ಅಲೆದಾಡುವ ಸಲುವಾಗಿ ಹಣ/ಸಮಯಗಳ ಅಪವ್ಯಯವಾಗುವುದು, ಸಮಾಜದ ಕೆಂಗಣ್ಣಿಗೆ ಗುರಿಯಾಗುವುದು ತಪ್ಪುವುದಿಲ್ಲ. ಈಚಿನ ದಿನಗಳಲ್ಲಿ ಹಿಂದೂ ಯುವತಿಯರನ್ನು ಮದುವೆಯ ಆಮಿಷವೊಡ್ಡಿ ಮತಾಂತರಗೊಳಿಸಲಾಗುತ್ತದೆ (ಹೆಚ್ಚಾಗಿ ಇಸ್ಲಾಂ ಧರ್ಮಕ್ಕೆ, ಕೆಲವೊಮ್ಮೆ ಕ್ರೈಸ್ತಧರ್ಮಕ್ಕೆ) – ಎಂಬ ನೆಪದಲ್ಲಿ ಅಂತರ್‌ಧರ್ಮೀಯ ವಿವಾಹಗಳನ್ನು ತೀವ್ರವಾಗಿ ಖಂಡಿಸಲಾಗುತ್ತಿದೆ. ಮದುವೆಯ ಮಾತು ಹಾಗಿರಲಿ; ಪರಸ್ಪರ ಪರಿಚಿತರಾದ, ಬೇರೆಬೇರೆಯ ಮತಧರ್ಮಗಳಿಗೆ ಸೇರಿದ ಯುವಕ ಯುವತಿಯರು ಕೊಂಚ ಸಲುಗೆಯಿಂದ ಮಾತಾಡುತ್ತಿದ್ದರೆ ಸಾಕು, ಅವರ ಮೇಲೆ ದಾಳಿ ಮಾಡುವ

'ಸೈನ್ಯ'ಗಳು ಹುಟ್ಟಿಕೊಂಡಿವೆಯೆಂಬ ವರದಿಗಳು ಪ್ರಸಾರವಾಗುತ್ತಿವೆ. ಇದನ್ನು "ಲವ್ ಜಿಹಾದ್" ಎನ್ನಲಾಗುತ್ತಿದೆ. ಇಲ್ಲಿ 'ಜಿಹಾದ್' ಪದ ಹೇಗೆ ಬಳಕೆಗೆ ಬಂದಿತೆಂಬುದು ಗೊತ್ತಿಲ್ಲ. (ನಮಗೆ ತಿಳಿದಿರುವಂತೆ, ಆಕ್ರಮಣಕಾರಿಗಳಾದ ಇಸ್ರೇಲಿಗಳ ವಿರುದ್ಧ ಹೋರಾಟದಲ್ಲಿ ಪ್ರಾಣತ್ಯಾಗಕ್ಕೂ ಸಿದ್ಧರಾಗುವುದನ್ನು ಇರಾನ್, ಇರಾಕ್ ಮೊದಲಾದ ಇಸ್ಲಾಮಿಕ್ ನಾಡಿನಲ್ಲಿ "ಜೆಹಾದ್" ಎಂದು ಸಂಕೇತಿಸಲಾಯಿತಂತೆ ! ಈಗ ಅದು "ಸ್ವಧರ್ಮರಕ್ಷಣೆಗಾಗಿ ಬಲಿದಾನ" ಎಂಬ ಅರ್ಥ ಪಡೆದು ಇತರ ಇಸ್ಲಾಮಿಕ್ ದೇಶಗಳಲ್ಲೂ ಪ್ರಚಲಿತ ಇದೆ. ಯಾರೋ 'ಆಲ್‌ಖೈದಾ'ಗಳೋ, 'ತಾಲಿಬಾನಿಗಳೋ' ಬಳಸಿದ ಕಲ್ಪನೆಯನ್ನು ನಾವೇಕೆ ನಮ್ಮದಾಗಿಸಿಕೊಳ್ಳಬೇಕು ?

**ಅಗತ್ಯ**

ಈಗ ಬೇಕಾದದ್ದು
ಕತ್ತಲ ಜಗತ್ತನ್ನು
ಉತ್ತಮಗೊಳಿಸುವ
ಸಾಹಿತ್ಯ ಸೃಷ್ಟಿ !

ಸಿ.ಪಿ.ಕೆ.
ಮೈಸೂರು

'ಲವ್‌ಜಿಹಾದ್'ಗೆ ಸಂಬಂಧಪಟ್ಟಂತೆ, ವಿವಾದದ ಕೇಂದ್ರವಾಗಿರುವ ಮೀರತ್ (ಉತ್ತರ ಪ್ರದೇಶ) ಯುವತಿಯೊಬ್ಬಳ ಮನೆಯವರಿಗೆ ಬಿಜೆಪಿಯ ಹಿರಿಯ ನಾಯಕರೊಬ್ಬರು ಹಣ ನೀಡುತ್ತಿರುವ ದೃಶ್ಯಾವಳಿಯು (ವಿಡಿಯೋ) ಮಾಧ್ಯಮಗಳಲ್ಲಿ ಪ್ರದರ್ಶನಗೊಂಡ ಅನಂತರ, ಯುವತಿಯ ಮನೆಯವರ ಮೇಲೆ ಬಿಜೆಪಿಯು ಒತ್ತಡ ಹೇರುತ್ತಿದೆಯೆಂಬ ಆಪಾದನೆಯು ಕೇಳಿಬರುತ್ತಿದೆ.

ಬಿಜೆಪಿಯ ನಾಯಕ ವಿನಿತ್ ಅಗರ್‌ವಾಲ್ ಶಾ ಎಂಬುವವರು ಯುವತಿಯ ಮನೆಯವರಿಗೆ ೨೫,೦೦೦/- ರೂ. ಹಣ ನೀಡಿದುದನ್ನು ಒಪ್ಪಿಕೊಂಡಿದ್ದಾರೆ. ಈಗ ಸಮಾಜವಾದಿ ಪಕ್ಷ ಮತ್ತು ಕಾಂಗ್ರೆಸ್ ಪಕ್ಷಗಳು (ವಿಚಾರಣೆಯಲ್ಲಿ) ತಾವು ಹೇಳಿಕೊಟ್ಟಂತೆ ಹೇಳಬೇಕೆನ್ನುವ ಒತ್ತಡ ಹೇರುವ ಸಲುವಾಗಿಯೆ ಯುವತಿಯ ಮನೆಯವರಿಗೆ ಹಣ ನೀಡಲಾಯಿತೆಂದು ಬಿಜೆಪಿಯ ಮೇಲೆ ಆಪಾದನೆ ಮಾಡುತ್ತಿವೆ.

ಸದರಿ ಯುವತಿಯು ಒಂದು 'ಮದ್ರಸಾ'ದಲ್ಲಿ ತನ್ನ ಮೇಲೆ ಸಾಮೂಹಿಕ ಅತ್ಯಾಚಾರ ನಡೆಯಿತೆಂದೂ, ಇಸ್ಲಾಂ ಧರ್ಮಕ್ಕೆ ಸೇರಿಕೊಳ್ಳುವಂತೆ ತನ್ನನ್ನು ಒತ್ತಾಯಿಸಲಾಯಿತೆಂದೂ ಮೊದಲು ಹೇಳಿದ್ದಳು. ಆದರೆ, ಕಳೆದ ಭಾನುವಾರ ಮನೆಯಿಂದ ಓಡಿಬಂದ ಮೇಲೆ, ತನ್ನ ಮನೆಯವರು ಒಬ್ಬ ರಾಜಕೀಯ ನಾಯಕನಿಂದ ಇನ್ನಷ್ಟು ಹಣ ವಸೂಲಿ ಮಾಡುವ ಉದ್ದೇಶದಿಂದ ಈ ರೀತಿ ಆಪಾದನೆ ಮಾಡುವಂತೆ ಒತ್ತಾಯಿಸಿದರೆಂದು – ಮಾಧ್ಯಮಗಳ ಎದುರಿಗೆ ಹೇಳಿಕೆ ನೀಡಿದಳು.




ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಇತ್ತೀಚೆಗೆ ನವಕರ್ನಾಟಕ ಪ್ರಕಾಶನದ ಹನ್ನೊಂದು ವಿಜ್ಞಾನ ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು. ಖ್ಯಾತ ಭೂವಿಜ್ಞಾನಿ ಹಾಗೂ ವಿಜ್ಞಾನ ಲೇಖಕ ಶ್ರೀ ಟಿ. ಆರ್. ಅನಂತರಾಮು ಅವರು ಅಧ್ಯಕ್ಷತೆಯನ್ನು ವಹಿಸಿ ಕೃತಿಗಳನ್ನು ಲೋಕಾರ್ಪಣೆ ಮಾಡಿದರು. ಶ್ರೀಮತಿ ಬಿ. ಕೆ. ಸುಮತಿಯವರು ಎಲ್ಲ ಕೃತಿಗಳ ಪರಿಚಯ ಮಾಡಿಕೊಡುವುದರೊಂದಿಗೆ ಕಾರ್ಯಕ್ರಮವನ್ನು ನಿರ್ವಹಿಸಿದರು. ವೇದಿಕೆಯಲ್ಲಿ ಕೃತಿಗಳ ಲೇಖಕರು ಮತ್ತು ನವಕರ್ನಾಟಕದ ಶ್ರೀ ಸಿ. ಆರ್. ಕೃಷ್ಣರಾವ್ ಉಪಸ್ಥಿತರಿದ್ದರು.

ಉತ್ತರ ಪ್ರದೇಶ ಬಿಜೆಪಿ ವಾಣಿಜ್ಯ ಸಂಘದ ಸಂಚಾಲಕರಾದ ಮಿ ಶರ್ದ (Sharda), ತಾವು ವಿಚಾರಣೆಯ ಮೇಲೆ ಪ್ರಭಾವಬೀರುವ ಪ್ರಯತ್ನ ಮಾಡಿದುದನ್ನು ಅಲ್ಲಗಳೆದಿದ್ದಾರೆ. ಆದರೆ, "ಹೌದು, ನಾನು ಆ ಯುವತಿಯ ಮನೆಯವರಿಗೆ ಹಣ ನೀಡಿದೆ: ಇನ್ನು ಮುಂದೆ ಇನ್ನಷ್ಟು ಸಹಾಯ ಮಾಡುವುದಾಗಿ ಭರವಸೆಯನ್ನು ಕೊಟ್ಟೆ. ಆದರೆ ಇದು ಕೇವಲ ಮಾನವೀಯ ದೃಷ್ಟಿಯಿಂದ" ಎಂದು 'ದಿ ಹಿಂದು' ಪತ್ರಿಕೆಗೆ ದೂರವಾಣಿಯ ಮೂಲಕ ತಿಳಿಸಿದ್ದಾರಂತೆ. (ದಿ ಹಿಂದು, ೧೫/೧೦/೨೦೧೪)

ರಾಜಕೀಯ ಪಕ್ಷಗಳು ಪರಸ್ಪರ ಆಪಾದನೆಗಳೇನೇ ಇರಲಿ: ಒಂದು ಸರಳ ಪ್ರೇಮ ಪ್ರಕರಣವು ಪಡೆದುಕೊಳ್ಳುತ್ತಿರುವ ರಾಜಕೀಯ ತಿರುವುಗಳನ್ನು ಗಮನಿಸಿದರೆ ಈ ದೇಶದ ಯುವಪ್ರೇಮಿಗಳ ಭವಿಷ್ಯದ ಬಗೆಗೆ ಆತಂಕವಾಗುವುದು ಸಹಜವಲ್ಲವೇ?

ಈವರೆಗೆ "ಅತ್ಯಾಚಾರ"ದ ಬಗೆಗಿನ ನಡೆಯುವ ಚರ್ಚೆಯೆಲ್ಲ ಬಹುತೇಕ, ಅಪರಾಧಿಗಳಿಗೆ ಹೇಗೆ, ಎಷ್ಟು ಶಿಕ್ಷೆ ಕೊಡಬೇಕು; ಪೊಲೀಸರು, ಸರ್ಕಾರಗಳು ಏನು ಮಾಡಬೇಕು; ಕಾನೂನುಗಳನ್ನು ಹೇಗೆ ಬಿಗಿಗೊಳಿಸಬೇಕು – ಎಂಬುದರ ಸುತ್ತಲೇ ನಡೆಯುತ್ತಿರುವುದು ವಿಷಾದನೀಯ.

ಸರ್ಕಾರ, ಪೊಲೀಸರು ಮತ್ತು ಕಾನೂನುಗಳ ಹೊರತಾಗಿ ಸಾಮಾನ್ಯ ಪ್ರಜೆಗಳಾದ ನಮ್ಮ ದೇಶದ ಗಂಡಸರ ಮೇಲೆ, – ಹದಿಹರೆಯದ ಹುಡುಗರಿಂದ ಐವತ್ತು ಅರವತ್ತು ವಯಸ್ಸಿನ ಗಂಡಸರ ಮೇಲೆ – ಯಾವ ಜವಾಬ್ದಾರಿಯಿದೆ, ಯಾವ ಸಾಮಾಜಿಕಪ್ರಜ್ಞೆಯಿದೆ ಎಂಬುದನ್ನು ಕುರಿತು ನಾವು ಯೋಚಿಸಬೇಕಾಗುತ್ತದೆಯಲ್ಲವೆ ? ನಮ್ಮಲ್ಲಿನ ಗಂಡಸರು ಏಕೆ ಹೀಗೆ ಅವಿವೇಕಿಗಳೂ, ಹಿಂಸಾಮತಿಗಳೂ ಆಗುತ್ತಿದ್ದಾರೆ ? ಈಗಲೂ ನಾವು ನಮ್ಮ ಧರ್ಮಶಾಸ್ತ್ರಗಳಲ್ಲಿ, ನಮ್ಮ ಸಂಸ್ಕೃತಿಯಲ್ಲಿ ಚಿಕ್ಕಂದಿನಿಂದಲೂ "ಮಾತೃದೇವೋಭವ" ಎಂದು ಉಪದೇಶಿಸಲಾಗುತ್ತದೆ – ಎಂದು ಬಡಬಡಿಸುತ್ತ ಕುಳಿತಿದ್ದರೆ ಸಾಕೆ ? ಅಥವಾ ಹೆಂಗಸು ಬಾಲ್ಯದಲ್ಲಿ ತಂದೆಯ, ಯೌವ್ವನದಲ್ಲಿ ಪತಿಯ, ಮುಪ್ಪಿನಲ್ಲಿ ಮಕ್ಕಳ ರಕ್ಷಣೆಯಲ್ಲಿರಬೇಕು; "ನಸ್ತ್ರೀ ಸ್ವಾತಂತ್ರ್ಯಮರ್ಹತಿ" – ಎಂದು ಮನುಧರ್ಮಶಾಸ್ತ್ರವನ್ನು ಉದ್ಧರಿಸುತ್ತ ಹೆಂಗಸರನ್ನು ಮನೆಯೊಳಗೆ ಬಂಧಿಸಿಡಲು ಸಾಧ್ಯವೆ ?

ಶಿಕ್ಷಣದಲ್ಲಿ, ಉದ್ಯೋಗದಲ್ಲಿ ಮಹಿಳೆಯರು ಮುಂದುವರಿಯುವುದನ್ನು ಈ ಪುರುಷಪ್ರಧಾನ ಸಮಾಜವು ಸಹಿಸುವುದಿಲ್ಲವೆ ? ಮಹಿಳೆಯರ, ಅದರಲ್ಲೂ ಯುವತಿಯರ ವೇಷಭೂಷಣಗಳು ನಡೆನುಡಿಗಳೇ ಗಂಡಸರನ್ನು ದೌರ್ಜನ್ಯಕ್ಕೆ ಪ್ರಚೋದಿಸುತ್ತವೆಯೆಂದು ದೂರುವವರೂ ಉಂಟು. ಇವೆಲ್ಲ ಕುಹಕದ, ಮತ್ಸರದ ಟೀಕೆಗಳು, ಅಷ್ಟೆ. ಲೈಂಗಿಕ ದೌರ್ಜನ್ಯವನ್ನು 'ಮೃಗೀಯ ವರ್ತನೆ' ಎಂದು ವರ್ಣಿಸುವುದುಂಟು. ಆದರೆ ಮೃಗಗಳಲ್ಲಿ ಜೈವಿಕ ಸಹಜವಾಗಿಯೇ 'ರೇಪ್' ನಡೆಯಲಾರದು.

ಸಾರ್ವಜನಿಕ ಸ್ಥಳಗಳಲ್ಲಿ, ವಾಹನಗಳಲ್ಲಿ ಮಹಿಳೆಯರೊಡನೆ ಅಸಭ್ಯವಾಗಿ ವರ್ತಿಸುವ 'ಪುರುಷ ಪುಂಗವರನ್ನು' ತಡೆಯಲು ಎಷ್ಟು ಜನ ಮುಂದಾಗುತ್ತಾರೆ ? ಇವೆಲ್ಲ ನಮ್ಮ ಸಮಾಜದಲ್ಲಿ ಪ್ರಸ್ತುತವಾಗುವ, ಲೈಂಗಿಕ ದೌರ್ಜನ್ಯದ ಸುತ್ತ ಹುಟ್ಟಿಕೊಳ್ಳುವ ಪ್ರಶ್ನೆಗಳು.

ಹಾಗೆಯೆ, ಹುಡುಗ–ಹುಡುಗಿಯರು, ಗಂಡಸರು–ಹೆಂಗಸರು ಒಟ್ಟಾಗಿಯೇ, ಪರಸ್ಪರ ಪೂರಕವಾಗಿಯೇ ಬದುಕಬೇಕಾದ ಸಮಾಜದಲ್ಲಿ ಸಂಶಯದ, ಭಯದ ಬೀಜಗಳನ್ನು ಬಿತ್ತುವುದೂ ಸರಿಯಲ್ಲ. ಹುಡುಗಿಯರು ಹುಡುಗರೊಡನೆ ಮಾತಾಡಲು, ಯಾವುದೇ ವಿಚಾರವನ್ನು ಚರ್ಚೆ ಮಾಡಲು ಹಿಂಜರಿಯುವ, ಮಹಿಳೆಯರು ಗಂಡಸರೆಲ್ಲ ಕಾಮಪಿಪಾಸುಗಳು ಎಂದು ಭಾವಿಸಿ, ಪುರುಷದ್ವೇಷಿಗಳಾಗುವ, ನೆರೆಹೊರೆಯ ಗಂಡಸರನ್ನು ಸಂಶಯದಿಂದ ನೋಡುವ ವಾತಾವರಣವೊಂದು ಸೃಷ್ಟಿಯಾದರೆ ನಮ್ಮಲ್ಲಿ ಆರೋಗ್ಯಕರ, ಸ್ವಸ್ಥ ಸಮಾಜವು ಹೇಗೆ ಅಸ್ತಿತ್ವ ಪಡೆದೀತು ? ದೇಶದಲ್ಲಿ ನೆಮ್ಮದಿಯು ನೆಲೆಸಬೇಕಾದರೆ, ವರದಿಗಳ ಹೆಸರಿನಲ್ಲಿ ಮಾಧ್ಯಮಗಳ ಮೂಲಕ ಪ್ರಚಾರ ಪಡೆಯುವ ಉತ್ಪ್ರೇಕ್ಷಿತ, ಅತಿರಂಜಿತ ವರ್ಣನೆಯನ್ನು ಕೂಡ ನಿಯಂತ್ರಿಸಬೇಕಾಗುತ್ತದೆ; ವಿವೇಚನೆಯಿಂದ ನೋಡಬೇಕಾಗುತ್ತದೆ.

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦



# ಜಾನಪದ ಜ್ಞಾನ ಕಲೆ ಅಭ್ಯಾಸ ಮತ್ತು ಅನ್ವಯಿಕತೆ ಅಗತ್ಯ

**ಜಾ**ನಪದ ಬಾಯಿಂದ ಬಾಯಿಗೆ, ಮೌಖಿಕ ಅಥವಾ ತೋಂಡಿ ಸಂಪ್ರದಾಯ ಎನ್ನುವುದನ್ನು ಗುರ್ತಿಸುತ್ತಾ, ಪರಂಪರೆಯ ಜನಪದ ಸಂಸ್ಕೃತಿಯ ಅರಿವು ಎಲ್ಲರಿಗೂ ಇರಬೇಕಾದ್ದು ಕಾರಣವಿಷ್ಟೆ. ಈ ದೇಶಕ್ಕೆ ರೈತ ಬೆನ್ನೆಲುಬು ಎಂದ ಹಾಗೆ ಜನಸಮುದಾಯದ ಸಂಸ್ಕೃತಿ ಜಾನಪದ ಜನರ ಬೆನ್ನೆಲುಬು. ಇವೆಲ್ಲವುದರ ಅರಿವು ನಮಗೆಲ್ಲ ಮನಗಾಣಬೇಕಾದರೆ ಜನಪದ ಬೆಳೆದುಬಂದ ದಾರಿಯ ಅಧ್ಯಯನ, ಅವುಗಳ ತಿಳುವಳಿಕೆ ಅಗತ್ಯ.

ಜಾನಪದ ಜ್ಞಾನಿ ಫ್ರಾನ್ಸಿಸ್ ಗ್ರಾಸ್ ಹೇಳುವ ಮಾತು ಹೀಗಿದೆ: "ಆಯಾ ದೇಶದ ಜಾನಪದ ಚರಿತ್ರೆ ತಿಳಿಯದವನು ರಾಜನೂ ಆಗಲಾರ ಮತ್ತು ಮನುಷ್ಯನೂ ಆಗಲಾರ." ಬ್ರಿಟಿಷರು ಗುರುತಿಸುವ ವರೆಗೆ ನಮಗೂ ಅಷ್ಟಾಗಿ ಜಾನಪದದ ಬಗ್ಗೆ ಗೊತ್ತೆ ಇರಲಿಲ್ಲ. ಕಿಟಲ್, ಗೋವರ್, ಡೆಂಡಾಸ್, ಫ್ಲೀಟ್ ಮುಂತಾದವರು ನಮ್ಮ ಜಾನಪದವನ್ನು ಅಧ್ಯಯನ, ಅಭ್ಯಾಸ ಮಾಡಿ ನಮಗೆ ತಿಳಿಸಿಕೊಟ್ಟರು. ವಿದೇಶಿ ಜಾನಪದ ಜ್ಞಾನಿಗಳು. ಬದುಕಿನ ಜೊತೆಗೆ ತನಗೆ ಅರಿವಿಲ್ಲದ ಹಾಗೆ ಸರ್ವ ಸೃಷ್ಟಿ, ಸಮಷ್ಟಿಯ ಜಾನಪದ ಎಲ್ಲರ ಮನೆಯಲ್ಲಿ, ಮನದಲ್ಲಿ, ಬಾಳಪಯಣದಲ್ಲಿ ಅನುಭವಿಸಿದ ನೋವು ನಲಿವಿನ ಸಂಗತಿಗಳಾಗಿವೆ. ಆ ಸಂಗತಿಗಳು ನಮಗೆ ಜನಪದ ಹಾಡಾಗಿ, ಕುಣಿತವಾಗಿ, ಗ್ರಾಮದೇವತೆ ಹಬ್ಬವಾಗಿ ನೋವು ನಲಿವಿನ ಸಂಬಂಧಗಳ ಆಕರ ಆಕ್ರಂದನವಾಗಿ, ಸಂತೋಷದ ನೆಲೆಯಲ್ಲಿ ಒಗಟು, ಗಾದೆಗಳಾಗಿ ಮತ್ತು ಮದುವೆ ಪದವಾಗಿ ರೈತರ ಶ್ರಮ ಗೀತೆಗಳಾಗಿ, ಬಡವರ ಒಡಲಿನ ಹಾಡಾಗಿ, ಬೆವರಿನ, ಭಕ್ತಿಯ ಎಲ್ಲ ನೆಲೆಯ ಸೆಲೆಯು ಈ ಭೂಮಿ ಮೇಲಿನ ಸಂಪ್ರದಾಯವಾಗಿ ಬೆಳೆದುಬಂದಿವೆ.

ಇವುಗಳ ಜ್ಞಾನ ಮತ್ತು ಕಲೆಯ ಅಭ್ಯಾಸ ಏಕೆ ಅಗತ್ಯವೆಂದರೆ, ಆ ಸಂದರ್ಭಕ್ಕೆ ಕಟ್ಟುತ್ತಿದ್ದ ಪದಗಳು, ಆ ಪದಗಳ ಮುಂದುವರಿಕೆ, ಅದಕ್ಕೆಲ್ಲ ಮುಖ್ಯವಾಗಿ ಜನಪದರ ಅಗಾಧ ನೆನಪಿನ ಶಕ್ತಿ, ಆ ಕ್ಷಣಕ್ಕೆ ಮುಂದಕ್ಕೆ ಏನು ಕಟ್ಟಬೇಕು ಎಂಬ ಸಮಯಪ್ರಜ್ಞೆ– ಜನಪದರ ಈ ಶ್ರೇಷ್ಠತೆಯನ್ನು ನಾವು ಎಲ್ಲೆಲ್ಲೂ ಹೇಳಬೇಕು ಮತ್ತು ಅಭಿನಂದಿಸುವಂತಹ ಕಾರ್ಯವಾಗಬೇಕು. ಪೇಪರು, ಪೆನ್ನು ಮತ್ತು ಶಾಲೆಯೆ ಇಲ್ಲದ, ದಾಖಲು ಮಾಡಲಾಗದ ಕಾಲದಲ್ಲಿ ಅವರು ಹಾಡಿದ ಕಥನಗೀತೆಗಳು, ಕೋಲಾಟದ ಪದಗಳು, ಸಂಪ್ರದಾಯದ ಪದಗಳು, ಕಟ್ಟುಬೀಸುವ ಪದಗಳು, ಬಿತ್ತುವ ಸುಗ್ಗಿ ಪದಗಳು, ಈ ನಾಡಿನ ಹೆಣ್ಣಿನ ಗೋಳನ್ನು ಹೇಳುವ ಪದಗಳು, ಮಹಿಳೆಯ ನೋವು–ನಲಿವು, ತಾಯಿ ಕರುಳುಬಳ್ಳಿಯ ಅಣ್ಣತಮ್ಮಂದಿರ, ಅತ್ತಿಗೆ, ನಾದಿನಿಯರ ಸಂಬಂಧದ ಪದಗಳನ್ನು ಅಗಾಧವಾಗಿ ಕಟ್ಟಿ ಹೇಳಿರುವುದನ್ನು ಇವತ್ತಿನ ಯುವಪೀಳಿಗೆ ಸ್ವಲ್ಪ ಜಾನಪದದ ಬಗ್ಗೆ ಅಭ್ಯಾಸ ಮಾಡಿ, ಅರಿವು ಮೂಡಿಸಿಕೊಂಡರೆ ಸಾಕು, ಜಾನಪದವು ಜನರ ಮಧ್ಯೆ ಇನ್ನೂ ಎತ್ತರಕ್ಕೆ ಬೆಳೆಯುತ್ತದೆ. ಜಾನಪದ ಉಳಿಯಲೂ ಸಾಧ್ಯವಾಗುತ್ತದೆ.



**ಜಾನಪದವು ಕೂಡ ಅಂದಿನಿಂದ ಇಲ್ಲಿಯ ವರೆಗೆ ತನ್ನ ಮೂಲ ರೂಪ ಸ್ವರೂಪ ದಲ್ಲಿವೆ ಎಂದು ಹೇಳಲು ಸಾಧ್ಯವೇ ಇಲ್ಲ. ಜಾಗತೀಕರಣ, ನಗರೀಕರಣದ ಆಯಾ ಕಾಲಕ್ಕೆ ಹೊಸ ಹೊಸ ಆವಿಷ್ಕಾರಗಳು ತಮಗೆ ಅರಿವಿಲ್ಲದಂತೆ ಅನೇಕ ಬದಲಾವಣೆ ಗಳನ್ನು ಪಡೆಯುತ್ತಾ ಬಂದಿವೆ. ಅಂದಿನ ಮುಗ್ಧ ಸಮಾಜದಲ್ಲಿ ಹುಟ್ಟಿದ ಸಂದರ್ಭದ ಪದಗಳೇ ಬೇರೆ, ಇವತ್ತಿನ ಸಂದರ್ಭಕ್ಕೆ ಪದಗಳನ್ನು ಕಟ್ಟುವ ರೀತಿ ನೀತಿ ಅನಿವಾರ್ಯತೆಯೇ ಬೇರೆ. ಹಾಗಾಗಿ ಕಲೆಗಳು ತಮ್ಮ ಸಾಂಪ್ರದಾಯಿಕ ಮಡಿವಂತಿಕೆಯನ್ನು ಬಿಟ್ಟು ಕಲಾತ್ಮಕ ದೃಷ್ಟಿಯಲ್ಲಿ ಹೇಳುವುದಕ್ಕೆ ಹೊರಟಾಗ ಮಾತ್ರ. ಅವುಗಳೆಲ್ಲ ಪ್ರದರ್ಶನ ಕಲೆಗಳ ಮನರಂಜನೀಯ ರೂಪ ತಾಳಿ ಪ್ರದರ್ಶನವಾಗುತ್ತಿವೆ.**

**ಅಪ್ಪಗೆರೆ ತಿಮ್ಮರಾಜು**



ಜನಪದವು ಬದುಕಿನೊಡನೆ ಬೆಸೆದು ಬೆಳೆದುಕೊಂಡು ಬಂದಿದ್ದರಿಂದ ನೋವು ನಲಿವಿನ ಎರಡೂ ಮುಖಗಳನ್ನು ನಾವು ಕಾಣಲು ಸಾಧ್ಯವಾಗುತ್ತದೆ. ಈಗ ಜಾನಪದ ತನ್ನ ಗೌರವ ಕಳೆದುಕೊಳ್ಳುತ್ತಿದೆಯೇ ಎಂಬ ಸಂದೇಹ ಮೂಡುವುದು ಸಹಜ. ಇದು ಶೋಚನೀಯ ವಿಷಯ. ಇಂತಹ ಜನಪದ ಕಲೆಗಳ ಕುರಿತು ಮೊತ್ತಮೊದಲಿಗೆ ಜರ್ಮನಿಯಲ್ಲಿ ೧೮೧೨ರಿಂದಲೇ ಸಂಶೋಧನೆ ಪ್ರಾರಂಭ ವಾಯಿತು. ಅನಂತರದಲ್ಲಿ ಲಂಡನ್ನಿನ ವಿಲಿಯಂ ಜಾನ್ ಥಾಮ್ಸ್‌ರವರು ೧೮೮೬ರಲ್ಲಿ ಜಾನಪದ ಎಂಬ ಪಟ್ಟ ಕೊಟ್ಟ ನಂತರವೇ ಅದು ಶಾಸ್ತ್ರೀಯ ಸ್ವರೂಪ ಪಡೆದುಕೊಂಡಿತೆನ್ನಬಹುದು.

ಥಿಯೋಡರ್ ಎಚ್. ಗಾಸ್ಟರ್ ಜಾನಪದ ಮೇಷ್ಟ್ರಾಗಿ ವೃತ್ತಿ ಮಾಡುತ್ತಿರುತ್ತಾರೆ. ಜಾನಪದ ಜನರಿಂದಲೇ ಬಂದಿದ್ದು, ಜನರಿಗಾಗಿಯೇ ಇರುವಂಥದ್ದು ಎನ್ನುವ ಇವರ ಮಾತು ಬಹಳ ಸೂಕ್ತವಾಗಿದೆ. ಬಿ. ಎ. ಬಾಟ್ಕಿನ್‌ರವರು ಆದಿವಾಸಿ ಸಂಪ್ರದಾಯವನ್ನು ಎತ್ತಿ ಹಿಡಿಯುತ್ತಾರೆ. ಅಮೆರಿಕಾ, ಸ್ಪೇನ್‌ನಲ್ಲಿ ಎಂ. ಎಸ್ಪಿನೋಸ್ ಜಾನಪದದ ಬಗ್ಗೆ ಹೆಚ್ಚು ಕೆಲಸ ಮಾಡಿದ್ದಾರೆ. ಕಲಾವಿದನಾದ ಎಂ. ಹಾರ್ಮೋನ್ ಪ್ರಕಾರ, ತಲೆಮಾರಿನಿಂದ ತಲೆಮಾರಿಗೆ ಅದು ಹಬ್ಬಿದೆ. ರಿಚರ್ಡ್ ಎಂ. ಡಾರ್ಸನ್ ಜಾನಪದ ಭೂತಕಾಲವಾಗಿದ್ದರೂ, ವರ್ತಮಾನ ಕಾಲಕ್ಕೆ ಪ್ರೇರೇಪಿತವಾಗುತ್ತದೆ. ಹಲವಾರು ಜಾನಪದ ಅಂಶಗಳು ವಾಸ್ತವಿಕತೆಗೆ ಹತ್ತಿರವಾಗುತ್ತವೆ. ಕಾಲಮಾನದ ಹಿನ್ನೆಲೆಯಲ್ಲಿ ಆಕಾಶದ ಅಗಲಕ್ಕೂ ತನ್ನದೇ ಪ್ರಾದೇಶಿಕ ಭಿನ್ನತೆಯಲ್ಲಿ ಹುಟ್ಟಿ ಬೆಳೆದಿದೆ. ತರ್ಕಬದ್ಧತೆಯ ವಿಷಯ ಹಾಗೂ ಜಾನಪದ ಅನ್ವಯಿಕತೆ ಆಯಾ ದೇಶಮಾನಗಳ ಕಾಲಕ್ಕೆ ಬೇರೆ ಬೇರೆ ರೀತಿನೀತಿಯ ಸಂಸ್ಕೃತಿಯ ಜಾನಪದ ಅನ್ವಯಿಕತೆ ಬಹಳವೇ ಅಗತ್ಯವಿದೆ ಮತ್ತು ಅನಿವಾರ್ಯವಾಗಿದೆ.

ಇಂದಿನ ಜಾಗತಿಕ ಸಂದರ್ಭಕ್ಕೆ ಅನುಗುಣ ಕನ್ನಡ ನಾಡೇ ಆಗಲಿ, ಭಾರತದ ಜಾನಪದವೇ ಆಗಲಿ, ಈಗಿನ ವಾಸ್ತವ ಜಗತ್ತಿಗೆ ಅಂದಿನ ಜಾನಪದವನ್ನು ಹೇಗೆ ಅನ್ವಯಿಸಬಹುದು, ಅನ್ವಯವಾಗಬಹುದು, ಆ ಕಲೆಗಳನ್ನೆಲ್ಲ ನಾವೀಗ ಹೇಗೆ ನೋಡಬೇಕು, ಕಾಣಬೇಕು, ಕಲಿಯಬೇಕು ಎಂಬುವುದನ್ನು ಜನಪದ ವಿದ್ವಾಂಸರು, ಕಲಾವಿದರು ತುಂಬ ಗಂಭೀರವಾಗಿ ನೋಡಿ ಅನ್ವಯಿಸಿಕೊಳ್ಳುವ ಕಡೆಗೆ ಮನಸ್ಸು ಮಾಡಲೇಬೇಕು ಎಂಬುವುದು ಅನಿವಾರ್ಯವಾಗಿದೆ. ಟಾಲ್‌ಸ್ಟಾಯ್‌ರವರ ಒಂದು ಮಾತಿದೆ. ಅದೆಂದರೆ 'ಬೇರುಗಳಿಂದಲೇ  ಪುನರ್ ನಿರ್ಮಿಸಬೇಕು' ಎಂಬುದು. ಆ ಬೇರುಗಳೆ ನಮ್ಮ ಜಾನಪದ. ಹಾಗೆಯೇ ನಮ್ಮ ಹಳೇ ಬೇರುಗಳು ಇವತ್ತಿನ ಹೊಸ ಸಂಸ್ಕೃತಿ ಹುಟ್ಟಿಗೆ ಕಾರಣವಾದ್ದರಿಂದ ಅನ್ವಯಿಕತೆ ಅವಶ್ಯವಿದೆ. ಇವತ್ತಿನ ಮಕ್ಕಳು ಹೂವು ಇಷ್ಟಪಡುತ್ತಾರೆ. ಬೇರನ್ನು ಇಷ್ಟಪಡುವುದಿಲ್ಲ. ನಾವು ಬೇರನ್ನು ಇಷ್ಟಪಡುತ್ತೇವೆ, ಹಾಗೆ ಜಾನಪದ ಬೇರಿನ ಅಂತರ್‌ಶಕ್ತಿ. ಅದು ಇವತ್ತಿನ ಆಧುನಿಕ ಸಾಂಸ್ಕೃತಿಕ ಒಳನೋಟಕ್ಕೆ, ಹೊರನೋಟಕ್ಕೆ ಬಹಳ ಅಗತ್ಯವಾಗಿದೆ.

ಅನ್ವಯಿಕ ಜಾನಪದವನ್ನು ಒಂದು ನಿರ್ದಿಷ್ಟ ಸ್ಥಳದಲ್ಲಿ ಯೋಗ್ಯವಾದ ಕಲೆ, ಸಾಹಿತ್ಯ, ಸಂಗೀತವನ್ನು ಆಯ್ಕೆಮಾಡಿ ಮುಂದಿನ ಪೀಳಿಗೆಗೆ ಅದನ್ನು, ಅಮೆರಿಕಾದ ರಿಚರ್ಡ್ ಎಂ. ಡಾರ್ಸನ್ ಹೇಳುವಂತೆ, ಈಗಿನ ವರ್ತಮಾನಕ್ಕೆ ತಕ್ಕಂತೆ ಅನ್ವಯಿಕವಾಗಿಸುವ ಮತ್ತು ರಚಿಸುವ ಅವಶ್ಯವಿದೆ. ಕೆಲವು ವಿಕೃತ ಸಂಪ್ರದಾಯ,



ಸಂಗತಿಗಳನ್ನು ನಾಶಮಾಡಲು ಜೀಶಂಪ ಹೇಳುತ್ತಾ ಹೋಗುತ್ತಾರೆ. ಕೆಲವನ್ನು ಮುಂದುವರಿಸುವ ಅಗತ್ಯತೆ ಇದೆ ಎಂದೂ ಹೇಳುತ್ತಾರೆ. ಅದನ್ನು ಅನ್ವಯಿಸುವ ಅನ್ವಯಿಕ ಚಿಂತನೆ ಉಳ್ಳವರಾದ, ದೇ.ಜ.ಗೌ., ಡಾ॥ ಬಿ. ಎ. ವಿವೇಕ ರೈ, ಹಿ. ಶಿ. ರಾಮಚಂದ್ರೇಗೌಡ, ಬಿ. ಎಸ್. ಗದ್ದಿಗಿಮಠ, ಪ್ರೊ॥ ಕಾಳೇಗೌಡ ನಾಗವಾರ ಮತ್ತಿತರರು ಜಾನಪದ ತನಗೆ ತಾನೆ ಬದಲಾಗುವುದಿಲ್ಲ; ಬದಲಾವಣೆ ನಿರೀಕ್ಷಿಸುವುದೂ ಇಲ್ಲ; ಅದೇ ಕಾಲ, ದೇಶ ಬದಲಾಗುವಂತೆ ಮಾಡುತ್ತದೆ; ಎನ್ನುತ್ತಾರೆ. ಇದಕ್ಕೂ ಕಾರಣವಿದೆ; ಜಾಗತಿಕ ಅನುಕರಣೆ, ಜಾಗತೀಕರಣವನ್ನು ಅವಲಂಬಿಸಿರುವುದು ಅನಿವಾರ್ಯ ಮತ್ತು ಅಗತ್ಯ. ಆಧುನಿಕತೆ ಅನಿವಾರ್ಯ ವಾಗಿದೆ ಎಂದು ನಾವೆಲ್ಲ ಹೇಗೆ ಒಪ್ಪಿಕೊಳ್ಳುತ್ತಿದ್ದೇವೆಯೋ ಅದೇ ರೀತಿ ಜಾನಪದದ ಅನ್ವಯಿಕತೆಯೂ ಕೂಡ ಅನಿವಾರ್ಯ. ಜಾನಪದದ ಅನೇಕ ಸಂಕೇತ, ರೂಪಕ ಗಳನ್ನು ಇಟ್ಟುಕೊಂಡೇ ಇವತ್ತಿನ ವಾಸ್ತವದ ಸಂದರ್ಭಕ್ಕೆ ಹೇಗೆ ಅನ್ವಯಿಸುವುದು ಎಂಬುವುದನ್ನು ಆಧುನಿಕ ಜಗತ್ತಿಗೆ ನಾವು ತಿಳಿಸಬೇಕಾಗಿದೆ. ಅಂದಿನ ಜಾನಪದ ವಿಷಯ, ವಸ್ತು ಇವತ್ತಿನ ಆಧುನಿಕತೆಯ ಕಾಲಕ್ಕೂ ಪ್ರಸ್ತುತವಾಗುತ್ತವೆ, ನಿತ್ಯವಾಗಿ ನಿಲ್ಲುತ್ತವೆ ಎಂಬುವುದನ್ನು ಅನೇಕ ಗೀತೆಗಳು, ಒಗಟುಗಳು, ಗಾದೆಗಳ ಮೂಲಕ ಉದಾಹರಿಸಿ ಹೇಳಬಹುದು. ಜಾಗತಿಕ ಸಂದರ್ಭಕ್ಕೆ ಜಾನಪದ ಎಷ್ಟು ಪ್ರಸ್ತುತವಿದೆ ಎಂಬುದನ್ನು ತಿಳಿಸಬಹುದು. ಈ ಕೆಲಸವನ್ನು ಜಾನಪದ ಆಸಕ್ತರು, ಶಿಕ್ಷಕರು, ಸಂಶೋಧಕರು, ಕಲಾವಿದರು ಎಲ್ಲರೂ ಸೇರಿ ಮಾಡಬೇಕಾಗಿದೆ. ಇವನ್ನೆಲ್ಲವನ್ನು ತುಂಬ ಮುಕ್ತವಾಗಿ ಒಪ್ಪಿಕೊಳ್ಳುತ್ತಲೇ ಇವತ್ತಿನ ಯುವಜನಾಂಗಕ್ಕೆ ಜಾನಪದ ಅನ್ವಯಿಕತೆ ಅವಶ್ಯವಿದೆ ಎಂಬುದು ಅನಿವಾರ್ಯ ಎಂಬುದನ್ನು ನಾವೆಲ್ಲ ಆಂದೋಲನ ಹೂಡುವತ್ತ ಕಾರ್ಯೋನ್ಮುಖರಾಗಬೇಕಾಗಿದೆ.

ಅದಕ್ಕಿಂತ ಪ್ರಮುಖವಾಗಿ ಈ ಜನಪದ ಕಲೆಗಳು ನಮ್ಮ ಸ್ವತ್ತು, ನಮ್ಮ ನೆಲದ ಜಾನಪದ ತಾಯಿಬೇರಿನ ಸಂಬಂಧದ ಕರುಳುಬಳ್ಳಿಗಳು ಎಂಬ ಭಾವನೆ ನಮಗೆ





## ಸ್ವಚ್ಛ ಭಾರತ

ಇದು ಸ್ವಚ್ಛ ಭಾರತವೋ
ಸ್ವೇಚ್ಛೆಯ ಭಾರತವೋ?
ಮನಸುಗಳ ಕೊಳೆಯ
ತೊಳೆದುಕೊಂಡಲ್ಲಿ, ರಸ್ತೆ
ಚರಂಡಿಗಳು ಸೇರಿದಂತೆ
ಕಛೇರಿಗಳೂ ಕಡತಗಳೂ
ಭ್ರಷ್ಟಾಚಾರದಿಂದ
ತಾನಾಗೇ ಶುಚಿಯಾಗುವುವು!

**ಆರ್. ಯು. ಅಭಿಷೇಕ್**
ಸೂಕ್ಷ್ಮ ಜೀವಶಾಸ್ತ್ರ ವಿಭಾಗ, ಬೆಂಗಳೂರು ವಿ.ವಿ., ಬೆಂಗಳೂರು – ೫೬

ಮೊದಲು ಬರಬೇಕು. ನಾವೆಲ್ಲ ನಮ್ಮ ಗ್ರಾಮಗಳಲ್ಲಿ ಮಾಡಬೇಕಾದ ಕರ್ತವ್ಯವೆಂದರೆ, ಮತ್ತೆ ಭಜನೆ ಕೇಂದ್ರಗಳನ್ನು ತೆರೆಯುವುದು, ಎಲ್ಲಾ ಜನಾಂಗದ ಜನರು ಭಜನಾ ಕೇಂದ್ರಕ್ಕೆ ಬರುವ ಹಾಗೆ ನಮ್ಮ ಜನಪದ ಗೀತೆಗಳನ್ನು ಹಾಡುವುದು, ಹಾಡಿಸುವುದು, ಬದುಕಿನ ಭಾವನೆಯ ಜೊತೆಗೆ ನಂಬಿಕೆ, ಪ್ರೀತಿ ಮತ್ತು ಕರುಣೆ ಗಟ್ಟಿಗೊಳಿಸುವುದು ಹಾಗೂ ಮರೆತುಹೋಗುತ್ತಿರುವ ಸುಂದರ ಜಾನಪದ ಕಲೆಗಳನ್ನು ಪುನಶ್ಚೇತನಗೊಳಿಸುವುದು, ಸಂವರ್ಧನೆ, ಸಂರಕ್ಷಣೆ ಮಾಡುವುದು, ಜನಪದ ವಾದ್ಯಗಳನ್ನು ಮತ್ತೆ ತಯಾರಿಸಿ, ನುಡಿಸುವಂತೆ ಮಾಡುವುದು, ಮನರಂಜನೆಗಾಗಿ ಹುಟ್ಟಿದ ಜನಪದ ಕಲೆಗಳನ್ನು ಪ್ರದರ್ಶಿಸುವುದು, ನಿಜವಾದ ಮನರಂಜಕರು ನಮ್ಮ ಜನಪದರು ಎಂಬ ಭಾವನೆಯ ಜೊತೆಗೆ ಆಕರ್ಷಕ ಜಾನಪದ ನೃತ್ಯ ಮತ್ತು ಚರ್ಮವಾದ್ಯಗಳನ್ನು ನುಡಿಸಲು ತರಬೇತಿ ಕೊಡುವುದು – ಇವುಗಳಿಗೆ ಆದ್ಯತೆ ನೀಡಬೇಕು. ಬುಡಕಟ್ಟು, ಜನಪದ ಅಧ್ಯಯನವನ್ನು ಕೈಗೊಳ್ಳಬೇಕು. ಲಾವಣಿ, ಗೀಗಿ, ಸಣ್ಣಾಟ, ದೊಡ್ಡಾಟ, ಚರ್ಮವಾದ್ಯ ಮೇಳ ಇವುಗಳೆಲ್ಲವನ್ನೂ ಪುನಶ್ಚೇತನಗೊಳಿಸುವುದು ನಮ್ಮೆಲ್ಲರ ಹೊಣೆಯಾಗಬೇಕು. ಹಾಗಾದಾಗಲೇ ಜಾನಪದ ಜೀವಾತ್ಮಕ್ಕೆ ಮತ್ತೆ ಶಕ್ತಿ ಬಂದಿದೆ ಎಂದರ್ಥ.

ಜಾನಪದ ಸಮಕಾಲೀನದ್ದಲ್ಲ ಎಂದು ಹೇಳುವುದು ಸರಿ. ಅನ್ವಯಿಕ ಅಧ್ಯಯನದ ಪರಿಕಲ್ಪನೆಗಳನ್ನು ಜಾಗತೀಕರಣದ ಸಂದರ್ಭದಲ್ಲಿ ನಿಂತು ಕೆಲವನ್ನು ಅಥವಾ ಒಟ್ಟಾರೆ ಜಾನಪದವನ್ನು ನೋಡುತ್ತಲೇ ನಮ್ಮ ಸಮಕಾಲೀನ ಅಗತ್ಯತೆಗಳಿಗೆ ತಕ್ಕಂತೆ ಅವುಗಳನ್ನು ಅನ್ವಯಿಸಿಕೊಳ್ಳುವುದು ಸರಿಯಾದ ಮಾರ್ಗ. ಆದರೆ ಇವುಗಳು ಎಲ್ಲಿಂದ ಬಂದವು ? ಬಂದ ಬಗೆ ಹೇಗೆ ? ಇವು ಹುಟ್ಟಿರುವುದಕ್ಕೆ ಅಂದಿನ ಸಾಮಾಜಿಕ ಸಂದರ್ಭದ ಸ್ಥಿತಿಗತಿ ಹೇಗಿತ್ತು ? ಈ ಕುರಿತು ಯಾವುದೇ ಕಾಲಮಾನ, ಸಿದ್ಧಾಂತ ಇದ್ದಂತೆ ಕಾಣುವುದಿಲ್ಲ. ವಿಜ್ಞಾನ, ತಂತ್ರಜ್ಞಾನದಿಂದ ಆಗುತ್ತಿರುವ ಬದಲಾವಣೆಗಳನ್ನು ನಮ್ಮದಾಗಿ ಸ್ವೀಕರಿಸುತ್ತಲೇ, ಸಾಮಾಜಿಕ ಅಸ್ತಿತ್ವಕ್ಕೆ ಅನಿವಾರ್ಯ ಕೂಡ ಎಂದು ಭಾವಿಸುತ್ತಲೇ, ಜನಪದ ಸಮಾಜ ಸಂಪ್ರದಾಯದ ಚೌಕಟ್ಟಿನಲ್ಲಿ ಅದರ ಅನ್ವಯಿಕತೆಯನ್ನು ಗುರುತಿಸಬೇಕಿದೆ.

ಪಾರಂಪರಿಕವಾಗಿ ಬಂದ ನೂರಾರು ವರ್ಷಗಳ ಜನಸಂಪ್ರದಾಯವಾದ ಜಾನಪದ ನಡೆ ನುಡಿ ಹಾಗೂ ನಮ್ಮ ಬದುಕಿನ ಪಲ್ಲಟಗಳು, ತಲ್ಲಣಗಳು ಎಲ್ಲವೂ ತಿರುವು ಪಡೆದುಕೊಳ್ಳುತ್ತಿರುವುದು ಜಾನಪದ ಚಾರಿತ್ರಿಕ ಹಿನ್ನೆಲೆಯಿಂದಲೇ ಎಂಬ ಪ್ರಜ್ಞೆಯೂ ನಮಗಿರಬೇಕಾಗಿರುವುದು ಬಹಳವೇ ಮುಖ್ಯ.

ಜಾನಪದವು ಕೂಡ ಅಂದಿನಿಂದ ಇಲ್ಲಿಯವರೆಗೆ ತನ್ನ ಮೂಲ ರೂಪ ಸ್ವರೂಪದಲ್ಲಿವೆ ಎಂದು ಹೇಳಲು ಸಾಧ್ಯವೇ ಇಲ್ಲ. ಜಾಗತೀಕರಣ, ನಗರೀಕರಣದ ಆಯಾ ಕಾಲಕ್ಕೆ ಹೊಸ ಹೊಸ ಆವಿಷ್ಕಾರಗಳು ತಮಗೆ ಅರಿವಿಲ್ಲದಂತೆ ಅನೇಕ ಬದಲಾವಣೆಗಳನ್ನು ಪಡೆಯುತ್ತಾ ಬಂದಿವೆ. ಅಂದಿನ ಮುಗ್ಧ ಸಮಾಜದಲ್ಲಿ ಹುಟ್ಟಿದ ಸಂದರ್ಭದ ಪದಗಳೇ ಬೇರೆ, ಇವತ್ತಿನ ಸಂದರ್ಭಕ್ಕೆ ಪದಗಳನ್ನು ಕಟ್ಟುವ ರೀತಿ ನೀತಿ ಅನಿವಾರ್ಯತೆಯೇ ಬೇರೆ. ಹಾಗಾಗಿ ಕಲೆಗಳು ತಮ್ಮ ಸಾಂಪ್ರದಾಯಿಕ ಮಡಿವಂತಿಕೆಯನ್ನು ಬಿಟ್ಟು ಕಲಾತ್ಮಕ ದೃಷ್ಟಿಯಲ್ಲಿ ಹೇಳುವುದಕ್ಕೆ ಹೊರಟಾಗ ಮಾತ್ರ. ಅವುಗಳೆಲ್ಲ ಪ್ರದರ್ಶನ ಕಲೆಗಳ ಮನರಂಜನೀಯ ರೂಪ ತಾಳಿ ಪ್ರದರ್ಶನವಾಗುತ್ತಿವೆ. ಅಂದರೆ ಇಲ್ಲಿ ಅನೇಕ ಅನ್ವಯಿಕ ರೂಪ ಕಾಣುತ್ತಿದ್ದೇವೆ. ಅಲ್ಲದೆ ಕಲೆಗಳೂ ಕೂಡ ಸ್ಥಿತ್ಯಂತರ ಹೊಂದಿವೆ, ಸಂಪ್ರದಾಯ ಬಿಟ್ಟು ಹೊರಬಂದು ಅವುಗಳು ಕಲೆಗಳಾಗಿ ಮೆರೆಯುತ್ತಿವೆ. ಅಂದರೆ ಅವುಗಳ ಭಕ್ತಿ, ಮೌಲ್ಯತೆಗಳನ್ನು ಸಡಿಲಗೊಳಿಸಿಕೊಂಡಿದ್ದೇವೆ. ಅವುಗಳು ಬದುಕಿನ ಜೀವನದ ಅಂಗವಾಗಿ, ಕಲೆಗಳಿಂದ ಜೀವನ, ಜೀವನದಿಂದ ಬಂದ ಕಲೆಗಳು ನಮಗೊಂದು ಉದ್ಯೋಗ ಕೊಟ್ಟಿವೆ ಎಂಬುದು ನಾವೆಲ್ಲ ಗಮನಿಸಬೇಕಾಗಿದೆ.

ಈ ಗ್ರಾಮೀಣ ಸಂಪ್ರದಾಯದ ಗ್ರಾಮದೇವತೆಗಳ ಭಕ್ತಿಭಾವದಿಂದ ಹುಟ್ಟಿ ಆ ಕಲೆಗಳೆಲ್ಲ ಹಳೆಯ ಮತ್ತು ಹೊಸ ಸ್ವರೂಪ ಪಡೆಯುತ್ತಾ, ಆಚರಣೆಗಳು ಕೂಡ ಆಧುನಿಕ ಸ್ವರೂಪ ಪಡೆಯುತ್ತಾ ಅಂದಿನ ಸಂಶೋಧಕರ ದೃಷ್ಟಿಯಲ್ಲಿ ಇದ್ದ ಕಲೆಗಳ ಸ್ವರೂಪವೇ ಬೇರೆಯಾಗಿದೆ. ಇಂದಿನ ಸಂಶೋಧಕರು ಆ ಕಲೆಗಳ ಸಂಪ್ರದಾಯಗಳನ್ನು ಗ್ರಹಿಸುವ ರೀತಿ ನೀತಿಯೇ ಬೇರೆ. ಅಂದರೆ ಇಂದಿನ ಸಂಶೋಧನೆಯ ವಿಧಾನ, ಸಂಪ್ರದಾಯ ಮತ್ತು ವೈಜ್ಞಾನಿಕ ಅಂಶಗಳನ್ನು ಇಟ್ಟುಕೊಂಡು ಜಾನಪದ ಕಲೆ, ಆಚರಣೆ, ನಂಬಿಕೆಗಳನ್ನು ನೋಡುವ ಕ್ರಮ ಸಾಮಾಜಿಕ ಬದುಕಿಗೆ ಅನಿವಾರ್ಯವೂ ಕೂಡ. ಅನ್ವಯಿಕತೆಯ ನೆಲೆಯ ದೃಷ್ಟಿಯಲ್ಲಿ ಶೋಧನೆಯ ಕಲ್ಪನೆ, ರೂಪ ಬದಲಾಗುತ್ತಿರುವುದು ಈ ಆಧುನಿಕ ಆಡಂಬರ ಜಗತ್ತಿಗೆ ಜಾಗತೀಕರಣಕ್ಕೆ ಅನಿವಾರ್ಯವಾಗಿದೆ.

ಕರ್ನಾಟಕದ ಯಾವುದೇ ಕಲೆಯನ್ನು ಗಮನಿಸುವಾಗ, ಗ್ರಹಿಸುವಾಗ, ಸಂಶೋಧಕರಾಗಲೀ, ಕಲಾವಿದರಾಗಲೀ, ನೋಡುವವರಾಗಲೀ ಅಭಿವೃದ್ಧಿಯ ದೃಷ್ಟಿಯಲ್ಲಿ ಕಲಿಸುವ, ಕಲಿಯುವ ದೃಷ್ಟಿಯಲ್ಲಾಗಲೀ ಆಯಾ ಕಲೆಗಳು ಬಂದ ಸಾಂಪ್ರದಾಯಿಕ ಹಿನ್ನೆಲೆಯನ್ನು ಅರಿತು, ಗ್ರಹಿಸಿ, ಆ ಕಲೆಗಳೂ ಬಂದ ಬಗೆಯನ್ನು ಅರ್ಥಮಾಡಿಕೊಂಡು ಯಾವುದೇ ಕಲೆಯನ್ನು ಕಲಿಯುವುದು ಅತ್ಯಂತ ಮುಖ್ಯ ಅಂಶವಾಗಿದೆ. ಕ್ರಮೇಣ ಯುವಕರು ಇವುಗಳ ಚರಿತ್ರೆಯನ್ನು ಮರೆತು ಕಲೆಗಳ ಮೆರವಣಿಗೆಯತ್ತ ಹೆಚ್ಚು ಗಮನಕೊಡುತ್ತಿದ್ದಾರೆ. ಅಂತಹ ಯುವ ಕಲಾವಿದರಿಗೆ ಸಂಶೋಧಕರು, ಜನಪದ ಜ್ಞಾನಿಗಳು ಅಥವಾ ಆಸಕ್ತರು ವಿಚಾರ ಸಂಕಿರಣಗಳಲ್ಲಿ ತಿಳುವಳಿಕೆ ನೀಡಬೇಕಿದೆ. ಆ ಯುವಕರು ಈ ಕಲೆಗಳೂ ಎಲ್ಲಿಂದ ಬಂದಿವೆ ಎಂಬುದನ್ನು ತಿಳಿಯುವುದು ಅವಶ್ಯ.

ಈ ಆಧುನೀಕರಣ ಪ್ರಕ್ರಿಯೆಯ ಭರದಲ್ಲಿ ನಮ್ಮ ಜಾನಪದ ಕಲೆಗಳು ಹೇಗೆ ಬಂದವು ? ಎಂಬ ಪ್ರಶ್ನೆಯನ್ನು ಕೇಳುವ ಗೋಜಿಗೇ ಹೋಗದೆ ಜನರು ಜನಪದ ಪ್ರದರ್ಶನ ಕಲೆಗಳ ಮೆರವಣಿಗೆಗಳನ್ನು ನೋಡಿ, ಸಂತೋಷಪಟ್ಟು ಅವುಗಳ ಮೂಲದ ಬಗ್ಗೆ ಚಿಂತಿಸುವುದೇ ಇಲ್ಲ. ಜನಪದ ಕಲೆಗಳನ್ನು ತಮ್ಮ ಬದುಕಿನ ಭಾಗವಾಗಿ ಬೆಳೆಸಿಕೊಂಡು, ಉಳಿಸಿಕೊಂಡು ಬಂದಂಥವುಗಳನ್ನು ಈ ಆಧುನಿಕ ಜಗತ್ತಿನ ಯುವಜನತೆ, ಈ ಕಲೆಗಳು ಬೆಳೆದುಬಂದ ದಾರಿ ಯಾವುದು ? ಈ ಕಲೆಗಳ ಮಹಿಮೆ ಏನು ? ಸಂಪ್ರದಾಯ ಏನು ? ಹೆಣ್ಣುಮಕ್ಕಳ ಜಾನಪದ ಸಂಪ್ರದಾಯ ಯಾವುದು ? ಗಂಡುಮಕ್ಕಳ ಕಲೆಗಳು ಯಾವುವು ? ಎಂಬ ಕನಿಷ್ಠ ಪ್ರಜ್ಞೆಯನ್ನು ಯುವಪೀಳಿಗೆಯಲ್ಲಿ ಮೂಡಿಸುವುದು ಬಹಳ ಮುಖ್ಯ. ಈ ಹಿನ್ನೆಲೆಯಲ್ಲಿ ಜಾನಪದ ಅನ್ವಯಿಕತೆ ಕುರಿತ ಅಧ್ಯಯನ ಮತ್ತು ಆ ಕಲೆಗಳ ಅಭ್ಯಾಸ ಅಗತ್ಯವಲ್ಲವೆ ?

**ಅಪ್ಪಗೆರೆ ತಿಮ್ಮರಾಜು**
ಜಾನಪದ ಗಾಯಕರು, ಚಿಂತಕರು, ನಂ. ೨೮, ೧೦ನೇ ಮುಖ್ಯರಸ್ತೆ
೪ನೇ ಅಡ್ಡರಸ್ತೆ, ಹಂಪಿನಗರ, ವಿಜಯನಗರ, ಬೆಂಗಳೂರು – ೫೬೦ ೧೦೪



# ಕ್ಷ - ಕಿರಣ

- ಪ್ರಕಾಶ್ ಎಸ್.

ಸ್ವಚ್ಛ ಭಾರತ ಸ್ವಚ್ಛ ಬೆಂಗಳೂರು







ಮೋದಿ ಅಮೆರಿಕಾ ಭೇಟಿ ಫಲಪ್ರದ
ಭಾರತದಲ್ಲಿ ಬಂಡವಾಳ ಹೂಡಲು ಆಹ್ವಾನ






# ಕನ್ನಡವೇ ನಿತ್ಯ

**ಕಾಲೇಜಿಗೆ ಹೋಗುವ ಪಕ್ಕದ್ಮನೆ ಅಕ್ಕ ಒಮ್ಮೆ ಅವಳ ಗೆಳತಿಯರ ಜೊತೆಗೆ ನನ್ನನ್ನ ಪರಿಚಯಿಸುತ್ತಾ ಇವಳು ನನ್ನ ನೇಬರ್ ಅಂತ ಅಂದಿದ್ದಕ್ಕೆ ನಂಗೆ ವಿಪರೀತ ಕೋಪ ಬಂದಿತ್ತು. ಯಾಕೆಂದರೆ ನನಗೆ ಲೇಬರ್ ಮತ್ತು ನೇಬರ್ ಇವುಗಳ ಅರ್ಥವ್ಯತ್ಯಾಸ ಗೊತ್ತಿರಲಿಲ್ಲ. ನೇಬರ್ ಅಂದ್ರೆ ಲೇಬರ್ ಅಂತಾನೆ ತಿಳಿದುಕೊಂಡಿದ್ದೆ. ನನ್ನ ಕೋಪಕ್ಕೆ ಕಾರಣ ತಿಳಿದು ವಿಕೋಪಕ್ಕೆ ಹೋಗದ ಹಾಗೆ ಸಮಾಧಾನಿಸಿ ಪದದ ಅರ್ಥ ಹೇಳಿಕೊಟ್ಟ ಮೇಲೆ ಕೊಂಚಮಟ್ಟಿಗೆ ನಿರಾಳ ಆದರೂ ಅಂದಿನಿಂದ ಇಂಗ್ಲಿಷ್ ಅಂದ್ರೆ ಏನೋ ಅವ್ಯಕ್ತ ಭಯ. ಈಗ ಶಾಲಾ ಕಾಲೇಜು ವಿದ್ಯಾಭ್ಯಾಸ ಮುಗಿದು ಇಂಗ್ಲಿಷಿನಲ್ಲೇ ಪರೀಕ್ಷೆ ಬರೆದು ಇಂಗ್ಲಿಷ್ ಮೀಡಿಯಮ್ ಮಕ್ಕಳಿಗಿಂತ ಹೆಚ್ಚು ಅಂಕ ತೆಗೆದು ಪಾಸಾಗಿ ಮಾತನಾಡು ವಷ್ಟರ ಮಟ್ಟಿಗೆ ಆ ಭಾಷೆಯ ಮೇಲೆ ಹಿಡಿತ ಸಿಕ್ಕರೂ ಮಾತನಾಡಲೊಂಥರಾ ಥರ.**

**ಸ್ಮಿತಾ ಅಮೃತರಾಜ್**

ನಾವು ಎಲಿಮೆಂಟರಿ ಶಾಲೆಗೆ ಹೋಗುವ ಹೊತ್ತಿಗೆ ಅಲ್ಲೊಂದು ಇಲ್ಲೊಂದರಂತೆ ಅಕ್ಕಪಕ್ಕದ ಊರುಗಳಲ್ಲಿ ಇಂಗ್ಲಿಷ್ ಮೀಡಿಯಮ್ ಸ್ಕೂಲ್‌ಗಳು ಹಣಕಿ ಹಾಕುತ್ತಿದ್ದವಷ್ಟೆ. ಉಳ್ಳವರು ಹಾಗೂ ತಮ್ಮ ಮಕ್ಕಳನ್ನು ಇಂಗ್ಲಿಷ್ ಮೀಡಿಯಮ್ ಸ್ಕೂಲ್‌ಗೆ ಸೇರಿಸಬೇಕೆಂಬ ಮಹಾತ್ವಾಕಾಂಕ್ಷೆ ಹೊಂದಿದ್ದ ಹೆತ್ತವರ ಮಕ್ಕಳಿಗೆ ಮಾತ್ರ ಇಂಗ್ಲಿಷ್ ಮೀಡಿಯಮ್ ಸ್ಕೂಲ್‌ನೊಳಕ್ಕೆ ಹೊಕ್ಕು ಲಯಬದ್ಧವಾಗಿ ಇಂಗ್ಲಿಷ್ ಪ್ರಾರ್ಥನೆಯನ್ನು ಉಸುರುವ ಭಾಗ್ಯ. ನಾವೆಲ್ಲಾ ಬರೇ ಕಾಲಿನಲ್ಲಿ. ಹೆಚ್ಚೆಂದರೆ ಹವಾಯಿ ಚಪ್ಪಲನ್ನು ತೊಟ್ಟು ಬಲು ದೂರದಿಂದ ನಡೆದುಕೊಂಡೇ ಬರುವಾಗ, ಅವರುಗಳೆಲ್ಲಾ ಗರಿ ಗರಿ ಇಸ್ತ್ರಿ ಮಾಡಿದ ಯೂನಿಫಾರಂ, ಟೈ, ಮಿರಿ ಮಿರಿ ಮಿಂಚುವ ಕರಿ ಬೂಟು ಹಾಕಿ, ಮನೆ ಬಾಗಿಲಿಗೇ ಬರುವ ರಿಕ್ಷಾ ಏರಿ ಟಾ ಟಾ, ಬೈ ಬೈ ಹೇಳುತ್ತಾ ಮರೆಯಾಗುವಾಗ ನಾವುಗಳು ಒಂಟಿ ಕೈಯ ಬಟ್ಟೆಚೀಲದ ತುಂಬ ಪುಸ್ತಕಗಳನ್ನು ಹೊರಲಾರದೆ, ಆಯಾಸವಾಗಿ ಮತ್ತೊಂದು ಭುಜಕ್ಕೆ ರವಾನಿಸುತ್ತಾ ಅವರು ಹೋದ ದಾರಿಯನ್ನೇ ಬೆರಗುಗಣ್ಣಿನಿಂದ ನೋಡುತ್ತಾ ಸಾಗುತ್ತಿದ್ದೆವು. ಆ ಕಾಲಕ್ಕೆ ಅದು ಮನಸಿಗೆ ಸುಖ ತರುವ ಸಂಗತಿಯೇ ಆಗಿತ್ತು. ಕಾನ್ವೆಂಟ್ ಮಕ್ಕಳ ಜೊತೆ ಮಾತಿಗಿಳಿಯುವುದಕ್ಕೂ ಏನೋ ಒಂದು ರೀತಿಯ ಮುಜುಗರ. ಆ ಮಕ್ಕಳಿಗೂ ಅಷ್ಟೆ, ಸರಕಾರಿ ಕನ್ನಡ ಶಾಲೆಗೆ ಹೋಗುವ ನಮ್ಮಗಳ ಜೊತೆ ಮಾತನಾಡುವುದಕ್ಕೂ ಒಂಥರಾ ಅಸಡ್ಡೆ. ನಾವು ಶಾಲೆ ಬಿಡುವ ಹೊತ್ತಿಗೆ ಒಮ್ಮೊಮ್ಮೆ ಅಪರೂಪಕ್ಕೆಂಬಂತೆ ಅವರುಗಳು ಸಿಕ್ಕರೆ, ನಾವುಗಳೆಲ್ಲಾ ಕಾಡುಹರಟೆ ಬಿಟ್ಟು ಸದ್ದಿಲ್ಲದೆಯೇ ಅವರ ಹಿಂದೆಯೇ ನಡೆಯುತ್ತಿದ್ದೆವು. ಅವರ ಬಾಯಿಂದ ಪುತಪುತನೆ ಉದುರುವ ಇಂಗ್ಲಿಷ್ ಪದಗಳನ್ನು ಹೆಕ್ಕಿ ಹೆಕ್ಕಿ ನಮ್ಮ ಚೀಲದೊಳಗೊಂದಷ್ಟು, ತಲೆಯೊಳಗೊಂದಿಷ್ಟು ತುರುಕಲು ಪ್ರಯತ್ನಿಸುತ್ತಿದ್ದೆವು. ಅವರು ಮಾತನಾಡಿದ್ದೆಲ್ಲಾ ಟಸ್ ಪುಸ್ ಅಂತ ಕೇಳುತ್ತಿತ್ತೇ ವಿನಾ ಬೇರೇನೂ ತಲೆ ಬುಡ ಒಂದೂ ಅರ್ಥವಾಗುತ್ತಿರಲಿಲ್ಲ. ಅವರು ಹೋದ ನಂತರವೂ ಅವರಾಡಿದ ಶಬ್ದಗಳು ಗಾಳಿಯೊಂದಿಗೆ ಗಿಲಕಿ ಹೊಡೆದಂತಾಗಿ ಎಷ್ಟೋ ಹೊತ್ತಿನವರೆಗೂ ನಿಶ್ಶಬ್ದದಿಂದ ನಾವುಗಳು ಒಮ್ಮೆಗೇ ಎಚ್ಚೆತ್ತುಕೊಂಡವರಂತೆ ಎಲ್ಲ ಮರೆತು ನಮ್ಮ ದಿನನಿತ್ಯದ ಕಾಡುಹರಟೆಯತ್ತ ಹೊರಳಿಕೊಂಡುಬಿಡುತ್ತಿದ್ದೆವು.



ಆಗೆಲ್ಲಾ ನಾವುಗಳು ಶಾಲೆಗೆ ಹೋಗುತ್ತಿದ್ದ ಸಮಯದಲ್ಲಿ ಇಂಗ್ಲಿಷ್ ಪದಗಳು ಅಷ್ಟಾಗಿ ಬಳಕೆಯಲ್ಲಿರಲಿಲ್ಲ. ನಾವೆಲ್ಲಾ ಹಳ್ಳಿಯ ಮೂಲೆಯಿಂದ ಶಾಲೆಗೆ ಬರುತ್ತಿದ್ದ ಕಾರಣ ನೆಟ್ಟಗೆ ಕನ್ನಡ ಮಾತನಾಡಲೂ ಬರುತ್ತಿರಲಿಲ್ಲ. ತರಗತಿಯೊಳಗೆ ಮಾತ್ರ ಕನ್ನಡ ಮಿಸುಕಾಡುತ್ತಿತ್ತೇ ವಿನಾ, ಉಳಿದೆಲ್ಲಾ ಸಂದರ್ಭಗಳಲ್ಲೂ ಆಡುನುಡಿಯೇ ಓಲಾಡಿಬಿಡುತ್ತಿತ್ತು. ಇದರಿಂದಾಗಿ ನಮಗೆ ಕನ್ನಡ ಮಾತನಾಡುವ ಸಂದರ್ಭದಲ್ಲೂ ಗ್ರಾಮ್ಯ ಪದಗಳೇ ಹೆಚ್ಚಿನ ಮಟ್ಟಿಗೆ ನಾಲಗೆ ತುದಿಯಲ್ಲಿ ಹಣಕಿಹಾಕಿಬಿಡುತ್ತಿದ್ದವು. ಇನ್ನು ನಾವು ಬಳಸುವ ಇಂಗ್ಲಿಷ್ ಪದಗಳೋ ನಮಗಷ್ಟೇ ಪ್ರೀತಿ. ಸ್ಕೂಲ್‌ಗೆ ಇಸ್ಕೂಲ್, ಕ್ಲಾಸ್‌ಮೆಟ್‌ಗೆ ಕ್ಲಾಸ್‌ಮೆಂಟ್, ಕನೆಕ್ಷನ್‌ಗೆ ಕಲೆಕ್ಷನ್... ಹೀಗೆ ನಮ್ಮಿಂದಲೇ ರೂಪಾಂತರಗೊಂಡ ಇಂಗ್ಲಿಷ್. ಹೈಸ್ಕೂಲ್ ಮೆಟ್ಟಿಲು ತಲುಪುವವರೆಗೂ ನಾವು ಮಾತಾಡಿದ್ದು ತಪ್ಪು ಅಂತ ನಮಗೂ ಗೊತ್ತಿರಲಿಲ್ಲ, ಗೊತ್ತಿದ್ದವರು ಹೇಳಿಕೊಡುವ ಸಾಹಸಕ್ಕೆ ಕೈ ಹಾಕಿಯೂ ಇರಲಿಲ್ಲ.




ಆಗ ತಾನೇ ನನಗೆ ಐದನೇ ಇಯತ್ತೆಗೆ ಹೋಗುವ ಸಂಭ್ರಮ. ಹೊಸ ಭಾಷೆ ಇಂಗ್ಲಿಷನ್ನು ಕಲಿಯುವ ಸಡಗರ, ಉಮೇದು. ಎಬಿಸಿಡಿಯ ದೊಡ್ಡಕ್ಷರ, ಸಣ್ಣಕ್ಷರಗಳನ್ನೆಲ್ಲಾ ಅನಾಯಾಸವಾಗಿ ಕಲಿತುಬಿಟ್ಟಾಗ, ಇಂಗ್ಲಿಷ್ ಏನು ದೊಡ್ಡ ಕುಂಬಳಕಾಯಿ ? ಖಂಡಿತಾ ಕಲಿಯಬಹುದು ಅನ್ನೋ ಮನೋಭಾವ ಅಂತರ್ಗತವಾಗಿ ಬಿಟ್ಟಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಆ ಕಾನ್ವೆಂಟ್ ಮಕ್ಕಳ ಟಸ್ ಪುಸ್ ಸದ್ದುಗಳು ಇನ್ನು ಅರ್ಥವಾಗಿಬಿಡಬಹುದೆಂಬುದೇ ಹೆಚ್ಚು ಖುಷಿ ಕೊಡುವ ಸಂಗತಿಯಾಗಿತ್ತು. ಇಷ್ಟೆಲ್ಲಾ ಕಲಿಯೋ ಹೊತ್ತಿಗೆ ನಮ್ಮ ಶಾಲೆಗೆ ಆಗಮಿಸಿದ್ದ ಟಿ.ಸಿ.ಎಚ್. ತರಬೇತು ಪಡೆದಿದ್ದ ಶಿಕ್ಷಕರು ನಮ್ಮ ತರಗತಿಯೊಳಗೂ ಬಂದೇಬಿಟ್ಟರು. ಅವರೆಲ್ಲಾ ಇನ್ನೂ ಎಳೆಯರು. ಅವರಲ್ಲಿ ಇಂಗ್ಲಿಷ್ ಕಲಿಸಲು ಬರುತ್ತಿದ್ದ ಮೇಷ್ಟ್ರೊಬ್ಬರಿಗೆ ತಮಗೆ ಗೊತ್ತಿದ್ದ ವಾಕ್ಯಗಳನ್ನೆಲ್ಲಾ ನಮ್ಮ ಮೇಲೆ ಪ್ರಯೋಗಿಸುತ್ತ ಆ ಮೂಲಕ ತಾವೂ ಕಲಿಯುವ ಹಂಬಲವಿದ್ದಿರಬೇಕು. ಹಾಗಾಗಿ ಇಂಗ್ಲಿಷ್ ಪೀರಿಯೆಡ್‌ನಲ್ಲಿ ತುಂಬ ಓತಪ್ರೋತವಾಗಿ ಇಂಗ್ಲಿಷೇ ಕುಣಿದಾಡುತ್ತಿತ್ತು. ನಾವುಗಳೋ ಕಷ್ಟದ ಪದಗಳನ್ನೆಲ್ಲಾ ಡಿಕ್ಷನರಿಯಲ್ಲಿ ಹುಡುಕಿ ತಿಳಿದುಕೊಳ್ಳುವಷ್ಟು ಪ್ರವೀಣರಾಗಿಬಿಟ್ಟಿದ್ದೆವು. ಅದೂ ಮರುದಿನದ ಪಾಠದ ಕ್ಲಿಷ್ಟ ಶಬ್ದಗಳ ಬಗ್ಗೆ ಮಾತ್ರ. ಅದರಾಚೆಗೆ ಏನೂ ಗೊತ್ತಿರಲಿಲ್ಲ. ಹಾಗಾಗಿ ಒಮ್ಮೆ 'ಏಪ್' ಅಂದರೆ 'ಗೊರಿಲ್ಲ' ಅಂತ ತಿಳಿದುಕೊಂಡು ಹೋಗಿದ್ದೆವು. ಆ ಸಲ ಮೇಷ್ಟ್ರು ಯಾರ ಜೊತೆಗೂ ಪದದ ಅರ್ಥ ಕೇಳುವ ಗೋಜಿಗೇ ಹೋಗದೆ ತಾವೇ ಅದರ ಅರ್ಥ ಆ್ಯಪಲ್ ಎಂದು, ಅಂದ್ರೆ ಸೇಬು ಹಣ್ಣು ಅಂದಾಗ ತಪ್ಪೋ ಸರಿಯೋ ಒಂದೂ ಗೊತ್ತಾಗದೆ ಕಕ್ಕಾಬಿಕ್ಕಿಯಾಗಿ ಮತ್ತೆಂದೂ ಪದ ಹುಡುಕಿ ತಯಾರಿ ಮಾಡಿಕೊಂಡು ಹೋಗುವಂತಹ ಒಳ್ಳೆ ಅಭ್ಯಾಸಕ್ಕೆ ಹೋಗಲಿಲ್ಲ. ಹಾಗೂ ಹೀಗೂ ಒಂದು ದಿನ ಪಾಠ ಮುಗಿಸಿ ಎಲ್ಲರನ್ನು ಉದ್ದೇಶಿಸಿ "ಅಂಡರ್‌ಸ್ಟ್ಯಾಂಡ್ ?" ಅಂತ ಕೇಳುವಾಗ ಮಕ್ಕಳೆಲ್ಲರೂ ಗಪ್‌ಚಿಪ್, ಯಾರ ಬಾಯಿಂದಲೂ ಸದ್ದೇ ಹೊರಡದಷ್ಟು. ಯಾಕೆಂದರೆ ಅಂಥ ಒಂದು ಪದವನ್ನು ನಾವು ಮೊದಲ ಬಾರಿಗೆ ಕೇಳಿದ್ದು. ಹಾಗಾಗಿ ಅವರು ಪ್ರಶ್ನೆ ಹಾಕಿದ್ದೋ ? ಉತ್ತರ ಹೇಳಿದ್ದೋ ? ಒಂದೂ ಅರ್ಥವಾಗದೆ ಗೊಂದಲಕ್ಕೆ ಬಿದ್ದು ತಡವರಿಸುವಂತಾಯಿತು. ನಮ್ಮೆಲ್ಲರ ಮಹಾ ಮೌನವನ್ನು ಭೇದಿಸಿ ತರಗತಿಯಲ್ಲಿ ತುಸು ಜಾಣೆಯಾದ ನನ್ನೆಡೆಗೇ ಮತ್ತದೇ "ಅಂಡರ್‌ಸ್ಟ್ಯಾಂಡ್ ?" ಅಂತ ಬಾಣ ಎಸೆದಂತೆ ಕೇಳಿದರು. ಅಂಡರ್, ಆನ್, ಸಿಟ್, ಸ್ಟ್ಯಾಂಡ್ ಇವಿಷ್ಟೇ ಪದಗಳ ಅರ್ಥ ಈಗಷ್ಟೇ ಗೊತ್ತಾಗಿದ್ದ ನನಗೆ ಮೇಷ್ಟ್ರು ಯಾಕೆ ನನ್ನ ಕೆಳಗೆ ನಿಲ್ಲೋಕೆ ಹೇಳಿದ್ರು ಅಂತ ಗೊಂದಲವಾಗಿ ಕೆಳಗೆ ಡೆಸ್ಕಿನ ಅಡಿಯಲ್ಲಿ ನಿಲ್ಲಲಾಗದೆ ಹಾಗೇ ಎದ್ದು ನಿಂತುಬಿಟ್ಟೆ. ನಾನು ಎದ್ದು ನಿಂತದ್ದು ನೋಡಿ ತರಗತಿಯ ಉಳಿದ ಮಕ್ಕಳೆಲ್ಲರೂ ಏಕ್‌ದಂ ಶಿಸ್ತಿನ ಸಿಪಾಯಿಗಳಂತೆ ತರಗತಿಗೆ ತರಗತಿಯೇ ಎದ್ದು ನಿಂತಾಗ ದಂಗಾಗುವ ಸರದಿ ಈಗ ಪಾಪ ಮೇಷ್ಟ್ರದ್ದು ! ಮತ್ತೆ ಇಂಗ್ಲಿಷನ್ನ ಬದಿಗೊತ್ತಿ, "ಯಾಕೆ ನೀವುಗಳೆಲ್ಲಾ ಎದ್ದು ನಿಂತದ್ದು ?" ಅಂತ ಅಚ್ಚ ಕನ್ನಡದಲ್ಲಿ ಕೇಳಿದಾಗ ಹೋದ ಉಸಿರು ಮತ್ತೆ ಬಂದಂತಾಗಿ, ನಾನೇ ತುಸು ಧೈರ್ಯ ವಹಿಸಿ, ನೀವು "ಅಂಡರ್‌ಸ್ಟ್ಯಾಂಡ್ ಅಂದ್ರಿ... ಡೆಸ್ಕು ತಡೆಯುವ ಕಾರಣ ಕೆಳಗಡೆ ನಿಲ್ಲಲಾಗಲಿಲ್ಲ. ಹಾಗೇ ಎದ್ದು ನಿಂತುಬಿಟ್ಟೆ" ಅಂತ ಒಂದೇ ಉಸುರಿಗೆ ವಿವರಣೆ ಕೊಟ್ಟು ಅಡಿ ನೋಡುತ್ತಾ ನಿಂತುಬಿಟ್ಟೆ. ಮತ್ತೆ ಉಳಿದಂತೆ ನನ್ನನ್ನೇ ಅನುಕರಿಸುವ ಮುಗ್ಧ ಸಹಪಾಠಿಗಳು. ಮೇಷ್ಟ್ರಿಗೋ ಇದು ದೊಡ್ಡ ಜೋಕ್ ಅಂತ ಅನ್ನಿಸಿರಬೇಕು. ದೊಡ್ಡದಾಗಿ ನಕ್ಕುಬಿಟ್ಟರು. ನಮಗೆ ನಗಲು ಇಷ್ಟೇ ಕಾರಣ ಸಾಕಿತ್ತು. ನಾವೂ ದನಿಗೂಡಿಸಿದೆವು ಹೆಂಚು ಹಾರುವಷ್ಟು. ಆ ದಿನ ಈ ಜೋಕ್ ಎಲ್ಲಾ ಟೀಚರ್‌ಗಳ ಕೊಠಡಿಗೆ ರವಾನೆಯಾಗುತ್ತಾ ಹಾಸ್ಯದ ವಾತಾವರಣವನ್ನೇ ನಿರ್ಮಿಸಿಬಿಟ್ಟಿತು. ಇವತ್ತಿಗೂ ಯಾರಾದರೂ 'ಅಂಡರ್‌ಸ್ಟ್ಯಾಂಡ್' ಅಂತ ಹೇಳಿದ್ದು ಕಿವಿಗೆ ಬಿದ್ದರೆ, ಅರ್ಥವಾಗದ್ದನ್ನೆಲ್ಲಾ ಮನಸು ಅರ್ಥೈಸಲು ತೊಡಗಿ ಮುಸಿ ಮುಸಿ ನಗಲು ಶುರುಮಾಡುತ್ತೆ.

ಮತ್ತೊಮ್ಮೆ ಅದಕ್ಕೂ ಮುಂಚೆ ನಾನು ಹೊಸ ಫ್ರಾಕ್ ತೊಟ್ಟು ಬಂದಾಗಲೆಲ್ಲಾ ಟೀಚರ್ ಒಬ್ಬರು, "ಚೆಂದ ಇದೆ ಅಂಗಿ. ಯಾರು ತಂದದ್ದು? ಎಲ್ಲಿಂದ ತಂದದ್ದು?" ಅಂತ ನಾನಾ ಪ್ರಶ್ನೆಗಳ ಸುರಿಮಳೆಯನ್ನೇ ನನ್ನ ಮೇಲೆ ಸುರಿಯುತ್ತಿದ್ದರು. ಬಹುಶಃ ಅವರಿಗೂ ನನ್ನಷ್ಟೇ ಪ್ರಾಯದ ಹೆಣ್ಣುಮಗಳಿದ್ದಿರಬೇಕು. ಅದೇ ಡಿಸೈನ್ ಬಟ್ಟೆ ಹೊಲಿಸುವುದಿತ್ತೋ ಏನೋ... ನಾನೋ ಅಷ್ಟಕ್ಕೇ ಕಾದಿದ್ದವಳಂತೆ ತುಸು ಬಿಂಕದಿಂದ ಕತ್ತು ಕೊಂಕಿಸಿ, "ಅದೂ... ಅದೂ... ನನ್ನ ಅತ್ತೆ ಫಾರಿನ್‌ನಿಂದ ತಂದದ್ದೂ" ಅಂತ ರಾಗವಾಗಿ ಉದ್ದಕ್ಕೆ ಹೇಳುತ್ತಿದ್ದೆ. ಆಗೆಲ್ಲಾ ಫಾರಿನ್‌ನಲ್ಲಿ ಇರೋದಂದ್ರೆ ಯಾವುದೋ ಬೇರೆ ಗ್ರಹದಲ್ಲಿದ್ದಂತೆ ಸಿರಿವಂತಿಕೆಯ ಮತ್ತು ಗೌರವಾದರ ಕೊಡುವ ಸಂಗತಿಯಾಗಿತ್ತು. ಹಾಗಾಗಿ ಫಾರಿನ್ ಬಂಧುಗಳು ಕೊಟ್ಟ ವಸ್ತುಗಳನ್ನು ಬಳಸುವಾಗ ನಮಗೂ ಒಂದು ವಿಶೇಷವಾದ ಮನ್ನಣೆ ದೊರಕುತ್ತಿತ್ತು. ಮಗದೊಮ್ಮೆ ಆ ಟೀಚರ್, "ನಿಮ್ಮ ಅತ್ತೆ ಯಾವ ದೇಶದಲ್ಲಿರೋದು" ಅಂತ ಕೇಳಿದಾಗ ನಾನು ಕಣ್ಣರಳಿಸಿ ಫಾರಿನ್ ಅಂತ ಥಟಕ್ಕನೆ ಉತ್ತರಿಸಿಬಿಟ್ಟೆ. ಅದೇ ಫಾರಿನ್‌ನಲ್ಲಿ ಯಾವ ದೇಶ ಅಂತ ಮಗದೊಮ್ಮೆ ಕೇಳುವಾಗ ನನಗೆ ಇವರು ಯಾಕೆ ಹೀಗೆ ಅಸಂಬದ್ಧ ಪ್ರಶ್ನೆ ಕೇಳುತ್ತಾರೆ ಎನಿಸಿ ನಾನು ಮತ್ತೂ ಬಿಡದೆ ಫಾರಿನ್‌ನಲ್ಲಿ, ಫಾರಿನೇ ದೇಶ ಅಂದೆ. ಟೀಚರ್‌ಗೆ ಏನನ್ನಿಸಿತೋ, "ಆಯ್ತು ಕುಳಿತುಕೋ" ಅಂತ ಪಾಠ ಶುರು ಮಾಡಿದರು. ಮತ್ತೆ ನಾನು ಮುಂದಿನ ತರಗತಿಗೆ ಅಂದರೆ ಹೈಸ್ಕೂಲ್‌ಗೆ ಹೋದಾಗಲೇ ಗೊತ್ತಾದದ್ದು ಫಾರಿನ್ ಅಂದರೆ ಒಂದು ದೇಶದ ಹೆಸರಲ್ಲ, ಅದು ಹೊರದೇಶ ಅಂತ. ಆದರೆ ಅದನ್ನು ಟೀಚರ್ ಅವತ್ತೇ ಅರ್ಥಮಾಡಿಸಬಹುದಿತ್ತು. ಯಾಕೆ ಅವರು ಹೇಳಿಕೊಡಲಿಲ್ಲವೋ ಇವತ್ತಿಗೂ ಅರ್ಥವಾಗುತ್ತಿಲ್ಲ.

ಕಾಲೇಜಿಗೆ ಹೋಗುವ ಪಕ್ಕದ್ಮನೆ ಅಕ್ಕ ಒಮ್ಮೆ ಅವಳ ಗೆಳತಿಯರ ಜೊತೆಗೆ ನನ್ನನ್ನ ಪರಿಚಯಿಸುತ್ತಾ ಇವಳು ನನ್ನ ನೇಬರ್ ಅಂತ ಅಂದಿದ್ದಕ್ಕೆ ನಂಗೆ ವಿಪರೀತ ಕೋಪ ಬಂದಿತ್ತು. ಯಾಕೆಂದರೆ ನನಗೆ ಲೇಬರ್ ಮತ್ತು ನೇಬರ್ ಇವುಗಳ ಅರ್ಥ ವ್ಯತ್ಯಾಸ ಗೊತ್ತಿರಲಿಲ್ಲ. ನೇಬರ್ ಅಂದ್ರೆ ಲೇಬರ್ ಅಂತಾನೆ ತಿಳಿದುಕೊಂಡಿದ್ದೆ. ನನ್ನ ಕೋಪಕ್ಕೆ ಕಾರಣ ತಿಳಿದು ವಿಕೋಪಕ್ಕೆ ಹೋಗದ ಹಾಗೆ ಸಮಾಧಾನಿಸಿ ಪದದ ಅರ್ಥ ಹೇಳಿಕೊಟ್ಟ ಮೇಲೆ ಕೊಂಚಮಟ್ಟಿಗೆ ನಿರಾಳ ಆದರೂ ಅಂದಿನಿಂದ ಇಂಗ್ಲಿಷ್ ಅಂದ್ರೆ ಏನೋ ಅವ್ಯಕ್ತ ಭಯ. ಈಗ ಶಾಲಾ ಕಾಲೇಜು ವಿದ್ಯಾಭ್ಯಾಸ ಮುಗಿದು ಇಂಗ್ಲಿಷಿನಲ್ಲೇ ಪರೀಕ್ಷೆ ಬರೆದು ಇಂಗ್ಲಿಷ್ ಮೀಡಿಯಮ್ ಮಕ್ಕಳಿಗಿಂತ ಹೆಚ್ಚು ಅಂಕ ತೆಗೆದು ಪಾಸಾಗಿ ಮಾತನಾಡುವಷ್ಟರಮಟ್ಟಿಗೆ ಆ ಭಾಷೆಯ ಮೇಲೆ ಹಿಡಿತ ಸಿಕ್ಕರೂ ಮಾತನಾಡಲೊಂಥರಾ ಥರ. ಇಂಗ್ಲಿಷ್ ಮೋಹ ಅಂಟಿಸಿಕೊಂಡ ಮಿತ್ರರು ಸಿಕ್ಕಾಗ ಮೆಲ್ಲಗೆ ನುಣುಚಿಕೊಂಡು ಆದಷ್ಟೂ ದೂರವೇ ಉಳಿದುಬಿಡುತ್ತೇನೆ. ಈಗ ಮೊದಲಿನಂತಲ್ಲ, ತೊದಲು ನುಡಿಯುವ ಎಳೆಯ ಮಕ್ಕಳೂ ಕನ್ನಡಕ್ಕಿಂತ ಸಲೀಸಾಗಿ ಇಂಗ್ಲಿಷನ್ನೇ ಬಳಸುವಷ್ಟರಮಟ್ಟಿಗೆ ಹವೆ ಬದಲಾಗಿಬಿಟ್ಟಿದೆ. ನಾನು ಅಭ್ಯಾಸ ದೋಷದಿಂದ ಅಚ್ಚ ಕನ್ನಡ ಪದ ಬಳಸಿದರೆ ಅವುಗಳು ಕೊಂಚ ಕನ್ಫ್ಯೂಸ್ ಮಾಡಿಕೊಂಡು ನನ್ನನ್ನು ಎವೆಯಿಕ್ಕದೆ ಮಿಕಿ ಮಿಕಿ ನೋಡುವಾಗ... ನಾನೋ ಕನ್ನಡ ಕನ್ನಡ ಆಹಾ ! ಸವಿಗನ್ನಡ. ಕನ್ನಡವೇ ಸತ್ಯ. ಕನ್ನಡವೇ ನಿತ್ಯ ಅಂತ ಸಣ್ಣದಾಗಿ ಗುನುಗಿಕೊಳ್ಳುತ್ತಲೇ ಇರುತ್ತೇನೆ.

**ಸ್ಮಿತಾ ಅಮೃತರಾಜ್**
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು, ಕೊಡಗು – ೫೭೪ ೨೩೪

# ಕಿಣ್ವಗಳು ಮತ್ತು ಅವುಗಳ ಉಪಯೋಗ

ಜೀವಿಗಳು ಹುಟ್ಟಲು, ಹುಟ್ಟು ಸಾವಿನ ನಡುವಿನ ಜೈವಿಕ ಕ್ರಿಯೆಗಳು ನಡೆಯಲು ಕಿಣ್ವಗಳೆಂಬ ಪ್ರೋಟೀನು ಕಣಗಳು ಬೇಕು. ಬನ್ನಿ, ಕಿಣ್ವಗಳ ಬಗ್ಗೆ ತಿಳಿಯೋಣ.

ಜೀವಿಗಳ ದೇಹವು ಜೈವಿಕ ಚಟುವಟಿಕೆಗಳ ಆಗರವಾಗಿದೆ. ಜೀವಿಗಳಲ್ಲಿ ನಿರಂತರವಾಗಿ ಉಸಿರಾಟ, ಜೀರ್ಣಕ್ರಿಯೆ, ವಿಸರ್ಜನೆ ಮೊದಲಾದ ಜೈವಿಕ ಕ್ರಿಯೆಗಳು ನಡೆಯುತ್ತಿರುತ್ತವೆ. ಈ ಜೀವರಾಸಾಯನಿಕ ಕ್ರಿಯೆಗಳನ್ನು ಚಯಾಪಚಯ ಕ್ರಿಯೆಗಳೆಂದು ಕರೆಯುತ್ತಾರೆ. ಈ ಕ್ರಿಯೆಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದು, ಅವುಗಳೆಂದರೆ ಸಣ್ಣ ಕಣಗಳಿಂದ ದೊಡ್ಡ ಕಣಗಳ ರಚನೆ ಹಾಗೂ ದೊಡ್ಡ ಕಣಗಳು ಸಣ್ಣ ಕಣಗಳಾಗಿ ಒಡೆಯುವಿಕೆ. ಈ ಎಲ್ಲಾ ಜೈವಿಕ ಕ್ರಿಯೆಗಳು ಸರಾಗವಾಗಿ ನಡೆಯಲು ಕಿಣ್ವಗಳು ಮುಖ್ಯ ಪಾತ್ರವಹಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಸೂಕ್ಷ್ಮಾಣು ಜೀವಿಗಳಾದ ದಂಡಾಣು ಹಾಗೂ ಶಿಲೀಂಧ್ರಗಳಿಂದ ಪಡೆದ ಕುಲಾಂತರಿ ಕಿಣ್ವಗಳನ್ನು ವಿವಿಧ ಉದ್ದೇಶಗಳಿಗಾಗಿ ವ್ಯಾಪಕವಾಗಿ ಬಳಸಲಾಗುತ್ತಿದೆ.

ಕುಲಾಂತರಿ ಕಿಣ್ವಗಳನ್ನು ಪಡೆಯಲು, ನಮಗೆ ಬೇಕಾದಂತಹ ಕಿಣ್ವವನ್ನು ಸ್ರವಿಸುವ ಬೇರೆ ಜೀವಿಗಳ ಆನುವಂಶಿಕ ಅಂಶವನ್ನು ಕುಲಾಂತರಿ ತಂತ್ರಜ್ಞಾನದ ಮೂಲಕ ಸೂಕ್ಷ್ಮಾಣು ಜೀವಿಗಳ ಆನುವಂಶಿಕ ಅಂಶದೊಳಗೆ ಸೇರಿಸಲಾಗುತ್ತದೆ. ಈ ಕಿಣ್ವಗಳನ್ನು ಪಡೆಯಲು ಕೈಗಾರಿಕಾ ಶ್ರೇಣಿಯ ಹುದುಗುಪಾತ್ರೆಗಳಲ್ಲಿ ಸೂಕ್ಷ್ಮಾಣು ಜೀವಿಗಳನ್ನು ಸೂಕ್ತವಾದ ಪರಿಸ್ಥಿತಿಯಲ್ಲಿ ಬೆಳೆಸಿ, ಕಿಣ್ವವನ್ನು ಸೂಕ್ಷ್ಮಾಣುಜೀವಿಯು ಸ್ರವಿಸುವಂತೆ ಮಾಡಿ ಅವುಗಳನ್ನು ಸಂಸ್ಕರಿಸಲಾಗುತ್ತದೆ. ಈ ರೀತಿ ಸಂಸ್ಕರಿಸಿದ ಕಿಣ್ವಗಳನ್ನು ಮಾರುಕಟ್ಟೆಗೆ ಬಿಡುತ್ತಾರೆ.

ಸೂಕ್ಷ್ಮಾಣು ಜೀವಿಗಳು ತಾವಾಗಿ ಸ್ರವಿಸುವ ಕಿಣ್ವಗಳನ್ನು ಸಹ ಸಂಸ್ಕರಿಸಿ ಉಪಯೋಗಿಸುತ್ತಾರೆ. ಈ ಕಿಣ್ವಗಳನ್ನು ಪಡೆಯಲು ಸಹ ಸೂಕ್ಷ್ಮಾಣು ಜೀವಿಗಳನ್ನು ಹುದುಗುಪಾತ್ರೆಗಳಲ್ಲಿ ಬೆಳೆಸಿ ನಮಗೆ ಬೇಕಾದಂತಹ ಕಿಣ್ವವನ್ನು ಸೂಕ್ಷ್ಮಾಣು ಜೀವಿಯು ಸ್ರವಿಸುವಂತೆ ಮಾಡಲಾಗುತ್ತದೆ. ಈ ಸಂಸ್ಕರಿತ ಕಿಣ್ವಗಳನ್ನು ಮಾರ್ಜಕಗಳಲ್ಲಿ, ಚರ್ಮವನ್ನು ಹದಗೊಳಿಸಲು, ರೋಗಗಳ ಚಿಕಿತ್ಸೆಯಲ್ಲಿ, ಟೀಯನ್ನು ಹದಗೊಳಿಸಲು, ರೋಗಗಳನ್ನು ಪತ್ತೆಹಚ್ಚಲು ಜೈವಿಕ-ಸಂವೇದಕಗಳಲ್ಲಿ, ಕಾಗದವನ್ನು ಹದಗೊಳಿಸಲು, ಆಹಾರದಲ್ಲಿನ ಎಣ್ಣೆ ಅಂಶವನ್ನು ತೆಗೆಯಲು, ಮುಂತಾದ ಉದ್ದೇಶಗಳಿಗಾಗಿ ಬಳಸುತ್ತಾರೆ. ಅಥವಾ, ಕಿಣ್ವಗಳನ್ನು ಸಂಸ್ಕರಿಸದೆಯೇ ಸೂಕ್ಷ್ಮಾಣು ಜೀವಿಗಳು ನಮಗೆ ಬೇಕಾದ ಮಾಧ್ಯಮದಲ್ಲಿ ಅಥವಾ ಜಾಗದಲ್ಲಿ ಬೆಳೆಯುವಂತೆ ಮಾಡಿ ಅವುಗಳಿಂದ ಒಸರುವ ಕಿಣ್ವಗಳಿಂದ ನಮ್ಮ ಉದ್ದೇಶಗಳು ಪೂರ್ಣಗೊಳ್ಳುವಂತೆ ಮಾಡಲಾಗುತ್ತದೆ. ಉದಾಹರಣೆ : ವೈನ್ ತಯಾರಿಕೆಯಲ್ಲಿ ಯೀಸ್ಟುಗಳ ಉಪಯೋಗ, ಪರಿಸರ-ಮಾಲಿನ್ಯ ನಿಯಂತ್ರಣದಲ್ಲಿ ದಂಡಾಣುಗಳು ಹಾಗೂ ಜೈವಿಕ- ಸಂವೇದಕಗಳಲ್ಲಿ ಸೂಕ್ಷ್ಮಾಣು ಜೀವಿಗಳ ಉಪಯೋಗ.

ಡಾ॥ ರಾಮಲಿಂಗಪ್ಪ ಮತ್ತು
ವಿನಯ್ ಕುಮಾರ್ ಪಿ. ಜೆ.

**ಕಿಣ್ವಗಳ ಇತಿಹಾಸ**

ಕಿಣ್ವಗಳ ಉಪಯೋಗವು ಪ್ರಾಚೀನಕಾಲದಿಂದಲೂ ನಡೆಯುತ್ತಾ ಬಂದಿದೆ. ದೋಸೆಯ ಉಬ್ಬುವಿಕೆ, ಹಾಲು ಮೊಸರಾಗುವಿಕೆ, ಸಕ್ಕರೆ ಸಾರಾಯಿಯಾಗುವ ಪ್ರಕ್ರಿಯೆ ಈ ಎಲ್ಲಾ ಕ್ರಿಯೆಗಳು ನಡೆಯಲು ಕಿಣ್ವಗಳು ಬೇಕು. ಹಾಗೆಯೇ ವಿನೆಗರನ್ನು ತಯಾರಿಸಲು ಸಹ ಸಾವಿರಾರು ವರ್ಷಗಳಿಂದ ಕಿಣ್ವಗಳನ್ನು ಉಪಯೋಗಿಸುತ್ತಿದ್ದರು. ಈ ಎಲ್ಲಾ ಪ್ರಕ್ರಿಯೆಗಳು ಕಿಣ್ವಗಳ ಬಗ್ಗೆ ತಿಳುವಳಿಕೆಯಿಲ್ಲದೆ ನಡೆಯುವ ಕ್ರಿಯೆಗಳಾಗಿದ್ದವು.

ಕಿಣ್ವಗಳ ಬಗ್ಗೆ ಸುಳಿವು ದೊರೆತದ್ದು ೧೮೩೩ರಲ್ಲಿ ವಿಜ್ಞಾನಿಗಳು ಸಕ್ಕರೆಯನ್ನು ಒಡೆಯುವ ಡಯಾಸ್ಟೇಸ್ ಎಂಬ ಕಿಣ್ವವನ್ನು ಭಾಗಶಃ ಸಂಸ್ಕರಿಸಿದಾಗ. ಈಗ ಅದನ್ನು ಅಮೈಲೇಸ್ ಎಂದು ಕರೆಯಲಾಗುತ್ತದೆ. ಈ ರೀತಿ ಸಂಸ್ಕರಿಸಿದ ಕಿಣ್ವಗಳನ್ನು ಫರ್ಮೆಂಟುಗಳೆಂದು ಕರೆಯಲಾಗುತ್ತಿತ್ತು. ಈಗ ಅವುಗಳನ್ನು "ಎಂಜೈಮು" ಗಳೆಂದು ಕರೆಯಲಾಗುತ್ತದೆ. ಎಂಜೈಮುಗಳೆಂಬ ಹೆಸರನ್ನು ಮೊದಲು ಸೂಚಿಸಿದವನು ಕುಃನೆ ಎಂಬ ವಿಜ್ಞಾನಿ (೧೮೭೮ರಲ್ಲಿ). ಗ್ರೀಕ್ ಭಾಷೆಯಲ್ಲಿ ಎಂಜೈಮುಗಳೆಂದರೆ ಯೀಸ್ಟಿನ ಒಳಗಿರುವ ಪದಾರ್ಥ ಎಂದರ್ಥ. ಮುಂದಿನ ಕೆಲವು ವರ್ಷಗಳಲ್ಲಿ ಹಲವಾರು ಮೂಲಗಳಿಂದ ಕಿಣ್ವಗಳನ್ನು ಸಂಸ್ಕರಿಸಲಾಗುತ್ತದೆ. ಹೀಗೆ ಸಂಸ್ಕರಿತ ಕಿಣ್ವಗಳು ದೊರೆತ ಮೇಲೆ ಅವುಗಳ ಸ್ವರೂಪ ಮೊದಲಾದ ಗುಣಲಕ್ಷಣಗಳನ್ನು ನಿರ್ಧರಿಸಲಾಗುತ್ತದೆ.

**ಕಿಣ್ವಗಳ ಸ್ವರೂಪ**

ಕಿಣ್ವಗಳನ್ನು ಜೈವಿಕ ವೇಗೋತ್ಕರ್ಷಕಗಳೆಂದು ಕರೆಯುತ್ತಾರೆ. ಕಿಣ್ವಗಳು ಜೀವರಾಸಾಯನಿಕ ಕ್ರಿಯೆಗಳ ವೇಗವನ್ನು ಹೆಚ್ಚಿಸಿ ಅವುಗಳು ಸರಾಗವಾಗಿ ನಡೆಯಲು ಅನುವುಮಾಡಿಕೊಡುತ್ತವೆ ಹಾಗೂ ಈ ಕ್ರಿಯೆಯಲ್ಲಿ ಕಿಣ್ವಗಳು ಯಾವುದೇ ಬದಲಾವಣೆಯನ್ನು ಹೊಂದುವುದಿಲ್ಲ.

ಕಿಣ್ವಗಳು ಹಾರ್ಮೋನುಗಳಿಗಿಂತ ಭಿನ್ನವಾಗಿವೆ. ಹಾರ್ಮೋನುಗಳು ಹಾಗೂ ಕಿಣ್ವಗಳು ಎಲ್ಲಾ ಜೀವಿಗಳಿಂದಲೂ ಸ್ರವಿಸಲ್ಪಡುತ್ತವೆ. ಹಾರ್ಮೋನುಗಳು ಅಮೈನೋ ಆಮ್ಲಗಳಿಂದಾದ ಮಾನೋಅಮೈನ್‌ಗಳು, ಲಿಪಿಡ್ಡುಗಳು ಹಾಗೂ ಫಾಸ್ಫೋ-ಲಿಪಿಡ್ಡುಗಳಿಂದ ಬಂದಂತಹ ಹಾರ್ಮೋನುಗಳು, ಪ್ರೋಟೀನು ಕಣಗಳು ಅಥವಾ ಸಣ್ಣ-ಪೆಪ್ಟೈಡುಗಳಾಗಿದ್ದು ಮುಖ್ಯವಾಗಿ ಬಹುಕೋಶಜೀವಿಗಳಲ್ಲಿ, ದೇಹದ ಕೆಲವೊಂದು ಗ್ರಂಥಿಗಳಿಂದ ಮಾತ್ರ ಸ್ರವಿಸಲ್ಪಟ್ಟು, ದೇಹದ ನಿರ್ದಿಷ್ಟ ಭಾಗಗಳಲ್ಲಿ ತಮ್ಮ ಪ್ರಭಾವವನ್ನು ಬೀರುತ್ತವೆ. ಕಿಣ್ವಗಳು ಪೂರ್ಣ ಪ್ರಮಾಣದ ಪ್ರೋಟೀನುಗಳಾಗಿದ್ದು ಜೀವಿಯ ಎಲ್ಲಾ ಜೀವಕೋಶಗಳಿಂದಲೂ ಸ್ರವಿಸಲ್ಪಡುತ್ತವೆ. ಹಾರ್ಮೋನುಗಳು ಜೀವಿಗಳ ಭಾವನೆಗಳನ್ನು ಹಾಗೂ ಜೈವಿಕ ಕ್ರಿಯೆಗಳನ್ನು ನಿಯಂತ್ರಿಸಿದರೆ, ಕಿಣ್ವಗಳು ಕೇವಲ ಜೈವಿಕ ಕ್ರಿಯೆಗಳನ್ನು ನಿಯಂತ್ರಿಸುತ್ತವೆ.

ಕಿಣ್ವಗಳು ಮುಖ್ಯವಾಗಿ ಪ್ರೋಟೀನುಗಳಿಂದ ಮಾಡಲ್ಪಟ್ಟಿವೆ. ಕೆಲವೊಂದನ್ನು ಹೊರತುಪಡಿಸಿ (ರೈಬೋಜೈಮುಗಳು) ಎಲ್ಲಾ ಕಿಣ್ವಗಳನ್ನು ಪ್ರೋಟೀನುಗಳೆಂದು ಕರೆಯಬಹುದು. ಪ್ರೋಟೀನುಗಳ ಜೊತೆಗೆ ಕೆಲವೊಂದು ಕಿಣ್ವಗಳು ಸಹ ಅಂಶಗಳನ್ನು ಒಳಗೊಂಡಿರುತ್ತವೆ. ಸಹ-ಅಂಶಗಳಿಲ್ಲದೆ ಈ ಕಿಣ್ವಗಳು ಚಟುವಟಿಕೆಯನ್ನು ತೋರಿಸುವುದಿಲ್ಲ.



ಸಹ–ಅಂಶಗಳು ಜೈವಿಕ ಅಣುಗಳಾಗಿರಬಹುದು ಅಥವಾ ಲೋಹದ ಅಯಾನುಗಳಾಗಿರಬಹುದು. ಸಹ–ಅಂಶಗಳು ಜೈವಿಕ ಅಣುಗಳಾಗಿದ್ದಲ್ಲಿ ಅವುಗಳನ್ನು ಸಹ–ಕಿಣ್ವಗಳೆಂದು ಕರೆಯುತ್ತಾರೆ. ಈ ಸಹ–ಅಂಶ ಹಾಗೂ ಪ್ರೋಟೀನು ಭಾಗವು ಸೇರಿ ಪೂರ್ಣಪ್ರಮಾಣದ ಕಿಣ್ವವಾಗುತ್ತದೆ. ಪ್ರೋಟೀನು ಭಾಗವನ್ನು ಅಪೋ–ಕಿಣ್ವ ಎಂದು ಕರೆಯುತ್ತಾರೆ. ಈ ಪೂರ್ಣಪ್ರಮಾಣದ ಕಿಣ್ವವು ಚಟುವಟಿಕೆಯನ್ನು ತೋರಿಸುತ್ತದೆ. ಕೆಲವೊಂದು ಸಲ ಸಹ–ಅಂಶವು ಪ್ರೋಟೀನುಗಳೊಂದಿಗೆ ಗಾಢವಾಗಿ ಬಂಧಿಸಲ್ಪಟ್ಟು, ಕಿಣ್ವಕ್ಕೆ ಯಾವುದೇ ಹಾನಿಯನ್ನು ಮಾಡದೆ ಕಿಣ್ವದಿಂದ ಅದನ್ನು ಬೇರ್ಪಡಿಸಲು ಅಸಾಧ್ಯವಾಗುತ್ತದೆ, ಆಗ ಅವುಗಳನ್ನು ಪ್ರೋಸ್ತೆಟಿಕ್ ಗ್ರೂಪುಗಳೆಂದು ಕರೆಯುವರು.

### ಕಿಣ್ವಗಳ ಕಾರ್ಯವಿಧಾನ

ಕಿಣ್ವಗಳ ಕಾರ್ಯವಿಧಾನದ ಬಗ್ಗೆ ಬೇರೆ ಬೇರೆ ವಿಜ್ಞಾನಿಗಳು ಬೇರೆ ಬೇರೆ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಾರೆ. ಆದರೆ ಈಗ ಒಪ್ಪಲ್ಪಟ್ಟ ಸಿದ್ಧಾಂತವೆಂದರೆ ಕೋಶ್‌ಲ್ಯಾಂಡನ ಪ್ರೇರೇಪಿತ ಚಟುವಟಿಕೆ ಕೇಂದ್ರದ ಸಿದ್ಧಾಂತ. ಈ ಸಿದ್ಧಾಂತದ ಪ್ರಕಾರ ಕಿಣ್ವಗಳು ಪ್ರತಿಕ್ರಿಯಾಕಾರಕದೊಡನೆ ಹೊಂದಲ್ಪಡುವ ಚಟುವಟಿಕೆ ಕೇಂದ್ರಗಳನ್ನು ಒಳಗೊಂಡಿರುತ್ತವೆ. ಈ ಚಟುವಟಿಕೆ ಕೇಂದ್ರಗಳು ಕೈಗವಸಿನಂತೆ ಬಾಗುವಂತಿದ್ದು ಸರಿಯಾದ ಪ್ರತಿಕ್ರಿಯಾಕಾರಕ ಬಂದೊಡನೆ ಅದರೊಂದಿಗೆ ಹೊಂದಿಸಲ್ಪಟ್ಟು ಚಟುವಟಿಕೆಯನ್ನು ತೋರಿಸುತ್ತವೆ.

ಕಿಣ್ವಗಳು ಪ್ರತಿಕ್ರಿಯಾಕಾರಕಗಳು ಉತ್ಪನ್ನಗಳಾಗಿ ಬದಲಾಗಲು ಬೇಕಾದಂತಹ ಪ್ರಚೋದಕ ಶಕ್ತಿಯನ್ನು ಕಡಿಮೆಗೊಳಿಸಿ ಜೀವರಾಸಾಯನಿಕ ಕ್ರಿಯೆಗಳ ವೇಗವನ್ನು ಹೆಚ್ಚಿಸುತ್ತವೆ.

### ಮಾನವ ದೇಹದಲ್ಲಿ ಕಿಣ್ವಗಳು

ಕೆಲವೊಂದು ವೈರಸ್‌ಗಳನ್ನು ಹೊರತುಪಡಿಸಿ, ಎಲ್ಲಾ ಜೀವಿಗಳ ಜೀವಕೋಶಗಳಲ್ಲಿ ಇರುವ ಹಾಗೂ ಜೀವಕೋಶಗಳ ಚಟುವಟಿಕೆಗಳನ್ನು ನಿಯಂತ್ರಿಸುವ ಡಿ.ಎನ್.ಎ. ಎಂಬ ಆನುವಂಶಿಕ ಅಂಶದಿಂದ ಕಿಣ್ವಗಳು ನಕಲು (ಟ್ರಾನ್ಸ್‌ಕ್ರಿಪ್ಶನ್) ಮತ್ತು ತರ್ಜುಮೆ (ಟ್ರಾನ್ಸ್‌ಲೇಶನ್) ಎಂಬ ಎರಡು ಹಂತದ ಕ್ರಿಯೆಗಳಿಂದ ನಿರ್ಮಾಣಗೊಳ್ಳುತ್ತವೆ ಹಾಗೂ ಈ ಡಿ.ಎನ್.ಎ. ಮರುನಿರ್ಮಾಣಗೊಳ್ಳಲು ಸಹ ಕಿಣ್ವಗಳು ಬೇಕು. ಹೀಗೆ ನಿರ್ಮಾಣಗೊಂಡ ಕಿಣ್ವಗಳು ಕೋಶರಸ, ವಿವಿಧ ಕಣದಂಗಗಳು ಹಾಗೂ ಜೀವಕೋಶದ ಸ್ರವಿಕೆಗಳು ಅಥವಾ ದೇಹದ ರಸಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಮಾನವ ದೇಹದಲ್ಲಿ ಸುಮಾರು ಮೂರು ಸಾವಿರ ಬಗೆಯ ಕಿಣ್ವಗಳನ್ನು ಗುರುತಿಸಲಾಗಿದೆ. ಈ ಕಿಣ್ವಗಳನ್ನು ಸ್ಥೂಲವಾಗಿ ಎರಡು ಬಗೆಗಳಾಗಿ ವಿಂಗಡಿಸಬಹುದು. ಅವುಗಳೆಂದರೆ ದೇಹದ ಎಲ್ಲಾ ಜೀವಕೋಶಗಳಲ್ಲಿ, ಸಾಮಾನ್ಯ ಆರೋಗ್ಯಕರ ಪರಿಸ್ಥಿತಿಗಳಲ್ಲಿ ಇರುವಂತಹ ಕಿಣ್ವಗಳು ಅಥವಾ ಹೌಸ್‌ಕೀಪಿಂಗ್ ಕಿಣ್ವಗಳು. ಉದಾಹರಣೆ : ಗ್ಲೂಕೋಸ್ ೬–ಫಾಸ್ಫೇಟ್ ಡೀಹೈಡ್ರೋಜಿನೇಸ್ (ಈ ಕಿಣ್ವವು ದೇಹದ ಎಲ್ಲ ಜೀವಕೋಶಗಳಲ್ಲಿ ಸ್ರವಿಸಲ್ಪಟ್ಟು ಪೆಂಟೋಸ್ ಫಾಸ್ಫೇಟ್‌ನ ಪಥದಲ್ಲಿ ಇಂಗಾಲದ ಅಂಶವು ಹರಿಯಲು ನೆರವಾಗುತ್ತದೆ); ಹಾಗೂ ಕೆಲವೊಂದು ಜೀವಕೋಶಗಳಲ್ಲಿ ಮಾತ್ರ ಸ್ರವಿಸಲ್ಪಡುವ ಕಿಣ್ವಗಳು. ಉದಾಹರಣೆ : ಟ್ರೋಪೋಮೈಸಿನ್. ಈ ಕಿಣ್ವವು ಮಾಂಸಖಂಡಗಳಲ್ಲಿನ ಜೀವಕೋಶಗಳಲ್ಲಿ ಸ್ರವಿಸಲ್ಪಟ್ಟು ಅವುಗಳ ಚಲನೆಯಲ್ಲಿ ನೆರವಾಗುತ್ತದೆ.

ಚಟುವಟಿಕೆಯ ಆಧಾರದ ಮೇಲೆ ಕಿಣ್ವಗಳನ್ನು ಜೀರ್ಣಕಾರಕ ಕಿಣ್ವಗಳು ಹಾಗೂ ಮೆಟಬಾಲಿಕ್ ಕಿಣ್ವಗಳೆಂಬ ಎರಡು ಬಗೆಗಳಾಗಿ ವಿಂಗಡಿಸಲಾಗಿದೆ. ಜೀರ್ಣಕಾರಕ ಕಿಣ್ವಗಳು ಆಹಾರವನ್ನು ಜೀರ್ಣಿಸಿಕೊಳ್ಳುವಲ್ಲಿ ಸಹಕಾರಿಯಾಗಿದ್ದರೆ ಮೆಟಬಾಲಿಕ್ ಕಿಣ್ವಗಳು ಜೀವಕೋಶದ ಒಳಗಿನ ರಾಸಾಯನಿಕ ಕ್ರಿಯೆಗಳನ್ನು ನಿಯಂತ್ರಿಸುತ್ತವೆ.

ಜೀರ್ಣಕಾರಕ ಕಿಣ್ವಗಳಿಗೆ ಉದಾಹರಣೆ : ಕಾರ್ಬೋಹೈಡ್ರೇಸಸ್; ಶರ್ಕರಪಿಷ್ಟಗಳನ್ನು ಜೀರ್ಣಿಸಿಕೊಳ್ಳುವ ಕಿಣ್ವಗಳ ಸಮೂಹ (ಉದಾಹರಣೆ : ಅಮೈಲೇಸ್, ಪ್ಯಾಂಕ್ರಿಯಾಟಿಕ್ ಅಮೈಲೇಸ್, ಸುಕ್ರೇಸ್, ಮಾಲ್ಟೇಸ್ ಮತ್ತು ಲ್ಯಾಕ್ಟೇಸ್), ಲೈಪೇಸಸ್; ಎಣ್ಣೆಯ ಅಂಶಗಳನ್ನು ಜೀರ್ಣಿಸಿಕೊಳ್ಳುವ ಕಿಣ್ವಗಳ ಸಮೂಹ (ಉದಾಹರಣೆ : ಪ್ಯಾಂಕ್ರಿಯಾಟಿಕ್ ಲೈಪೇಸ್) ಹಾಗೂ ಪ್ರೋಟಿಯೇಸಸ್; ಪ್ರೋಟೀನುಗಳನ್ನು ಜೀರ್ಣಿಸಿಕೊಳ್ಳುವ ಕಿಣ್ವಗಳ ಸಮೂಹ (ಉದಾಹರಣೆ : ಪೆಪ್ಸಿನ್, ಕೀಮೋಟ್ರಿಪ್ಸಿನ್, ಟ್ರಿಪ್ಸಿನ್ ಮತ್ತು ಪೆಪ್ಟಿಡೇಸಸ್), ಈ ಎಲ್ಲಾ ಕಿಣ್ವಗಳು ಜೀರ್ಣಾಂಗ ವ್ಯೂಹದಿಂದ ಸ್ರವಿಸಲ್ಪಡುತ್ತವೆ. ಈ ಕಿಣ್ವಗಳ ಜೊತೆಗೆ ಲೈಸೋಜೈಮ್ ಎಂಬ ಕಿಣ್ವವನ್ನು ಸಲೈವರಿ ಗ್ರಂಥಿಗಳು ಸ್ರವಿಸುತ್ತವೆ, ಈ ಕಿಣ್ವವು ಆಹಾರದೊಂದಿಗೆ ಪ್ರವೇಶ ಮಾಡುವ ಹಾನಿಕಾರಕ ಬ್ಯಾಕ್ಟೀರಿಯಗಳನ್ನು ನಾಶಮಾಡಲು ಸಹಕಾರಿಯಾಗಿದೆ.

ಮೆಟಬಾಲಿಕ್ ಕಿಣ್ವಗಳಿಗೆ ಉದಾಹರಣೆ : ಹೆಕ್ಸೋಕೈನೇಸ್, ಫಾಸ್ಫೋಹೆಕ್ಸೋಸ್ ಐಸೋಮರೇಸ್, ಫಾಸ್ಫೋಫ್ರಕ್ಟೋಕೈನೇಸ್, ಆಲ್ಡೋಲೇಸ್, ಟ್ರೈಯೋಸ್ ಫಾಸ್ಫೇಟ್ ಐಸೋಮರೇಸ್. ಈ ಕಿಣ್ವಗಳು ಜೀರ್ಣಿಸಿಕೊಂಡ ಆಹಾರದಿಂದ ಜೀವಕೋಶಗಳಲ್ಲಿ ಶಕ್ತಿ ಬಿಡುಗಡೆಗೊಳ್ಳಲು ಸಹಕಾರಿಯಾಗಿವೆ. ಕಿಣ್ವಗಳು ನಿರಂತರವಾಗಿ ಮನುಷ್ಯನ ಚಟುವಟಿಕೆಗಳು ನಡೆಯಲು ಸಹಕಾರಿಯಾಗಿವೆ. ಹುಟ್ಟಿನಿಂದ ಸಾವಿನವರೆಗೂ ಕಿಣ್ವಗಳು ತಮ್ಮ ಚಟುವಟಿಕೆಯನ್ನು ತೋರಿಸುತ್ತಿರುತ್ತವೆ. ಸಾವಿನ ನಂತರವೂ ಲೈಸೋಜೈಮ್‌ಗಳೆಂಬ ಕಿಣ್ವಗಳು ದೇಹವು ಕೊಳೆಯಲು ಸಹಕಾರಿಯಾಗಿವೆ. ಒಟ್ಟಿನಲ್ಲಿ ಕಿಣ್ವಗಳಿಲ್ಲದೆ ಬದುಕಿಲ್ಲ, ಬದುಕಿಲ್ಲದೆ ಕಿಣ್ವಗಳಿಲ್ಲ.

### ಕಿಣ್ವಗಳ ಉಪಯೋಗ




**ನವಕರ್ನಾಟಕ ಪ್ರಕಾಶನದ ಐದು ವೈಚಾರಿಕ ಕೃತಿಗಳ ಲೋಕಾರ್ಪಣೆ ಹಾಗೂ 'ನಂಬಿಕೆಗಳ ಆಸುಪಾಸು' ಎಂಬ ವಿಚಾರ ಸಂಕಿರಣ ಇತ್ತೀಚೆಗೆ ಮಂಗಳೂರು ವಿ. ವಿ. ಕಾಲೇಜಿನ ರವೀಂದ್ರ ಕಲಾ ಭವನದಲ್ಲಿ ಯಶಸ್ವಿಯಾಗಿ ನೆರವೇರಿದವು. ವಿ. ವಿ. ಕಾಲೇಜಿನ ಕನ್ನಡ ಸಂಘ – ನವಕರ್ನಾಟಕ ಪ್ರಕಾಶನದ ಜಂಟಿ ಆಶ್ರಯದಲ್ಲಿ ಆಯೋಜಿಸಿದ ಈ ಕಾರ್ಯಕ್ರಮದಲ್ಲಿ ಅಖಿಲ ಕರ್ನಾಟಕ ವಿಚಾರವಾದಿಗಳ ಸಂಘದ ಅಧ್ಯಕ್ಷ ಪ್ರೊ॥ ಎ. ಎಸ್. ನಟರಾಜ್ ವಿಚಾರ ಸಂಕಿರಣ ನಡೆಸಿಕೊಟ್ಟರು ಹಾಗೂ ರಾಷ್ಟ್ರೀಯ ಸೇವಾ ಯೋಜನಾ ಕೋಶದ ರಾಜ್ಯ ಸಂಪರ್ಕಾಧಿಕಾರಿ ಡಾ॥ ಗಣನಾಥ ಶೆಟ್ಟಿ ಎಕ್ಕಾರು ಕೃತಿಗಳ ಪರಿಚಯ ಮಾಡಿದರು. ಅಧ್ಯಕ್ಷತೆಯನ್ನು ವಿ. ವಿ. ಕಾಲೇಜಿನ ಎಂಬಿಎ ವಿಭಾಗದ ಸಂಯೋಜಕ ಉದಯಕುಮಾರ್ ಇರ್ವತ್ತೂರು ವಹಿಸಿದ್ದರು. ನವಕರ್ನಾಟಕದ ಶ್ರೀ ಹರೀಶ್‌ಕುಮಾರ್ ಮತ್ತು ಕಾರ್ಯಕ್ರಮವನ್ನು ನಿರ್ವಹಿಸಿದ ಶ್ರೀ ಕಲ್ಲೂರು ನಾಗೇಶ್ ವೇದಿಕೆಯಲ್ಲಿ ಉಪಸ್ಥಿತರಿದ್ದರು.**

**ಔಷಧಿಗಳಾಗಿ ಕಿಣ್ವಗಳ ಉಪಯೋಗ :** ರೋಗಗಳ ಚಿಕಿತ್ಸೆಯಲ್ಲಿ ಕಿಣ್ವಗಳ ಉಪಯೋಗವು ಕಿಣ್ವಗಳ ಎರಡು ಮುಖ್ಯ ಗುಣಲಕ್ಷಣಗಳನ್ನು ಆಧರಿಸಿವೆ, ಅವುಗಳೆಂದರೆ ರೋಗಕಾರಕ ಅಂಶಗಳ ಕಡೆಗೆ ಕಿಣ್ವಗಳ ಆಕರ್ಷಣೆ, ಅವುಗಳ ನಿಖರತೆ ಮತ್ತು ಒಂದು ಕಿಣ್ವವು ಅನೇಕ ರೋಗಕಾರಕ ಅಂಶಗಳನ್ನು ವಿಷರಹಿತ ವಸ್ತುಗಳನ್ನಾಗಿ ಪರಿವರ್ತಿಸುವ ಸಾಮರ್ಥ್ಯವನ್ನು ಪಡೆದಿರುವುದು. ಔಷಧಿಗಳಾಗಿ ಕಿಣ್ವಗಳ ಉಪಯೋಗಕ್ಕೆ ೧೦೦ ವರ್ಷಗಳ ಇತಿಹಾಸವಿದೆ. ೧೦೦ ವರ್ಷಗಳ ಹಿಂದೆ ಜಾನ್ ಬಿಯರ್ಡ್ ಎಂಬ ಬ್ರಿಟಿಷ್ ಭ್ರೂಣಶಾಸ್ತ್ರಜ್ಞನು ಕಿಣ್ವಗಳನ್ನು ಉಪಯೋಗಿಸಿ ಕ್ಯಾನ್ಸರನ್ನು ಗುಣಪಡಿಸಲು ಪ್ರಯತ್ನಿಸುತ್ತಾನೆ. ಔಷಧಿಯಾಗಿ ಮೊದಲ ಕಿಣ್ವದ ಉಪಯೋಗವನ್ನು ಪ್ರತಿಪಾದಿಸಿದವನು ದುವೇಃ ಎಂಬ ವಿಜ್ಞಾನಿ (೧೯೬೦). ಹಾಗೆಯೇ ೧೯೮೭ರಲ್ಲಿ ಆಕ್ಟಿವೇಸ್‌ರಿ (ಆಲ್ಟಿಪ್ಲೇಸ್) ಎಂಬ ಮೊದಲ ಕುಲಾಂತರಿ ಕಿಣ್ವವನ್ನು ಎಫ್.ಡಿ.ಎ. (ಫುಡ್ ಅಂಡ್ ಡ್ರಗ್ ಅಡ್ಮಿನಿಸ್ಟ್ರೇಶನ್) ಅನುಮೋದಿಸಿತು. ಈ ಕಿಣ್ವವನ್ನು ಹೃದಯಾಘಾತದ ತೊಂದರೆಗಳಲ್ಲಿ ಕರೋನರಿ ರಕ್ತನಾಳಗಳನ್ನು ಶುದ್ಧೀಕರಿಸಲು ಉಪಯೋಗಿಸುತ್ತಾರೆ. ಈ ಕಿಣ್ವವು ಮಾರಾಟಗೊಂಡ ಎರಡನೇ ಕುಲಾಂತರಿ ಔಷಧಿಯಾಗಿದೆ. ಇನ್ಸುಲಿನ್ ಮೊದಲು ಮಾರಾಟಗೊಂಡ ಕುಲಾಂತರಿ ಔಷಧಿಯಾಗಿದೆ.

**ಸಾಂಕ್ರಾಮಿಕ ರೋಗಗಳಲ್ಲಿ ಕಿಣ್ವಗಳ ಉಪಯೋಗ :** ಲೈಸೋಜೈಮ್ ಕಿಣ್ವವನ್ನು ದಂಡಾಣುಗಳಿಂದ ಬರುವ ರೋಗಗಳನ್ನು ತಡೆಯಲು ಆಹಾರ ಹಾಗೂ ಮುಂತಾದ ಗ್ರಾಹಕ ಪದಾರ್ಥಗಳಲ್ಲಿ ವ್ಯಾಪಕವಾಗಿ ಬಳಸುತ್ತಾರೆ. ಈ ಕಿಣ್ವವು ದಂಡಾಣುಗಳ ಕೋಶಭಿತ್ತಿಯಲ್ಲಿರುವ ಶರ್ಕರಪಿಷ್ಟಗಳನ್ನು ಒಡೆದು ಅವುಗಳನ್ನು ನಾಶಪಡಿಸುತ್ತದೆ. ಕೈಟಿನೇಸ್ ಎಂಬ ಕಿಣ್ವವನ್ನು ಸಹ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಉಪಯೋಗಿಸುತ್ತಾರೆ. ಈ ಕಿಣ್ವವು ಶಿಲೀಂಧ್ರ, ಪ್ರೋಟೋಜೋವಾ ಹಾಗೂ ಲಾಡಿಹುಳುಗಳಿಂದ ಬರುವ ರೋಗಗಳನ್ನು ತಡೆಗಟ್ಟುವಲ್ಲಿ ಸಹಕಾರಿಯಾಗಿದೆ. ಈ ಕಿಣ್ವವು ಈ ಜೀವಿಗಳಲ್ಲಿರುವ ಕೈಟಿನ್ ಅಂಶವನ್ನು ಕರಗಿಸಿ ಅವುಗಳನ್ನು ನಾಶಪಡಿಸುತ್ತದೆ. ಬ್ಯಾಕ್ಟೀರಿಯೋಫೇಜ್‌ಗಳೆಂಬ ವೈರಸ್‌ಗಳಿಂದ ಪಡೆದ ಕಿಣ್ವಗಳನ್ನು ಸ್ಟ್ರೆಪ್ಟೋಕಾಕಸ್ ನ್ಯೂಮೋನಿಯಾ, ಬ್ಯಾಸಿಲಸ್ ಆಂತ್ರಾಸಸ್ ಮತ್ತು ಕ್ಲಾಸ್ಟ್ರಿಡಿಯಮ್ ಫರ್‌ಫ್ರಿಂಜೆನ್ಸ್‌ಗಳೆಂಬ ರೋಗಕಾರಕ ದಂಡಾಣುಗಳನ್ನು ನಾಶಪಡಿಸಲು ಉಪಯೋಗಿಸುತ್ತಾರೆ.

**ಜೀರ್ಣಕ್ರಿಯೆಯ ಸಮಸ್ಯೆಗಳಲ್ಲಿ ಕಿಣ್ವಗಳ ಉಪಯೋಗ :** ಜೀರ್ಣಕ್ರಿಯೆಯಲ್ಲಿ ಕಿಣ್ವಗಳು ತುಂಬಾ ಮುಖ್ಯ ಪಾತ್ರ ವಹಿಸುತ್ತವೆ. ಜೀರ್ಣಕ್ರಿಯೆಯ ಸಮಸ್ಯೆಗಳಲ್ಲಿ ಕೆಲವೊಂದು ಕಿಣ್ವಗಳನ್ನು ಆಹಾರದ ಜೊತೆಗೆ ಕೊಡಲಾಗುತ್ತದೆ. ಆಸ್ಪರ್ಜಿಲ್ಲಸ್ ಓರೈಜೇ ಹಾಗೂ ರೈಜೋಫಸ್ ಅರೈಜಸ್‌ಗಳೆಂಬ ಶಿಲೀಂಧ್ರಗಳಿಂದ ಪಡೆದ ಲೈಪೇಸ್ ಕಿಣ್ವಗಳನ್ನು, ಹಾಗೂ ಸಸ್ಯಜನ್ಯ ಕಿಣ್ವಗಳಾದ ಬ್ರೊಮೆಲೈನ್‌ಗಳೆಂಬ ಕಿಣ್ವಗಳನ್ನು, ಕ್ರಮವಾಗಿ ಎಣ್ಣೆಯ ಅಂಶ ಹಾಗೂ ಪ್ರೋಟೀನುಗಳ ಜೀರ್ಣಕ್ರಿಯೆ ಸಮಸ್ಯೆಯಲ್ಲಿ ಉಪಯೋಗಿಸುತ್ತಾರೆ. ಬ್ರೊಮೆಲೈನ್ ಕಿಣ್ವವು ಸಲ್ಫೈಡ್ರಿಲ್ ಗುಂಪುಗಳನ್ನೊಳಗೊಂಡ, ಅನಾನಸ್ ಹಣ್ಣು ಹಾಗೂ ಅದರ ಕಾಂಡದಿಂದ ಸಂಸ್ಕರಿಸಲ್ಪಟ್ಟ ಪ್ರೋಟೀನುಗಳನ್ನು ಜೀರ್ಣಿಸಿಕೊಳ್ಳುವ ಕಿಣ್ವಗಳ ಸಮೂಹದ ಸಾಧಾರಣ ಹೆಸರಾಗಿದೆ. ಈ ಕಿಣ್ವಗಳನ್ನು ಪರಂಗಿ ಹಣ್ಣಿನಿಂದ ಸಹ ಸಂಸ್ಕರಿಸಲಾಗುತ್ತದೆ.

ಲ್ಯಾಕ್ಟೋಸ್-ಇಂಟಾಲರೆನ್ಸ್ ಎಂಬ ಶರ್ಕರಪಿಷ್ಟ ಸಂಬಂಧೀ ಜೀರ್ಣಕ್ರಿಯೆ ಸಮಸ್ಯೆಯಲ್ಲಿ ಲ್ಯಾಕ್ಟೇಸ್ ಎಂಬ ಕಿಣ್ವವನ್ನು ಬಳಸುತ್ತಾರೆ. ಈ ಕಿಣ್ವವನ್ನು ಹಾಲಿನಲ್ಲಿರುವ ಲ್ಯಾಕ್ಟೋಸ್ ಅಂಶವನ್ನು ಮುಂಚಿತವಾಗಿ ಜಲೀಕರಣಗೊಳಿಸಿ, ಅದನ್ನು ನಿರ್ಮೂಲಿಸಲು ಉಪಯೋಗಿಸುತ್ತಾರೆ. ಹೀಗೆ ಲ್ಯಾಕ್ಟೋಸ್ ಅಂಶವನ್ನು ನಿರ್ಮೂಲಿಸಿದ ಹಾಲು ಈ ತೊಂದರೆ ಇರುವ ವ್ಯಕ್ತಿಗಳಲ್ಲಿ ಬಳಸಲು ಉಪಯುಕ್ತವಾಗಿದೆ. ಈ ವಿಧಾನದಲ್ಲಿ ಹಾಲಿನೊಂದಿಗೆ ಕಿಣ್ವವನ್ನು ಬೆರೆಸಿ ಸಂಸ್ಕರಿಸಬೇಕು. ಅಥವಾ ಈ ಕಿಣ್ವವನ್ನು ಮಾತ್ರೆಗಳ ರೂಪದಲ್ಲಿ ಹಾಲಿನೊಂದಿಗೆ ಕೊಡುತ್ತಾರೆ. ಈ ವಿಧಾನವು ಮೊದಲನೆಯದಕ್ಕಿಂತ ಉಪಯುಕ್ತವಾಗಿದೆ. ಈ ವಿಧಾನದಲ್ಲಿ ಹಾಲನ್ನು ಸಂಸ್ಕರಿಸುವ ಅಗತ್ಯವಿಲ್ಲದೆ ಬೇಕೆಂದಾಗ ಹಾಲಿನೊಂದಿಗೆ ಮಾತ್ರೆಗಳನ್ನು ತೆಗೆದುಕೊಳ್ಳಬಹುದು. ಕೀಮೋಟ್ರಿಪ್ಸಿನ್, ಟ್ರಿಪ್ಸಿನ್ ಮತ್ತು ಪೆಪ್ಟಿಡೇಸಸ್‌ಗಳೆಂಬ ಪ್ರಾಣಿಜನ್ಯ ಕಿಣ್ವಗಳನ್ನು ಸಹ ಜೀರ್ಣಕ್ರಿಯೆಯ ಸಮಸ್ಯೆಗಳಲ್ಲಿ ಉಪಯೋಗಿಸುತ್ತಾರೆ.

**ಉರಿಯೂತಗಳಲ್ಲಿ ಕಿಣ್ವಗಳ ಉಪಯೋಗ :** ಉರಿಯೂತವು ದೇಹದ ಸ್ವಯಂರಕ್ಷಣಾಕ್ರಮ, ಗಾಯಗಳಾದಾಗ ಆ ಭಾಗದಲ್ಲಿ ಉರಿಯೂತ ಉಂಟಾಗುತ್ತದೆ. ಉರಿಯೂತ ಉಂಟಾದಾಗ ದೇಹದ ಭಾಗದಿಂದ ರಕ್ತದ ಕಣಗಳು ಹರಿದುಬಂದು ಹಾನಿಕಾರಕ ದಂಡಾಣುಗಳನ್ನು ನಾಶಮಾಡುತ್ತವೆ. ಕಿಣ್ವಗಳ ಉಪಯೋಗವು ಉರಿಯೂತವನ್ನು ಹೆಚ್ಚಿಸಿ ಗಾಯಗಳು ಬೇಗ ವಾಸಿಯಾಗಲು ಸಹಾಯ ಮಾಡುತ್ತವೆ. ಉದಾಹರಣೆಗೆ, ಕ್ರೀಡಾಪಟುಗಳಿಗೆ ಕಿಣ್ವಗಳನ್ನು ನೀಡಿದಾಗ ಗಾಯ ವಾಸಿಯಾಗಲು ಅರ್ಧಕ್ಕಿಂತ ಕಡಿಮೆ ಸಮಯ ತೆಗೆದುಕೊಂಡಿರುವುದನ್ನು ನೋಡಬಹುದು.







**ಪರಂಗಿ ಹಣ್ಣಿನಿಂದ ಸಂಸ್ಕರಿಸಲ್ಪಟ್ಟ ಬ್ರೊಮೆಲೈನ್ ಕಿಣ್ವಗಳ ಉತ್ಪನ್ನ, ಲ್ಯಾಕ್ಟೇಸ್ ಉತ್ಪನ್ನ ಹಾಗೂ ಇತರೆ ಜೀರ್ಣಕಾರಕ ಕಿಣ್ವಗಳ ಉತ್ಪನ್ನ**

**ಮಾರ್ಜಕಗಳಲ್ಲಿ ಕಿಣ್ವಗಳ ಉಪಯೋಗ :** ಮಾರ್ಜಕಗಳಲ್ಲಿ ಪ್ರೊಟಿಯೇಸ್, ಅಮೈಲೇಸ್, ಲೈಪೇಸ್ ಹಾಗೂ ಮ್ಯಾನೇಸ್ ಕಿಣ್ವಗಳನ್ನು ಕ್ರಮವಾಗಿ ಬಟ್ಟೆಗಳಲ್ಲಿ ಇರುವಂತಹ ಪ್ರೋಟೀನ್, ಶರ್ಕರಪಿಷ್ಟಗಳು, ಎಣ್ಣೆ ಅಂಶದಿಂದಾದ ಕಲೆಗಳು ಮತ್ತು ಮ್ಯಾನಾನನ್ ಕಲೆಗಳನ್ನು ತೆಗೆಯಲು ಉಪಯೋಗಿಸುತ್ತಾರೆ. ಸೆಲ್ಯೂಲೇಸ್ ಕಿಣ್ವವನ್ನು ಬಟ್ಟೆಗಳು ತಮ್ಮ ಬಣ್ಣ ಉಳಿಸಿಕೊಳ್ಳಲು ಹಾಗೂ ಹತ್ತಿ ಬಟ್ಟೆಗಳಲ್ಲಿ ಸೆಲ್ಯುಲೇಸ್ ಅಂಶವು ಮರು ಶೇಖರಣೆಯಾಗದಂತೆ ತಡೆಯಲು ಉಪಯೋಗಿಸುತ್ತಾರೆ. ಈ ಕಿಣ್ವಗಳನ್ನು ಪಾತ್ರೆ ತೊಳೆಯುವ ಪುಡಿಗಳಲ್ಲಿ ಸಹ ಉಪಯೋಗಿಸುತ್ತಾರೆ.

**ಕಿಣ್ವಗಳನ್ನೊಳಗೊಂಡ ಮಾರ್ಜಕ ಉತ್ಪನ್ನ**

**ಪರಿಸರಮಾಲಿನ್ಯ ನಿಯಂತ್ರಣದಲ್ಲಿ ಕಿಣ್ವಗಳ ಉಪಯೋಗ :** ಪರಿಸರಮಾಲಿನ್ಯ ನಿಯಂತ್ರಣದಲ್ಲಿ ಸಹ ಕಿಣ್ವಗಳನ್ನು ಉಪಯೋಗಿಸಲಾಗುತ್ತದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಪರಿಸರ-ಮಾಲಿನ್ಯ ನಿಯಂತ್ರಣದಲ್ಲಿ ಫ್ಲ್ಯಾಡೋಮೋನಾಸ್ ಎಂಬ ಜಾತಿಯ ದಂಡಾಣುವಿನ ಉಪಯೋಗ. ಇದು ಹೈಡ್ರೋಕಾರ್ಬನ್‌ಯುಕ್ತ ತೈಲವನ್ನು ವಿಘಟಿಸಿ ತನ್ನ ಆಹಾರವನ್ನಾಗಿ ಉಪಯೋಗಿಸುತ್ತದೆ (ಇಂಗಾಲದ ಮೂಲ). ಈ ಜೀವಿಗೆ ನಾಲ್ಕು ಬೇರೆ ಬೇರೆ ಜಾತಿಯ ಸೂಕ್ಷ್ಮಾಣು ಜೀವಿಗಳ ಆನುವಂಶಿಕ ಅಂಶವನ್ನು ಸೇರಿಸಲಾಗಿದೆ. ಇದನ್ನು ೧೯೭೧ರಲ್ಲಿ ಆನಂದ್ ಮೋಹನ್ ಚಕ್ರವರ್ತಿ ಎಂಬ ಭಾರತೀಯ ವಿಜ್ಞಾನಿ ಅಭಿವೃದ್ಧಿಪಡಿಸಿದರು. ಈ ಜೀವಿಗೆ






ಏಕಸ್ವಾಮ್ಯ (ಪೇಟೆಂಟ್) ಪಡೆಯಲಾಗಿದೆ ಹಾಗೂ ಇದು ಏಕಸ್ವಾಮ್ಯ ಪಡೆಯಲಾದ ಮೊದಲ ಜೀವಿಯಾಗಿದೆ. ಇದನ್ನು ಈ ವಿಜ್ಞಾನಿಯ ಮಲ್ಟಿ–ಪ್ಲಾಸ್ಮಿಡ್ ಹೈಡ್ರೋಕಾರ್ಬನ್ ಡೀಗ್ರೇಡಿಂಗ್ ಪ್ಸ್ಯೂಡೋಮೋನಾಸ್ ಎಂದು ಕರೆದಿದ್ದಾರೆ. ಇದನ್ನು ವೈಜ್ಞಾನಿಕವಾಗಿ ಪ್ಸ್ಯೂಡೋಮೋನಾಸ್ ಪುಟಿಡಾ ಎಂದು ಕರೆಯಲಾಗಿದೆ. ಈ ಜೀವಿಯನ್ನು ಪರಿಸರದಲ್ಲಿರುವ ಟ್ಯಾಲೀನ್ ಎಂಬ ಮಾಲಿನ್ಯಕಾರಕ ಅಂಶವನ್ನು ನಿರ್ಮೂಲಿಸಲು ಉಪಯೋಗಿಸುತ್ತಾರೆ ಹಾಗೂ ಮಣ್ಣಿನಲ್ಲಿರುವ ನ್ಯಾಫ್ತಲೀನ್ ಅಂಶವನ್ನು ನಿರ್ಮೂಲಿಸಲು ಸಹ ಉಪಯೋಗಿಸುತ್ತಾರೆ. ಈ ಜೀವಿಯು ಸ್ಟಿರೀನ್‌ಯುಕ್ತ ತೈಲವನ್ನು ಪರಿಸರದಲ್ಲಿ ಕೊಳೆಯುವ ಪ್ಲಾಸ್ಟಿಕ್ ಆದ ಪಾಲಿಹೈಡ್ರಾಕ್ಸಿ ಆಲ್ಕೋನೇಟ್ಸ್ (ಪಿ. ಎಚ್. ಏ.)ಗಳಾಗಿ ಪರಿವರ್ತಿಸುತ್ತದೆ. ಈ ಸಾಮರ್ಥ್ಯಗಳಿಂದಾಗಿ ಈ ಜೀವಿಗೆ **"ಸೂಪರ್ ಬಗ್"** ಎಂಬ ಹೆಸರು ಬಂದಿದೆ. ಈ ಕ್ರಿಯೆಗಳು ಇದರಿಂದ ಸ್ರವಿಸಲ್ಪಡುವ ಕಿಣ್ವಗಳಿಂದ ನಡೆಯುತ್ತವೆ. ಈ ವಿಧಾನವು ಸೂಕ್ಷ್ಮಾಣು ಜೀವಿಯು ನಮಗೆ ಬೇಕಾದಂತಹ ಜಾಗದಲ್ಲಿ ಬೆಳೆದು ಅದರಿಂದ ಒಸರುವ ಕಿಣ್ವಗಳಿಂದ ನಮ್ಮ ಉದ್ದೇಶ ಪೂರ್ಣಗೊಳ್ಳುವಂತೆ ಮಾಡುವ ವಿಧಾನಕ್ಕೆ ಉದಾಹರಣೆಯಾಗಿದೆ (ಇನ್–ಸಿಟ್ಯೂ ಬಯೋರೆಮಿಡಿಯೇಶನ್). ಇನ್ನೊಂದು ವಿಧಾನದಲ್ಲಿ ನಾವು ನಿರ್ಮೂಲಿಸ ಬೇಕೆಂದಿರುವ ಮಾಲಿನ್ಯಕಾರಕ ಅಂಶಗಳನ್ನು ನಮಗೆ ಬೇಕಾದ ಜಾಗಕ್ಕೆ ಸ್ಥಳಾಂತರಿಸಿ ಕಿಣ್ವಗಳಿಂದ ಅದನ್ನು ಸಂಸ್ಕರಿಸಲಾಗುತ್ತದೆ (ಎಕ್ಸ್–ಸಿಟ್ಯೂ ಬಯೋರೆಮಿಡಿಯೇಶನ್).

**ಕಾಗದದ ತಯಾರಿಕೆಯಲ್ಲಿ ಕಿಣ್ವಗಳ ಉಪಯೋಗ :** ಲೈಪೇಸ್, ಪ್ರೋಟಿಯೇಸ್, ಅಮೈಲೇಸ್, ಕ್ಸೈಲನೇಸ್ ಮತ್ತು ಸೆಲ್ಯುಲೇಸ್ ಕಿಣ್ವಗಳನ್ನು ಕಾಗದದ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ; ಲೈಪೇಸ್ ಕಿಣ್ವವನ್ನು ಮರದಲ್ಲಿರುವ ಪಿತ್ ಎಂಬ ಅಂಶವನ್ನು ನಿಯಂತ್ರಿಸಲು, ಪ್ರೋಟಿಯೇಸ್ ಕಿಣ್ವವನ್ನು ಕಾಗದ ತಯಾರಿಕೆ ಪ್ರಕ್ರಿಯೆಯಲ್ಲಿ ನಿರ್ಮಾಣವಾಗುವಂತಹ ಸೂಕ್ಷ್ಮಾಣುಜೀವಿಗಳ ಪೊರೆ (ಬಯೋಫಿಲಂ)ಯನ್ನು ತೆಗೆಯಲು, ಅಮೈಲೇಸ್ ಕಿಣ್ವವನ್ನು ಕಾಗದಕ್ಕೆ ಸ್ಟಾರ್ಚ್ ಅಂಶವನ್ನು ಲೇಪಿಸಲು, ಕಾಗದವು ಶಾಯಿಯನ್ನು ಸರಿಯಾಗಿ ಹೀರುವಂತೆ ಮಾಡಲು ಹಾಗೂ ಕಾಗದಗಳ ಮರುಬಳಕೆಯಲ್ಲಿ ಕಾಗದಗಳಲ್ಲಿರುವಂತಹ ಶಾಯಿಯನ್ನು ನಿರ್ಮೂಲಿಸಲು ಉಪಯೋಗಿಸುತ್ತಾರೆ. ಕ್ಸೈಲನೇಸ್ ಕಿಣ್ವವನ್ನು ಬ್ಲೀಚಿಂಗ್ ಪ್ರಕ್ರಿಯೆಯನ್ನು ವೇಗಗೊಳಿಸಲು ಬಳಸುತ್ತಾರೆ. ಸೆಲ್ಯುಲೇಸ್ ಕಿಣ್ವವನ್ನು ಸಹ ಶಾಯಿಯನ್ನು ನಿರ್ಮೂಲಿಸಲು, ಕಾಗದವು ಶಾಯಿಯನ್ನು ಸರಿಯಾಗಿ ಹೀರುವಂತೆ ಮಾಡಲು ಹಾಗೂ ನಾರಿನ ಅಂಶದ ಬದಲಾವಣೆ (ಫೈಬರ್ ಮಾಡಿಫಿಕೇಶನ್)ಗಾಗಿ ಉಪಯೋಗಿಸುತ್ತಾರೆ.

**ಆಹಾರ ತಯಾರಿಕೆಯಲ್ಲಿ ಕಿಣ್ವಗಳ ಉಪಯೋಗ :** ಈಗಿನ ದಿನಗಳಲ್ಲಿ ಆಹಾರ ಉತ್ಪಾದನಾ ಕ್ಷೇತ್ರವು ತೀವ್ರಗತಿಯಲ್ಲಿ ಬೆಳೆಯುತ್ತಿರುವ ಕ್ಷೇತ್ರವಾಗಿದೆ. ಸಿದ್ಧ ಆಹಾರಗಳು ಇಂದಿನ ಜಾಗತೀಕರಣ ಯುಗದಲ್ಲಿ ಪ್ರಾಮುಖ್ಯತೆಯನ್ನು ಗಳಿಸಿಕೊಳ್ಳುತ್ತಿವೆ. ಕಿಣ್ವಗಳು ಸಿದ್ಧ ಆಹಾರಗಳ ತಯಾರಿಕೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಉದಾಹರಣೆಗೆ ಪೆಕ್ಟಿನ್ ಮಿಥೈಲ್ ಎಸ್ಟರೇಸ್ ಹಾಗೂ ಪೆಕ್ಟಿನೇಸ್ ಕಿಣ್ವಗಳನ್ನು ಹಣ್ಣಿನ ಆಧಾರಿತ ಆಹಾರ ಪದಾರ್ಥಗಳಾದ ಹಣ್ಣಿನ ರಸಗಳು, ಜ್ಯಾಮ್ ಹಾಗೂ ಸ್ಕ್ವಾಶ್‌ಗಳ ತಯಾರಿಕೆಯಲ್ಲಿ, ಅವುಗಳಲ್ಲಿರುವ ಪೆಕ್ಟಿನ್ ಅಂಶವನ್ನು ತೆಗೆದು ಒಗರುತನವನ್ನು ತೆಗೆಯಲು ಉಪಯೋಗಿಸುತ್ತಾರೆ. ಅಮೈಲೇಸ್, ಕ್ಸೈಲನೇಸ್, ಲೈಪೇಸ್, ಫಾಸ್ಫೋಲೈಪೇಸ್, ಗ್ಲೂಕೋಸ್ ಆಕ್ಸಿಡೇಸ್, ಲಿಪೋಆಕ್ಸಿಜನೇಸ್ ಕಿಣ್ವಗಳನ್ನು ಬ್ರೆಡ್ ತಯಾರಿಕೆಯಲ್ಲಿ ಹಿಟ್ಟನ್ನು ಹದಗೊಳಿಸಲು ಉಪಯೋಗಿಸುತ್ತಾರೆ. ಲಿಪೋಆಕ್ಸಿಜನೇಸ್ ಕಿಣ್ವವನ್ನು ಹಿಟ್ಟಿನ ಬಿಳಿಯ ಬಣ್ಣ ಉಳಿಸಿಕೊಳ್ಳಲು ಸಹ ಉಪಯೋಗಿಸುತ್ತಾರೆ. ಪ್ರೋಟಿಯೇಸ್ ಕಿಣ್ವಗಳನ್ನು ಬಿಸ್ಕತ್ ಹಾಗೂ ಕುಕೀಸ್‌ಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. ಇವು ಆಹಾರ ಪದಾರ್ಥಗಳಲ್ಲಿ ಕಿಣ್ವಗಳ ಕೆಲವೊಂದು ಉಪಯೋಗಗಳಾಗಿವೆಯಷ್ಟೆ. ಪಶು ಆಹಾರ ತಯಾರಿಕೆಯಲ್ಲಿ ಸಹ ಕಿಣ್ವಗಳನ್ನು ಉಪಯೋಗಿಸುತ್ತಾರೆ, ಫೈಟೇಸ್ ಕಿಣ್ವವನ್ನು ಪಶು ಆಹಾರದಲ್ಲಿರುವ ಫೈಟೇಟನ್ನು ಕರಗಿಸಿ ಫಾಸ್ಫರಸ್ ಅಂಶವನ್ನು ಬಿಡುಗಡೆಗೊಳಿಸಲು ಉಪಯೋಗಿಸುತ್ತಾರೆ. ಕ್ಸೈಲನೇಸ್ ಮತ್ತು ಬೀಟಾ–ಗ್ಲುಕನೇಸ್ ಕಿಣ್ವಗಳನ್ನು ಪಶು ಆಹಾರವನ್ನು ಹದಗೊಳಿಸಲು ಉಪಯೋಗಿಸುತ್ತಾರೆ.

**ಚರ್ಮವನ್ನು ಹದಗೊಳಿಸಲು ಕಿಣ್ವಗಳ ಉಪಯೋಗ :** ಪ್ರೋಟಿಯೇಸ್ ಕಿಣ್ವಗಳನ್ನು ಚರ್ಮದಿಂದ ಕೂದಲನ್ನು ತೆಗೆಯಲು, ಪ್ರೋಟಿಯೇಸ್ ಹಾಗೂ ಲೈಪೇಸ್ ಕಿಣ್ವಗಳನ್ನು ಕ್ರಮವಾಗಿ ಬೆಯ್ಟಿಂಗ್‌ಗಾಗಿ ಹಾಗೂ ಡಿ–ಪಿಕ್ಲಿಂಗ್ (ಚರ್ಮವನ್ನು ಹದಗೊಳಿಸುವ ವಿಧಾನಗಳು)ಗಾಗಿ ಉಪಯೋಗಿಸುತ್ತಾರೆ.

**ಡಾ॥ ರಾಮಲಿಂಗಪ್ಪ ಮತ್ತು ವಿನಯ್ ಕುಮಾರ್ ಪಿ. ಜಿ.**
ಸೂಕ್ಷ್ಮ ಜೀವಶಾಸ್ತ್ರ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ
ಶಿವಗಂಗೋತ್ರಿ, ದಾವಣಗೆರೆ.



## ನಮನ

ಸದಾ ಲವಲವಿಕೆ, ಉತ್ಸಾಹದಿಂದ ಕೆಲಸ ನಿರ್ವಹಿಸುತ್ತಿದ್ದ ನವಕರ್ನಾಟಕ ಪ್ರಿಂಟರ್ಸ್‌ನ ವ್ಯವಸ್ಥಾಪಕ ಶ್ರೀ ಬಿ. ಆರ್. ಕುಮಾರ್ ತೀವ್ರತರ ಕಾಯಿಲೆಯಿಂದ ಕಳೆದ ೫–೧೦–೨೦೧೪ರಂದು ಹಠಾತ್ತಾಗಿ ಮೃತ್ಯುವಶರಾಗಿದ್ದು ನಮಗೆಲ್ಲ ದಿಗ್ಭ್ರಮೆ ಮತ್ತು ಅತೀವ ದುಃಖ ಉಂಟುಮಾಡಿದೆ. ೪೬ರ ಪ್ರಾಯದ ಕುಮಾರ್ ತಂದೆ, ತಾಯಿ, ಪತ್ನಿ, ಪುತ್ರ, ಸೋದರ, ಸೋದರಿಯರು, ಬಂಧುವರ್ಗವಲ್ಲದೆ ಅಪಾರ ಸ್ನೇಹಿತರನ್ನು ಅಗಲಿ ಹೋಗಿದ್ದಾರೆ. ಪ್ರತಿ ತಿಂಗಳೂ 'ಹೊಸತು' ಪತ್ರಿಕೆಯ ಹಾಗೂ ನವಕರ್ನಾಟಕದ ಎಲ್ಲ ಪುಸ್ತಕಗಳ ಮುದ್ರಣದ ಜವಾಬ್ದಾರಿಯನ್ನು ಹೊತ್ತಿದ್ದ ಕುಮಾರ್ ಅವರಿಗೆ 'ಹೊಸತು' ಪತ್ರಿಕಾ ಬಳಗ, ನವಕರ್ನಾಟಕ ಪ್ರಕಾಶನ, ಮುದ್ರಣಾಲಯದ ಎಲ್ಲ ಸಿಬ್ಬಂದಿವರ್ಗ ಅವರ ಸೇವೆಯನ್ನು ಸ್ಮರಿಸುತ್ತ ಅಂತಿಮ ನಮನ ಸಲ್ಲಿಸುತ್ತದೆ. ಅಶ್ರುಪೂರ್ಣ ವಿದಾಯ ಹೇಳುತ್ತದೆ.



**ಪಿ. ಎಲ್. ರಾವ್**

# ದೈವ ಸಾಕ್ಷಾತ್ಕಾರದೆಡೆಗೆ

**ಫೋ**ನಿನಲ್ಲಿ ಸಂಪರ್ಕಿಸಿ ನಮ್ಮ ಸಲಹಾಕೇಂದ್ರಕ್ಕೆ ಬಂದ ಆ ಮಹಿಳೆಯ ಕಂಠಸ್ವರ ಮಧುರವಾಗಿತ್ತು. ೩೪ರ ವಯಸ್ಸಿನ ಬೆಂಗಳೂರಿನ ಒಂದು ಭಾಗದ ನಿವಾಸಿಯಾದ ಇವಳ ಕಥೆಯ ಆರಂಭ ಎಲ್ಲರಂತೆಯೇ. ಸಾಮಾನ್ಯಮಟ್ಟದ ಉದ್ಯೋಗಿಯಾದ ಪತಿ, ೪ನೇ ಕ್ಲಾಸಿನಲ್ಲಿ ಓದುತ್ತಿರುವ ಒಬ್ಬನೇ ಮಗ, ಮಧ್ಯಮ ವರ್ಗ ಜೀವನಶೈಲಿ. ಎಂದರೆ ಚಿಂತೆಯ ವಿಷಯ ಏನಿರಬಹುದು ಎಂದು ತಿಳಿಯಲು ಕುತೂಹಲ ನನಗೆ.

"೧೫ನೆಯ ವಯಸ್ಸಿಂದಲೇ ನನಗೆ ವೈರಾಗ್ಯ, ಅಧ್ಯಾತ್ಮದ ಮೇಲೆ ಅಭಿರುಚಿ. ಎಷ್ಟೋ ಸಂಸ್ಥೆ, ಸಂಘ, ದೇವಾಲಯಗಳನ್ನು ಸಂದರ್ಶಿಸಿ ಪಂಡಿತರ ಧಾರ್ಮಿಕ ಪ್ರವಚನಗಳನ್ನು ಕೇಳುವ ಗೀಳು. ಈಗ ಸಂಸಾರ ತ್ಯಜಿಸಿ ಸನ್ಯಾಸ ದೀಕ್ಷೆ ಪಡೆದು ಮುಕ್ತಿ ಪಡೆಯಬೇಕೆನ್ನುವ ಪ್ರಬಲವಾದ ಇಚ್ಛೆ. ವಿವಾಹವಾದದ್ದಕ್ಕಾಗಿ ಪತಿಗೆ ಒಂದು ಗಂಡುಮಗು ಇತ್ತದ್ದಾಯ್ತು. ಅತಿ ಶ್ರೇಷ್ಠವಾದ ಮನುಕುಲದಲ್ಲಿ ಹುಟ್ಟಿ ಇಡೀ ಬದುಕನ್ನು ಬರೇ ಗೃಹಕೃತ್ಯ ಮತ್ತು ಸಾಂಸಾರಿಕ ಆಶಯಗಳಲ್ಲಿ ವ್ಯಯಿಸುವುದು ತಪ್ಪಲ್ಲವೆ ? ಈ ನಡುವಯಸ್ಸಲ್ಲಿ ನನ್ನೀ ಲಕ್ಷ್ಯದ ಕಡೆ ತಿರುಗದಿದ್ದಲ್ಲಿ ಮುಂದಣ ಜನ್ಮಗಳಲ್ಲಿ ಪಾಪ ಮಾಡುತ್ತಾ ಕೊರಗುವುದೇ ಗತಿ. ಶೀಘ್ರದಲ್ಲೆ ನಾನು ಸೃಷ್ಟಿಕರ್ತನ ಕರೆಗೆ ಓಗೊಟ್ಟು ಸಂಸಾರ ತ್ಯಜಿಸಬೇಕೆಂದಿದ್ದೇನೆ. ನಿಮ್ಮ ಅನಿಸಿಕೆ ಏನು ?" ಎಂದು ಮಾತು ಶುರು ಮಾಡಿದರು ಆಕೆ.

"ಅಮ್ಮಾ, ನಿನ್ನೀ ಇಚ್ಛೆ ಏನಾದರೂ ಇರಲಿ, ಅದಕ್ಕೆ ಕೌಟುಂಬಿಕ ಕಲಹ ಕಾರಣವೇ ಅಥವಾ ಬೇಜಾರಾ ? ಪತಿ ಮತ್ತು ಮಗನೊಂದಿಗೆ ನಿಮ್ಮ ಸಂಬಂಧ ಹೇಗೆ ?"

"ಎಲ್ಲಾ ಚೆನ್ನಾಗಿದೆ. ಅವ ಸಾಧು ಮನುಷ್ಯ, ಪ್ರೀತಿಸ್ತಾನಷ್ಟೇ ಅಲ್ಲ, ನನ್ನ ಮೇಲೆ ಆಶ್ರಿತ. ನಮ್ಮ ಕುಟುಂಬದ ಒಳಿತಿಗಾಗಿ ಶ್ರಮಿಸ್ತಾನೆ. ನಮ್ಮಲ್ಲಿ ಎಂದೂ ವಿರಸ ಕಂಡದ್ದಿಲ್ಲ. ನನಗೆ ಅನ್ನಿಸಿರುವಂತೆ ಬುದ್ಧ, ಶಂಕರ ಮತ್ತು ಶಂಕರರಂತೆ ನಾನು ಸತ್ಯಾನ್ವೇಷಣೆಗೆ ಕಾತರಳಾಗಿರುವುದು ತಪ್ಪೇ ?"

"ನಿನ್ನೀ ಆಕಾಂಕ್ಷೆ ತಪ್ಪಲ್ಲ. ಆದರೆ ವಿವಾಹ ಸಮಯದಲ್ಲಿ ನೀನ್ಯಾಕೆ ವಿರೋಧಿಸಲಿಲ್ಲ ? ಈ ವಿಷಯ ಪತಿಯೊಂದಿಗೆ ಪ್ರಸ್ತಾಪಿಸಿರುವೆಯಾ ? ಒಬ್ಬ ಸಾಧು ಪುರುಷನನ್ನು ಸಂಸಾರ ಬಂಧನದಲ್ಲಿ ಸಿಕ್ಕಿಸಿ ನೀನು ಓಡಲಿಚ್ಛಿಸುವುದು ಎಷ್ಟರಮಟ್ಟಿಗೆ ನ್ಯಾಯ ?"

"ಗಂಡನೊಂದಿಗೆ ಮಾತಾಡಿಲ್ಲ. ಆದರೆ ಅವರ ಪ್ರತಿಕ್ರಿಯೆಯ ಬಗ್ಗೆ ಅಂದಾಜಿದೆ. ಈ ದ್ವಂದ್ವದಿಂದಾಗಿಯೇ ನಿಮ್ಮಲ್ಲಿ ಬಂದದ್ದು. ಆ ಮಟ್ಟಿನ ತಿಳುವಳಿಕೆ ಮತ್ತು ದೃಢತೆ ಇಲ್ಲದ ಕಾರಣ ಹಿರಿಯರೆದುರು ನಿಲ್ಲುವ ಧೈರ್ಯ ಸಾಲದಾಯಿತು. ಎಷ್ಟೆಂದರೂ ಓರ್ವ ಭಕ್ತೆ ತನ್ನನ್ನರಸಿ ಓಡಿಬರುವಾಗ ಅವಳ ಕುಟುಂಬ ರಕ್ಷಣೆ ಮಾಡನೇ ದಯಾಮಯಿಯಾದ ಭಗವಂತ ?"

"ಅಮ್ಮಾ, ನೀನು ಧರ್ಮಪ್ರವಚನಗಳಿಂದ ಹೆಕ್ಕಿದ ಒಣ ಶಬ್ದಗಳನ್ನು ಗಿಳಿಯಂತೆ ಒಪ್ಪಿಸುತ್ತಿಲ್ಲವಷ್ಟೆ! ನಿನ್ನ ವಿಮೋಚನೆಗಾಗಿ ನಿನ್ನ ಮೇಲೆ ಅವಲಂಬಿತರಾಗಿರುವ ಇಬ್ಬರನ್ನೂ ಗತಿಕೇಡಾಗಿಸಿದಾಗ ಭಗವಂತ ಅವರ

"ಕಿರಿಯ ಪ್ರಾಯದ ನಿನ್ನ ಆಧ್ಯಾತ್ಮಿಕ ಕ್ಷೇತ್ರದ ಅರಿವು ಮತ್ತು ಜಿಜ್ಞಾಸೆಗೆ ತಲೆಬಾಗುತ್ತೇನೆ. ಆದರೆ ನೀನು ಎಂದೂ ನಿನ್ನ ಪಂಡಿತಶ್ರೇಷ್ಠರು ಮತ್ತು ನನ್ನ ಮಾತುಗಳನ್ನು ನೇರವಾಗಿ ಒಪ್ಪಿಕೊಳ್ಳಬಾರದು. ಇವು ಯಾವುದೂ ದೈವಾದೇಶವಾಗಲಿ ಅಥವಾ ಉಪದೇಶವಾಗಲಿ ಅಲ್ಲ. ಎಲ್ಲವನ್ನೂ ನೀನು ಸ್ವತಃ ವಿವೇಚಿಸಿ ಮನಸ್ಸಿನಲ್ಲಿ ಮಂಥನ ಮಾಡಿ ಸರಿಕಂಡದ್ದನ್ನು ನಿನ್ನದಾಗಿಸಿದಲ್ಲಿ ಆಗ 'ನಾನು' ಎಂಬ ಮಾಧ್ಯಮ ಅಳಿದುಹೋಗಿ ಅಭಿಪ್ರಾಯ ನಿನ್ನದಾಗುತ್ತದೆ. ಇದರಿಂದ ಕಾರ್ಯರೂಪಕ್ಕೆ ತರಲು ನಿನ್ನಲ್ಲಿ, ಆತ್ಮವಿಶ್ವಾಸ ಬರುತ್ತದೆ. ಅಲ್ಲದೆ, ದೈವಜ್ಞರೆನ್ನಿಸಿಕೊಳ್ಳುವವರಲ್ಲಿನ ಆಂತರಿಕ ವಿಭಿನ್ನತೆ, ಟೊಳ್ಳುತನ ಎದ್ದುಕಾಣುತ್ತದೆ. ವಾಕ್ಪಟುತ್ವ ಮತ್ತು ಸ್ವಸಾಧನೆಯ ಅನುಭವ ಇವೆರಡೂ ವಿಭಿನ್ನ ವಿಷಯಗಳು. ವಾಚನಗಾರನ ಸ್ವಸಾಧನೆ ಏನೆಂದು ಅಳೆಯಲು ಕಲಿ-ಸತ್ಯದ ಅರಿವಿಗೆ ಮಧ್ಯವರ್ತಿಗಳು ಬೇಕಾಗಿಲ್ಲ. ಎಲ್ಲರೂ ಹೇಳಿದುದನ್ನು ಒಪ್ಪುವುದಾದರೆ ಅದೇ ಒಂದು ಗೀಳು ಆಗ್ತದೆ." ಇನ್ನೂ ಮುಂದರಿಯುತ್ತ, "ಕೆಲ ಗಾದೆಗಳಿವೆಯಲ್ಲ ? ಸ್ವಭಾವವಾಗಿ ಎಲ್ಲರನ್ನೂ ಆಳಿಸುವವನು ಏನನ್ನೂ ಪಾಲಿಸನು, ಸಾಧಿಸನು, ಪರರರೊಂದಿಗೆ ಸಂವಾದ ಮಿತ ಫಲಕಾರಿ; ಆಂತರಿಕ ಯೋಚನೆಯ ಫಲ ಅಪರಿಮಿತ, ತಿಂಗಳಿಗಾಗುವಷ್ಟು ಮೀನನ್ನು ದಾನ ಈಯುವುದಕ್ಕಿಂತ ಮೀನು ಹಿಡಿಯಲು ಕಲಿಸುವುದು ಶ್ರೇಷ್ಠ ಕಾರ್ಯ; 'ಕಟ್ಟಿಕೊಟ್ಟ ಬುತ್ತಿ ಒಪ್ಪೊತ್ತಿಗೂ ಸಾಲದು'

ರಕ್ಷಣೆಗೆ ಹೇಗೆ ಬದ್ಧನಾಗ್ತಾನೆ ? ಈ ದಿನ ಬಲಶಾಲಿಗಳು, ಶ್ರೀಮಂತರು, ಶಕ್ತರು ತಮ್ಮ ಸುತ್ತಲಿನ ಆಶ್ರಿತ, ಬಡ, ಅಭಾಗ್ಯ ಜೀವಿಗಳ ಬಗ್ಗೆ ಚಿಂತಿಸದ ಕಾರಣ ಲೋಕದಲ್ಲಿ ಎಲ್ಲ ನರಳಾಟ ಮತ್ತು ಬಡತನಗಳನ್ನು ನೀನು ಕಾಣುತ್ತಿಲ್ಲವೆ ? ಜಗನ್ನಿಯಾಮಕನಿಗೆ ನಿನ್ನೊಬ್ಬಳದೇ ಚಿಂತೆಯೇ ? ಹಾಗೆಂದು ಮಗನ ಓದನ್ನು ಆಮೇಲೆ ಯಾರು ನೋಡಿಕೊಳ್ತಾರೆ ?"

"ಪತಿ ಬರುವುದು ತಡವಾಗೋದ್ರಿಂದ ಅವರೊಡನೆ ನಾನು ಸಹಕರಿಸುತ್ತೇನೆ. ಒಮ್ಮೊಮ್ಮೆ ಮಗನೂ ಸಹಕರಿಸ್ತಾನೆ."

"ಅಮ್ಮಾ, ನಿಮ್ಮ ಪರಿಸ್ಥಿತಿ ನೋಡಿ ನನಗೆ ಮರುಕವಾಗ್ತಿದೆ. ದೇವರ ವಿಶೇಷ ಗಮನಕ್ಕೆ ಅರ್ಹರಾಗಲು ಅವರೀರ್ವರು ನಿನ್ನಂತೆ ಭಕ್ತರಲ್ಲ, ಸಾಮಾನ್ಯ ಲೌಕಿಕರು. ಇದು ಜಗನ್ನಾಥನಿಂದ ನಿರೀಕ್ಷಿತ ಜವಾಬ್ದಾರಿಯೂ ಅಲ್ಲ. ಮನುಷ್ಯನಿಗೆ ವಿಶೇಷವಾದ ಮೆದುಳನ್ನಿತ್ತ ಆ ಮಹಾಶಕ್ತಿ ಎಷ್ಟೆಂದರೂ ವಿಶ್ವದ ಘಟನೆಗಳನ್ನು ಸ್ಥೂಲ ರೂಪದಿಂದ ನೋಡಬಹುದು. ಅದು ಇವೆಲ್ಲವನ್ನೂ ನಿಯಂತ್ರಿಸುತ್ತದೆಯೋ ಗೊತ್ತಿಲ್ಲ. ಪ್ರತಿಯೊಂದರ ನಿತ್ಯ ಸಮಸ್ಯೆಗಳ ನಿವಾರಣೆಯಂತೂ ಅದರಿಂದಾಗದು. ಈ ಶ್ರೇಷ್ಠ ಮೆದುಳನ್ನು ಮಾನವ ಪರರ ಶೋಷಣೆಗಾಗಿ ಮಾತ್ರ ಉಪಯೋಗಿಸುತ್ತಾನೆ. ನಿನ್ನನ್ನೇ ನಂಬಿರುವವರನ್ನು ನಿರ್ಗತಿಕರನ್ನಾಗಿಸಿ, ಜೀವನದಲ್ಲಿ ಅವರ ವಿಶ್ವಾಸ ಕುಂದಿಸುತ್ತಾ ಮಗನಿಂದ ಮಾತೃಪ್ರೇಮವನ್ನೂ ಕಸಿಯುವ ಮನಸ್ಸು ನಿನಗೆ ಹೇಗೆ ಬಂತಮ್ಮಾ ?"

"ನಾನು ಎಲ್ಲಿದ್ದರೂ ಸದಾ ಅವರಿಬ್ಬರ ಒಳಿತಿಗಾಗಿ ಪ್ರಾರ್ಥಿಸುವುದಲ್ಲದೆ ಜ್ಞಾನ ಪ್ರಾಪ್ತಿಯಾದ ಬಳಿಕ ಜನಸೇವೆಗಾಗಿ ಮತ್ತೆ ಈ ಸಂಸಾರಕ್ಕೇ ಬಂದೇನು."

"ನೋಡಮ್ಮಾ, ದೂರದ ಬೆಟ್ಟದ ಚಿತ್ರಣ ನಿನ್ನಲ್ಲಿ ಅಪೂರ್ಣವಾಗಿದೆ. ಮುಂದಕ್ಕೆ ನಿನಗೆ ಮೂರು ಸಾಧ್ಯತೆಗಳಿವೆ : (೧) ನೀನೆನ್ನುವ ದೈವಾನ್ವೇಷಣೆಗೆ ಇಂದಿನ ಜಗತ್ತಿನಲ್ಲಿ ಸರಿಯಾದ ಮಾರ್ಗದರ್ಶಕರು ಸಿಗುವುದು ಅಪರೂಪ. ಅಲ್ಲದೆ, ಅಧ್ಯಾತ್ಮವೆಂಬುದು ಮಹಾ ಚರ್ಚಿತ ಕ್ಷೇತ್ರ. ಅದರ ಬಗ್ಗೆ ಒಮ್ಮತವಿಲ್ಲ. ಅಲ್ಪಜ್ಞಾನಿಗಳು, ಸ್ವಾರ್ಥಿಗಳು, ಸಂಸಾರವನ್ನು ಸಂಕಷ್ಟಗಳಿಂದಾಗಿ ತೊರೆದೋಡಿದವರು ಮತ್ತು ವ್ಯಸನಿಗಳೂ ಇಲ್ಲಿ ತುಂಬಿದ್ದಾರೆ. ಪ್ರಾಮಾಣಿಕರು ಒಳಹೊಕ್ಕರೆ ಬಹುಬೇಗನೇ ನಿರಾಶರಾಗಿ ಹಿಂದೋಡುವ ಪರಿಸ್ಥಿತಿ ಇದೆ. (೨) ಪಂಡಿತರು, ಪಂಥಗಳು ಹೇರಳವಾಗಿರುವ ಇಂದಿನ ದಿನಗಳಲ್ಲಿ ಅನ್ವೇಷಣೆ ಎಂದರೆ ಅದೊಂದು ವಿಶಾಲ ಪದಗುಚ್ಛ. ಒಳ್ಳೆಯ ಗುರುಗಳು ಸಿಕ್ಕಿದರೂ ಸಿಕ್ಕಿಕೊಂಡವರು ಕಾಲ್ಪನಿಕತೆಯ ಜಗತ್ತಿನತ್ತ ಎಳೆಯಲ್ಪಡುವರು. ಇಂದಿನ ವಿಜ್ಞಾನ ಯುಗದಲ್ಲಿ ದೈವ ಸಾಕ್ಷಾತ್ಕಾರವಾದವರನ್ನು ಕಂಡಿದ್ದೇವಾ? (೩) ಅಪರೂಪಕ್ಕೆ ವಿಶ್ವದ ಚರಾಚರ ಅಂಶಗಳ ಕಾಳಜಿ ಉಳ್ಳವರೆಂದರೆ ಅವರು ತಮ್ಮ ಲೌಕಿಕ ಪರಿಸರದಲ್ಲೇ ಪರಮಾತ್ಮನನ್ನು ಕಾಣುತ್ತಾರೆ. ಸುತ್ತಿ ಬಳಸಿ ಇಲ್ಲಿಗೇ ಬರುವುದಾದರೆ ನೇರವಾಗಿ ನಿನಗ್ಯಾಕೆ ನೋಡಲಾಗದು ?"

ನಾನೇ ಮತ್ತೆ ಮಾತು ಮುಂದುವರಿಸಿದೆ : "ನೀನು ಹಿಂದೆ ಬರುವಷ್ಟರಲ್ಲಿ ನಿನ್ನ ಕುಟುಂಬ ವಿನಾಶವಾಗಿದ್ದರೆ ಏನು ಮಾಡುವೆ ? ಅವರ ಜೀವನಕ್ಕೆ ಆಧಾರವಾಗಿರುವ ನಿನ್ನನ್ನು ಅನಂತರ ಈರ್ವರೂ ಕ್ಷಮಿಸರು. ಇಂತಹ ಕಳಂಕಿತ ಚಿಂತನೆಯುಳ್ಳ ನೀನು ಸಮಾಜಕ್ಕೆ ಏನನ್ನು ತಾನೆ ಕೊಡಬಲ್ಲೆ ?"

"ನೀವು ಒಬ್ಬ ವ್ಯಕ್ತಿಯ ಗಂಭೀರ ಧರ್ಮಾಕಾಂಕ್ಷೆಗಳಿಗೆ ತಣ್ಣೀರೆರೆಯುತ್ತಿದ್ದೀರಲ್ಲ ? ಎಂದರೆ ದೈವ ಸಾಕ್ಷಾತ್ಕಾರ ಎಂಬುದೆಲ್ಲ ಮಿಥ್ಯೆ ಎನ್ನುತ್ತೀರಾ ?"

"ಕಿರಿಯ ಪ್ರಾಯದ ನಿನ್ನ ಆಧ್ಯಾತ್ಮಿಕ ಕ್ಷೇತ್ರದ ಅರಿವು ಮತ್ತು ಜಿಜ್ಞಾಸೆಗೆ ತಲೆಬಾಗುತ್ತೇನೆ. ಆದರೆ ನೀನು ಎಂದೂ ನಿನ್ನ ಪಂಡಿತಶ್ರೇಷ್ಠರು ಮತ್ತು ನನ್ನ ಮಾತುಗಳನ್ನು ನೇರವಾಗಿ ಒಪ್ಪಿಕೊಳ್ಳಬಾರದು. ಇವು ಯಾವುದೂ ದೈವಾದೇಶವಾಗಲಿ ಅಥವಾ ಉಪದೇಶವಾಗಲಿ ಅಲ್ಲ. ಎಲ್ಲವನ್ನೂ ನೀನು ಸ್ವತಃ ವಿವೇಚಿಸಿ ಮನಸ್ಸಿನಲ್ಲಿ ಮಂಥನ ಮಾಡಿ ಸರಿಕಂಡದ್ದನ್ನು ನಿನ್ನದಾಗಿಸಿದಲ್ಲಿ ಆಗ 'ನಾನು' ಎಂಬ ಮಾಧ್ಯಮ ಅಳಿದುಹೋಗಿ ಅಭಿಪ್ರಾಯ ನಿನ್ನದಾಗುತ್ತದೆ. ಇದರಿಂದ ಕಾರ್ಯರೂಪಕ್ಕೆ ತರಲು ನಿನ್ನಲ್ಲಿ, ಆತ್ಮವಿಶ್ವಾಸ ಬರುತ್ತದೆ. ಅಲ್ಲದೆ, ದೈವಜ್ಞರೆನ್ನಿಸಿಕೊಳ್ಳುವವರಲ್ಲಿನ ಆಂತರಿಕ ವಿಭಿನ್ನತೆ, ಟೊಳ್ಳುತನ ಎದ್ದುಕಾಣುತ್ತದೆ. ವಾಕ್ಪಟುತ್ವ ಮತ್ತು ಸ್ವಸಾಧನೆಯ ಅನುಭವ ಇವೆರಡೂ ವಿಭಿನ್ನ ವಿಷಯಗಳು. ವಾಚನಗಾರನ ಸ್ವಸಾಧನೆ ಏನೆಂದು ಅಳೆಯಲು ಕಲಿ–ಸತ್ಯದ ಅರಿವಿಗೆ ಮಧ್ಯವರ್ತಿಗಳು ಬೇಕಾಗಿಲ್ಲ. ಎಲ್ಲರೂ ಹೇಳಿದುದನ್ನು ಒಪ್ಪುವುದಾದರೆ ಅದೇ ಒಂದು ಗೀಳು ಆಗ್ತದೆ." ಇನ್ನೂ ಮುಂದರಿಯುತ್ತ, "ಕೆಲ ಗಾದೆಗಳಿವೆಯಲ್ಲ ? ಸ್ವಭಾವವಾಗಿ ಎಲ್ಲರನ್ನೂ ಆಲಿಸುವವನು ಏನನ್ನೂ ಪಾಲಿಸನು, ಸಾಧಿಸನು, ಪರರರೊಂದಿಗೆ ಸಂವಾದ ಮಿತ ಫಲಕಾರಿ; ಆಂತರಿಕ ಯೋಚನೆಯ ಫಲ ಅಪರಿಮಿತ, ತಿಂಗಳಿಗಾಗುವಷ್ಟು ಮೀನನ್ನು ದಾನ ಈಯುವುದಕ್ಕಿಂತ ಮೀನು ಹಿಡಿಯಲು ಕಲಿಸುವುದು ಶ್ರೇಷ್ಠ ಕಾರ್ಯ; 'ಕಟ್ಟಿಕೊಟ್ಟ ಬುತ್ತಿ ಒಪ್ಪೊತ್ತಿಗೂ ಸಾಲದು' – ಈಗ ನನ್ನದೊಂದು ಸರಳ ಪ್ರಶ್ನೆ: ನೀನೆಂದುಕೊಂಡಿರುವ ಮಹಾಶಕ್ತಿ ಅಡ್ಡಮಾರ್ಗದಿಂದ ಬಂದ ನಿನ್ನನ್ನು ಆದರಿಸುವುದೆಂದು ನಿರೀಕ್ಷಿಸುವೆಯಾ ? ರಾತ್ರಿ ಹೊತ್ತಲ್ಲಿ ವಿರಹ ವೇದನೆ ನಿನ್ನನ್ನು ಅಸ್ಥಿರಗೊಳಿಸದೆ ? ಓರ್ವ ಭಾವನಾರಹಿತಳು ಭಗವಂತನನ್ನೆಷ್ಟು ಸಂತೃಪ್ತಿಗೊಳಿಸಿಯಾಳು ? ಬದಲಿಗೆ ನಿನಗೆ ಈಗ ಸಂಸಾರದಲ್ಲಿ ಒಂದು ಸ್ಥಾನ, ಅದಕ್ಕೊಪ್ಪುವ ಕರ್ತವ್ಯ ಎರಡೂ ಇವೆ. ಅವನ್ನು ಭಕ್ತಿ ಮತ್ತು ಸೇವಾಭಾವದಿಂದ ಮಾಡಿದಲ್ಲಿ ಯಾವ ದೇವನೂ ತೃಪ್ತನಾಗುವನು. ಸೇವೆಯಲ್ಲಿ ತೃಣ ಮಾತ್ರವೂ ಫಲಾಪೇಕ್ಷೆ ಕೂಡದು. ತನ್ನಿಂದ ಬೆಳಕು ಕಂಡ ಜೀವಿಯ ಮುಖದಲ್ಲಿನ ಕೃತಜ್ಞತಾ ಭಾವಕ್ಕಿಂತ ಜಾಸ್ತಿ ಸಂತೃಪ್ತಿ ಕೊಡುವ ವಿಷಯ ಬೇರೆ ಇದೆಯಾ ?"

ಒಮ್ಮೆಲೇ ನನಗೇ ಏಕಾಂಕವಾಗಿ ಕಂಡ ನನ್ನ ವಾಗ್ಝರಿಯನ್ನು ನಿಲ್ಲಿಸಿ ಆಲಿಸುತ್ತೇನೆ. ಫೋನಲ್ಲಿ ನಿಶ್ಶಬ್ದ ! ಅಷ್ಟೇ ಅಲ್ಲ, ದೀರ್ಘವಾದುದು – ನಿಮಿಷಗಳೇ ಕಳೆದವು. ನನ್ನ ಆದರ್ಶವಾದದ ಮಾತುಗಳಿಂದ ಬೇಸತ್ತು ತೊಲಗಿದಳೆನ್ನುತ್ತಾ ರಿಸೀವರನ್ನು ಕೆಳಗಿಳಿಸ ಹೊರಟಾಗ... ಒಂದು ಕ್ಲಿಕ್... ಮೆಲ್ಲನೆ ಮೆಲುದನಿಯಲ್ಲಿ ಬಿಡುಬಿಡುವಾಗಿ ಶಬ್ದಗಳು...

"ಸ್ವಾಮೀ ನಿಮ್ಮ ಪ್ರಾಯ ಎಷ್ಟೆಂದು ನಾನರಿಯಬಹುದಾ ?"

ಈಗ ನನಗೆ ತಬ್ಬಿಬ್ಬು! ಅಧ್ಯಾತ್ಮ ಮತ್ತು ದೈವಿಕತೆಯ ಮಾತು ಅತೀವ ವ್ಯಕ್ತಿತ್ವಕ್ಕಿಳಿಯುತ್ತಿದೆ. ತಡವರಿಸುತ್ತಾ ನಾನೆಂದೆ :

"ಎ... ಎಪ್ಪತ್ನಾಲ್ಕು ....ಯಾಕೆ ?"

ಇನ್ನೊಂದು ಮೌನ... ಇನ್ನೂ ತುಸು ಜಾಸ್ತಿ ನಿಮಿಷಗಳು. ಈ ಮಹಿಳೆಗೆ ಏನಾಗಿದೆ ? ಈ ತನಕ ವಿವೇಚನೆಯಿಂದ ತಾರ್ಕಿಕವಾಗಿ ಮಾತಾಡ್ತಿದ್ದವಳಲ್ಲಿ ಈ ವಿಚಿತ್ರ ವರ್ತನೆ ? ಅದೂ ಒಮ್ಮಿಂದೊಮ್ಮೆಗೆ ?

ಈಗ ರಿಸೀವರಿಂದ ಕೇಳಿತು ಬಿರಿಬಿರಿಯಾದ ಶಬ್ದಗಳು.

"ನಾ... ನಿಮ್ಮನ್ನು ತಂದೆ ಎಂದು ಕರೆಯಲಾ ?"

ನಾನೊಂದು ಕ್ಷಣ ಸಂಪೂರ್ಣವಾಗಿ ಸ್ತಂಭೀಭೂತನಾದೆ. ಏನು ತೊದಲಿದೆನೋ ನನಗರಿವಿಲ್ಲ. ಆ ಬಳಿಕ ಅವಳಿಂದ ಎಂದೂ ಕರೆ ಬರಲಿಲ್ಲ. *(ಸತ್ಯ ಘಟನೆ ಆಧಾರಿತ ಪ್ರಸಂಗ)*

**ಪಿ. ಎಲ್. ರಾವ್**
"ಮಾನಸಿಕ, ಸಾಮಾಜಿಕ ಮತ್ತು ಮಕ್ಕಳ ಶಿಕ್ಷಣ ಕ್ಷೇತ್ರದಲ್ಲಿ ಉದಾರಿ ಸಲಹೆಗಾರರು", 'ದಿ ಗನ್ಸ್', ನಂ. ೫೭, ೨ನೇ ಮುಖ್ಯರಸ್ತೆ, ಪ್ರಶಾಂತನಗರ, ಬೆಂಗಳೂರು – ೫೬೦ ೦೭೯



## ಗಾಢನಿದ್ರೆ

ರಾಜ್ಯದಲ್ಲಿ
ಹೆಚ್ಚುತ್ತಿರುವ
ಅತ್ಯಾಚಾರ
ಅನ್ಯಾಯ
ಅಕ್ರಮ
ಭ್ರಷ್ಟಾಚಾರಕ್ಕೆಲ್ಲ
ಸಿ.ಎಂ. ಸಿದ್ದು
ಗಾಢನಿದ್ರೆಯ
ಗೊರ್... ಗೊರ್...
ಗೊರಕೆಯೇ
ಉತ್ತರ !!

**ಕಾ.ಗಿ.ಹತ್ತಳ್ಳಿ**
ಸಿಂದಗಿ ತಾಲ್ಲೂಕು, ವಿಜಾಪುರ ಜಿಲ್ಲೆ






# ಬರ

**ಆ** ಊರಿನ ಹೆಸರು ಕಾಶಿಪುರ. ಅದೊಂದು ಸಣ್ಣ ಹಳ್ಳಿ. ಅದರ ಜಮೀನ್ದಾರ ಇನ್ನೂ ಹೆಚ್ಚು ಸಣ್ಣಕ್ಕಿದ್ದ. ಆದರೂ ಅವನ ಗೇಣಿದಾರರಿಗೆ ಅವನ ಎದುರು ನಿಲ್ಲುವ ಧೈರ್ಯವಿರಲಿಲ್ಲ. ಅವನು ಅಷ್ಟು ಕಠೋರನಾಗಿದ್ದ.

ಅವತ್ತು ಅವನ ಕಿರಿಯ ಮಗನ ಹುಟ್ಟುಹಬ್ಬವಿತ್ತು. ಅಲ್ಲಿಯ ಪೂಜೆ ಮುಗಿಸಿಕೊಂಡು ಪೂಜಾರಿ ತಾರಕರತ್ನನು ಮನೆಗೆ ಮರಳಿ ಹೋಗುತ್ತಿದ್ದ. ಮೇ ತಿಂಗಳು ಮುಗಿಯುತ್ತಾ ಬಂದಿದ್ದರೂ ಆಗಸದಲ್ಲಿ ಮಳೆ–ಮೋಡ ಸುಳಿದಿರಲಿಲ್ಲ. ಮಳೆರಹಿತ ಆಕಾಶ ಬೆಂಕಿ ಉಗುಳುತ್ತಿತ್ತು.

ರಸ್ತೆಯ ಬದಿಯ ಬಯಲಿನ ಅಂಚಿನಲ್ಲಿ ನೇಕಾರ ಗಫೂರನ ಮನೆ ಇತ್ತು. ಮನೆಯ ಮಣ್ಣಿನ ಗೋಡೆಗಳು ಪಾಳು ಬಿದ್ದಿದ್ದರಿಂದ ಮನೆಯಂಗಳವು ಸಾರ್ವಜನಿಕ ಹೆದ್ದಾರಿಗೆ ತಾಗಿಕೊಂಡಿತ್ತು. ಹಾಗಾಗಿ ಮನೆಯೊಳಗಿನ ಖಾಸಗಿ ಬದುಕು ದಾರಿಹೋಕರ ಕಣ್ಣಿಗೆ ಬೀಳುವಂತಿತ್ತು.

ರಸ್ತೆ ಬದಿಯ ಮರವೊಂದರ ನೆರಳಿನಲ್ಲಿ ನಿಂತಿದ್ದ ತಾರಕರತ್ನ ಕೂಗಿದ : "ಏ ! ಗಫೂರ !... ಯಾರಾದರೂ ಇದ್ದೀರಾ ಒಳಗೆ ?"

ಗಫೂರನ ಹತ್ತು ವರ್ಷದ ಮಗಳು ಬಾಗಿಲ ಬಳಿ ಬಂದು ಹೇಳಿದಳು : "ಏನು ಬೇಕು ನಿಮಗೆ ? ಅಪ್ಪ ಜ್ವರ ಬಂದು ಮಲಗಿದಾನೆ."

"ಓ, ಜ್ವರಾನಾ ! ಕರಿ ಆ ಖದೀಮನ್ನ !"

ಇವರ ಮಾತಿನ ಶಬ್ದ ಕೇಳಿ ಗಫೂರ ಜ್ವರದಿಂದ ನಡುಗುತ್ತಾ ಹೊರ ಬಂದ. ಪಾಳುಬಿದ್ದ ಗೋಡೆಗೆ ತಾಗಿಕೊಂಡು ನಿಂತಿದ್ದ ಜಾಲಿ ಮರಕ್ಕೆ ಒಂದು ಹೋರಿಯನ್ನು ಕಟ್ಟಲಾಗಿತ್ತು.

ಹೋರಿಯ ಕಡೆ ಬೊಟ್ಟು ಮಾಡಿ ತೋರಿಸುತ್ತಾ ತಾರಕರತ್ನ ಕೇಳಿದ : "ಇದೇನು ನಾನು ನೋಡ್ತಾ ಇರೋದು ? ನಿನಗೆ ಗೊತ್ತಿಲ್ಲವೇನಯ್ಯ ಇದೊಂದು ಹಿಂದೂ ಹಳ್ಳಿ ಮತ್ತೆ ಇಲ್ಲಿಯ ಜಮೀನ್ದಾರನೂ ಹಿಂದೂ ಅಂತ ?" ಸಿಟ್ಟಿನಿಂದ ಹಾಗೂ ಸುಡುಬಿಸಿಲಿನಿಂದಾಗಿ ಅವನ ಮುಖ ಕೆಂಪಾಗಿತ್ತು. ಹಾಗಾಗಿ ಅವನ ಮಾತು ಕೂಡ ಬೆಂಕಿಯಂತಿತ್ತು. ಆದರೆ ಗಫೂರ ಅವನ ಮಾತಿನ ಮರ್ಮವರಿಯದೆ ಅವನತ್ತ ಸುಮ್ಮನೆ ನೋಡಿದ.

"ಅಲ್ಲಯ್ಯ, ಮರಕ್ಕೆ ಕಟ್ಟಿಹಾಕಿದ್ದ ಅದನ್ನ ನಾನು ಇವತ್ತು ಬೆಳಿಗ್ಗೇನೇ ನೋಡಿದ್ದೆ. ಅದು ಇನ್ನೂ ಅಲ್ಲೇ ಇದೆ. ಆ ಹೋರಿಯೇನಾದರೂ ಸತ್ತರೆ, ನಿನ್ನೊಡೆಯ ನಿನ್ನ ಚರ್ಮ ಸುಲಿದುಬಿಡ್ತಾನೆ. ಅವನು ಸಾಮಾನ್ಯ ಬ್ರಾಹ್ಮಣನಲ್ಲ !" ಎಂದ ತಾರಕರತ್ನ.

"ನಾನು ಏನು ಮಾಡಲಿ, ಗುರುಗಳೆ ? ನಾನು ಅಸಹಾಯಕ. ನನಗೆ ಈಗ ನಾಲ್ಕು ದಿನದಿಂದಾನೂವೆ ಜ್ವರ. ನಾನದನ್ನ ಮೇಯಲಿಕ್ಕೆ ಎಲ್ಲೂ ಕರಕೊಂಡು ಹೋಗೋ ಸ್ಥಿತಿಯಲ್ಲಿಲ್ಲ."

"ಅದು ತನ್ನಷ್ಟಕ್ಕೆ ತಾನೆ ಮೇಯಲು ಹೋಗಲಿಕ್ಕೆ ಯಾಕೆ ಬಿಡಬಾರದು ನೀನು ?"

"ನಾನದನ್ನ ಎಲ್ಲಿಗೆ ಹೋಗಲಿಕ್ಕೆ ಬಿಡಲಿ, ತಂದೆ ? ಜನ ಇನ್ನೂ ಭತ್ತ ಒಕ್ಕಿಲ್ಲ. ಅದಿನ್ನು ಹಾಗೇ ಹೊಲದಲ್ಲಿದೆ. ಒಣ ಹುಲ್ಲು ಇನ್ನೂ ಒಟ್ಟು ಮಾಡಿಲ್ಲ. ಎಲ್ಲ ಸುಟ್ಟು ಬೂದಿಯಾಗಿದೆ. ಎಲ್ಲೂ ಒಂದು ಹುಲ್ಲು ಕಡ್ಡೀನೂ ಇಲ್ಲ. ನಾನು ಹ್ಯಾಗೆ ತಾನೆ ಅದನ್ನ ಬಿಚ್ಚಿ ಹೊರಗೆ ಕಳಿಸಲಿ, ಗುರುಗಳೇ ? ಅದು ಯಾರದಾದರೂ ಹೊಲಕ್ಕೆ ನುಗ್ಗಿ ಹುಲ್ಲು ತಿಂದುಹಾಕಿಬಿಟ್ಟರೆ ?"

ಈಗ ತಾರಕರತ್ನ ಸ್ವಲ್ಪ ಮೆತ್ತಗಾದ. "ಆದರೆ ನೀನು ಅದನ್ನ ಎಲ್ಲಾದರೂ ನೆರಳಿರೋ ಕಡೆ ಕಟ್ಟಿಹಾಕಿ ಸ್ವಲ್ಪ ಮೇವು ಹಾಕಬಾರದಾ ತಿನ್ನಲಿಕ್ಕೆ ? ನಿನ್ನ ಮಗಳೂ ಅಡಿಗೆ ಮಾಡಿಲ್ವಾ ? ನೀನದಕ್ಕೆ ಒಂದು ಚೂರು ಗಂಜೀನಾದರೂ ಕುಡಿಸಬಾರದಾ ?"

ಗಫೂರ ಉತ್ತರ ಕೊಡಲಿಲ್ಲ. ಅವನು ಅಸಹಾಯಕತೆಯಿಂದ ತಾರಕರತ್ನನತ್ತ ನೋಡಿ, ದೀರ್ಘ ನಿಟ್ಟುಸಿರುಬಿಟ್ಟ.

"ಏನು ? ಅಷ್ಟೂನೂ ಇಲ್ವಾ ನಿನ್ನ ಹತ್ರ ? ಅಲ್ಲಯ್ಯ, ನೀನು ನಿನ್ನ ಪಾಲಿನ ಹುಲ್ಲನ್ನೇನು ಮಾಡಿದೆ ? ನಿನ್ನ ಹೊಟ್ಟೆ ತುಂಬಿಸಿಕೊಳ್ಳಲಿಕ್ಕಾಗಿ ನೀನು ಅದನ್ನ ಮಾರಿಬಿಟ್ಟೆಯೋ ಏನು ? ಹೋರಿಗೆ ಅಂತ ಒಂದು ಕಟ್ಟೂ ಉಳಿಸಲಿಲ್ಲವಾ ? ಎಷ್ಟು ನಿರ್ದಯಿ ಕಣಯ್ಯ ನೀನು !"

ಇಂಥ ಆಪಾದನೆ ಕೇಳಿ ಗಫೂರನಿಗೆ ಮಾತೇ ಉಡುಗಿ ಹೋಯಿತು. ಸ್ವಲ್ಪ ಹೊತ್ತು ಬಿಟ್ಟು ನಿಧಾನವಾಗಿ ಹೇಳಿದ : "ನನಗೆ ಈ ವರ್ಷದ ನನ್ನ ಪಾಲಿನ ಮೇವೇನೋ ಸಿಗಬೇಕಿತ್ತು, ಆದರೆ ನಾನು ಹೋದ ವರ್ಷದ ಗೇಣಿ ಕೊಟ್ಟಿಲ್ಲ ಅಂತ ಒಡೆಯರು ಅದನ್ನೆಲ್ಲ ತಾವೇ ಇಟ್ಟುಕೊಂಡುಬಿಟ್ಟರು. ನಾನು ಅವರ ಕಾಲಿಗೆ ಬಿದ್ದು ಬೇಡಿಕೊಂಡೆ : " ಸ್ವಾಮಿ, ನೀವೇ ನಮ್ಮ ದೇವರು. ನಾನು ನಿಮ್ಮ ಜಮೀನನ್ನು ಬಿಟ್ಟು ಬೇರೆ ಎಲ್ಲಿಗೆ ಹೋಗಲಿ ? ನನಗೆ ಸ್ವಲ್ಪಾನಾದರೂ ಮೇವು ಕೊಡಿ, ಧಣಿ. ನನ್ನ ಸೂರಿನ ಮೇಲೆ ಹುಲ್ಲೇ ಇಲ್ಲದ ಹಂಗಾಗೈತೆ. ಆಮೇಲೆ, ನಮಗಿರೋದು ಒಂದೇ ಒಂದು ಗುಡಿಸಲು – ನನಗೆ ಮತ್ತು ನನ್ನ ಮಗಳಿಗೆ. ನಾವು ಛಾವಣಿಯನ್ನ ತಾಳೆಗರಿಗಳಿಂದ ಮುಚ್ಚಿ ಹ್ಯಾಗೋ ಈ ಸಲದ ಮಳೆಗಾಲ ಕಳೀತೀವಿ, ಆದರೆ ಹೊಟ್ಟೆಗೆ ಏನೂ ಇಲ್ಲದೆ ನಮ್ಮ ಮಹೇಶ ಹ್ಯಾಗೆ ತಾನೆ ಬದುಕಬೇಕು ?" ಅಂತ.

"ಓಹೋ ! ನೀನು ಆ ಹೋರಿಗೆ ಭಾಳ ಪ್ರೀತಿಯಿಂದ ಮಹೇಶ ಅಂತ ಹೆಸರಿಟ್ಟಿದೀಯಲ್ವಾ ! ಇದೊಳ್ಳೆ ತಮಾಷೆ !" ಎಂದ ತಾರಕರತ್ನ.

---

**ಶರತ್‌ಚಂದ್ರ ಚಟರ್ಜಿ**

**ಕನ್ನಡಕ್ಕೆ : ಶ್ರೀನಿವಾಸ್ ವಿ. ಸುತ್ರಾವೆ**

ಆದರೆ ಈ ವ್ಯಂಗ್ಯ ಗಫೂರನಿಗೇನೂ ತಟ್ಟಲಿಲ್ಲ. ಅವನು ಮುಂದುವರಿದು ಹೇಳಿದ : "ಆದರೆ ಒಡೆಯರು ನನಗೆ ಕರುಣೆ ತೋರಿಸಲಿಲ್ಲ. ಅವರು ನನಗೆ ಎರಡು ತಿಂಗಳಿಗಾಗುವಷ್ಟು ಮಾತ್ರ ಭತ್ತ ಕೊಟ್ಟರು. ನನ್ನ ಪಾಲಿನ ಹುಲ್ಲನ್ನು ಅವರ ಪಾಲಿಗೇ ಸೇರಿಸಿದರು. ಹಾಗಾಗಿ ಮಹೇಶನಿಗೆ ಒಂದು ಹಿಡಿ ಹುಲ್ಲೂ ಸಿಗಲಿಲ್ಲ."

"ಅದು ಸರಿ, ಆದರೆ ನೀನು ಅವರಿಗೆ ಹಣ ಕೊಡಬೇಕಾಗಿದೆಯಲ್ವಾ ?" ಎಂದ ತಾರಕರತ್ನ. "ನೀನ್ಯಾಕೆ ಕೊಡಬಾರದು? ಜಮೀನ್ದಾರರು ನಿನ್ನನ್ನು ಸಾಕಬೇಕಾಗಿದೆಯಾ?"

"ಆದರೆ ನಾನು ಹ್ಯಾಗೆ ತಾನೆ ಸಾಲ ತೀರಿಸೋದು ? ನಾವು ಅವರಿಗೋಸ್ಕರ ನಾಲ್ಕು ಬಿಘ ಜಮೀನನ್ನ ಉಳತೀವಿ, ಆದರೆ ಬರ ಇದ್ದ ಕಳೆದ ಎರಡು ವರ್ಷಗಳಿಂದ ಭತ್ತ ಹೊಲದಲ್ಲೇ ಒಣಗಿಹೋಗಿದೆ. ನನ್ನ ಮತ್ತು ನನ್ನ ಮಗಳ ಹೊಟ್ಟೆಗೂ ಸಾಕಷ್ಟು ಇಲ್ಲದಂತಾಗಿದೆ. ಈ ಗುಡಿಸಲನ್ನೇ ನೋಡಿ ! ಮಳೆ ಬಂದಾಗ ನಾನು, ನನ್ನ ಮಗಳು ಒಂದು ಮೂಲೆಯಲ್ಲಿ ಮುದುಡಿಕೊಂಡು ಮಲಗಿರ ಬೇಕಾಗುತ್ತೆ. ಮಹೇಶನನ್ನೂ ನೋಡಿ ! ನೀವು ಅದರ ಪಕ್ಕೆಲುಬುಗಳನ್ನೂ ಎಣಿಸಬಹುದು. ನೀವು ದಯವಿಟ್ಟು ಒಂದೆರಡು ದಿನಕ್ಕಾಗುವಷ್ಟು ಅದಕ್ಕೆ ಸ್ವಲ್ಪ ಮೇವು ಕೊಡಿಯಪ್ಪ." ಹೀಗೆ ಹೇಳಿ ಗಫೂರ ಆ ಬ್ರಾಹ್ಮಣನ ಕಾಲಿಗೆ ಬಿದ್ದ.

"ಬೇಡ, ಬೇಡ, ಸರಿ ಆಚೆ ! ನಾನು ಮನೆಗೆ ಹೋಗಬೇಕು. ತಡ ಆಯ್ತು." ಎಂದು ತಾರಕರತ್ನ ಹೇಳಿ ಮುಗುಳ್ನಗುತ್ತಾ ಹೊರಡಲನುವಾದ. "ಅಯ್ಯೋ ದೇವರೆ ! ಇದೇನಪ್ಪ, ಇದು ನನ್ನನ್ನ ತಿವೀಲಿಕ್ಕೇ ಬರೋ ಹಾಗೆ ಕಾಣ್ತಿದೆ !" ಎಂದು ಭಯ ಮತ್ತು ಸಿಟ್ಟಿನಿಂದ ಹಿಂದೆ ಸರಿಯುತ್ತಾ ಹೇಳಿದ.

ಗಫೂರ ನಡುಗುತ್ತಾ ಎದ್ದು ನಿಂತ. "ಅದು ನಿಮ್ಮ ಕೈಲಿರೋ ಅಕ್ಕಿ ಮತ್ತೆ ಹಣ್ಣಿನ ಗಂಟಿನಲ್ಲಿರೋದನ್ನ ಸ್ವಲ್ಪ ತಿನ್ನಬೇಕು ಅಂತ ಹಾಗೆ ನೋಡ್ತಿದೆ," ಎಂದ.

"ತಿನ್ನಬೇಕು ಅಂತಾನಾ ? ಸರೀನೆ ! ಒಡೆಯನಂತೆ ಪ್ರಾಣಿ. ತಿನ್ನಲಿಕ್ಕೆ ಮೇವಿಲ್ಲ ಅನ್ನೋ ಕಾರಣಕ್ಕೆ ಇದನ್ನ ತಿನ್ನಬೇಕು ಅಂತ ಆಸೆಯೇನೋ ಆ ಪ್ರಾಣಿಗೆ. ಅದನ್ನ ಆಚೆ ತಗೊಂಡು ಹೋಗಿ ಬೇರೆ ಎಲ್ಲಾದರೂ ಕಟ್ಟಿ ಹಾಕು ! ಅಯ್ಯಯ್ಯೋ, ಏನು ಕೊಂಬುಗಳೂ ಅಂತೀನಿ ! ಅದು ಇವತ್ತಲ್ಲ ನಾಳೆ ಯಾರಿಗಾದರೂ ತಿವಿದು ಸಾಯಿಸಿ ಬಿಡ್ತದೆ", ಎಂದು ಹೇಳುತ್ತಾ ಪೂಜಾರಿಯು ಅಲ್ಲಿಂದ ತಕ್ಷಣವೇ ಕಾಲು ಕಿತ್ತ.

ಅವನು ಹೋದ ನಂತರ ಗಫೂರ ಮಹೇಶನೆಡೆ ತಿರುಗಿ ನೋಡಿದ. ಅದರ ದೊಡ್ಡ, ಕಂದು ಬಣ್ಣದ ಕಣ್ಣುಗಳಲ್ಲಿ ಹಸಿವು ಮತ್ತು ನೋವು ಸ್ಪಷ್ಟವಾಗಿ ಕಾಣುತ್ತಿತ್ತು. "ತಿನ್ನಲಿಕ್ಕೆ ಒಂದು ಹಿಡಿಯಷ್ಟೂ ಕೊಡಲಿಲ್ಲ ಇದಕ್ಕೆ", ಎಂದು ತನ್ನಷ್ಟಕ್ಕೆ ತಾನೆ ಗೊಣಗಿಕೊಂಡ – ಹೋರಿಯ ಕತ್ತು ಮತ್ತು ಬೆನ್ನನ್ನು ಸವರುತ್ತಾ. "ನೀನೇ ನನ್ನ ಮಗ, ಮಹೇಶ," ಎಂದು ಅದಕ್ಕೆ ಪಿಸು ನುಡಿದ. "ನೀನೀಗ ಎಂಟು ವರ್ಷದಿಂದ ನಮ್ಮ ಸೇವೆ ಮಾಡ್ತಾ ಬಂದಿದೀಯ. ನಿನಗೀಗ ವಯಸ್ಸಾಯ್ತು. ನೀನು ತಿನ್ನಲಿಕ್ಕೆ ನಾನು ನಿನಗೆ ಸಾಕಷ್ಟು ಕೊಡಲಾರದ ಸ್ಥಿತಿಯಲ್ಲಿದೀನಿ – ಆದರೆ ನಿನಗೆ ಗೊತ್ತಲ್ಲ ನಾನು ನಿನ್ನನ್ನ ಎಷ್ಟು ಪ್ರೀತಿಸ್ತೀನಿ ಅಂತ ?"

ಮಹೇಶ ಕತ್ತು ಚಾಚಿ ಖುಷಿಯಿಂದ ಕಣ್ಣು ಮುಚ್ಚಿಕೊಂಡ. ಗಫೂರ ಮಾತಾಡುತ್ತಲೇ ಹೋದ : "ನೀನೇ ಹೇಳು, ಈ ಭೀಕರ ವರ್ಷ ನಾನು ನಿನ್ನನ್ನ ಹ್ಯಾಗೆ ತಾನೆ ಜೀವಂತ ಇಡಬಲ್ಲೆ ? ನಾನು ನಿನ್ನನ್ನ ಬಿಚ್ಚಿಹಾಕಿದರೆ ನೀನು ಬೇರೆಯವರ ಭತ್ತಾನೋ ಬಾಳೆ ಎಲೆಗಳನ್ನೋ ತಿನ್ನಲಿಕ್ಕೆ ಶುರುಮಾಡಿಬಿಡ್ತೀಯ. ನಾನು ನಿನ್ನನ್ನ ಹ್ಯಾಗೆ ತಾನೆ ಇಟ್ಟುಕೊಳ್ಳೋದು ? ನಿನ್ನ ಮೈಯಲ್ಲಿ ಈಗ ಶಕ್ತಿ ಇಲ್ಲ – ನೀನು ಯಾರಿಗೂ ಬೇಡ ವಾಗಿದ್ದೀಯ. ನಿನ್ನನ್ನ ದನದ ಜಾತ್ರೇಲಿ ಮಾರಿಬಿಡು ಅಂತ ಹೇಳ್ತಾರೆ ಜನ – ನನಗೆ..." ಆ ಯೋಚನೆ ಬಂದಾಕ್ಷಣ ಅವನ ಕಣ್ಣಲ್ಲಿ ನೀರು ಬಂತು. ಕಣ್ಣೀರು ಒರೆಸಿಕೊಂಡು, ಆ ಕಡೆ ಈ ಕಡೆ ನೋಡಿ ಅವನು ಹಿತ್ತಲಿನಿಂದ ಬಣ್ಣಗೆಟ್ಟ ಹುಲ್ಲಿನ ಒಂದು ಕಂತೆಯನ್ನು ತಂದ. ಅದನ್ನು ಮಹೇಶನ ಮುಂದಿಟ್ಟು ಹೇಳಿದ :

"ಬೇಗ ತಿನ್ನು, ಮಗ, ಇಲ್ಲ ಅಂದ್ರೆ...."

"ಅಪ್ಪ..."

"ಏನಮ್ಮ ?"

"ಬಾ, ಊಟ ಮಾಡು" ಎಂದು ಕರೆದ. ಗಫೂರನ ಮಗಳು ಬಾಗಿಲಿನಿಂದ ಹೊರ ನೋಡುತ್ತ, "ಏನು, ನೀನು ಮತ್ತೆ ಛಾವಣಿಯ ಹುಲ್ಲನ್ನ ತೆಗೆದು ಕೊಟ್ಟಿದೀಯ ಮಹೇಶನಿಗೆ ?" ಎಂದು ಕೇಳಿದಳು.

ಹೀಗೆ ಅವಳು ಕೇಳಬಹುದೆಂಬ ಭಯವಿತ್ತು ಅವನಿಗೆ. ಈ ಪ್ರಶ್ನೆಯಿಂದ ಅವನಿಗೆ ನಾಚಿಕೆಯಾಗಿ, ಅವನು "ಅಯ್ಯೋ, ಇದು ತುಂಬ ಹಳೇದಮ್ಮ. ಸುಮ್ಮನೆ ಕೊಳೆತು ಹೋಗ್ತಾ ಇತ್ತು," ಎಂದು ಮೆಲ್ಲನೆ ಉತ್ತರ ಕೊಟ್ಟ.

"ನೀನು ಅದನ್ನ ತೆಗೀತಾ ಇದ್ದದ್ದು ನನಗೆ ಕೇಳಿಸಿತು, ಅಪ್ಪ."

"ಇಲ್ಲ, ಮರಿ, ಹಾಗೇನೂ ಅಲ್ಲ, ಏನಂದ್ರೆ ..."

"ಆದರೆ, ಅಪ್ಪ, ನೀನು ಹೀಗೆ ಮಾಡಿದರೆ ಗೋಡೆ ಕುಸಿದು ಬಿದ್ದುಹೋಗುತ್ತೆ."

## ಹೀಗೊಂದು ಸಲಹೆ




**ಜಾತಿ**–ಧರ್ಮಗಳ ಮೀರಿ
ಯೋಚಿಸುವುದನು
ಕಲಿತು
ಒಳಗೆ ಬಾ,
ಅಲ್ಲದಿರೆ,
ಬೇಡೆನಗೆ ನಿನ ಸಂಗ

ತೆಗೆದುಕೊ ಸ್ನಾನಕ್ಕೆ,
ಅವಕಾಶ ಸಾಕಷ್ಟು
ಒಳ–ಹೊರಗೆ ಮೈತೊಳೆದು
ಶುಚಿಯಾಗಿ ಬಾ
ಅಲ್ಲದಿರೆ,
ಬರಿದೇ ಮುಖಭಂಗ.

ಧರ್ಮದಮಲಲಿ
ಮಿಂದು
ನಲುಗಿಹೋಗಿದೆ ಜೀವ !
ಜಾತಿ ಕಬ್ಬೆಕ್ಕುಗಳು
ಎಬ್ಬಿಸಿದ ದಾಂದಲೆಗೆ
ಹೈರಾಣಾದಳು ಅವ್ವ !

ಅದಕೆಂದೇ
ಅದಕೆಂದೇ
ಜಾತಿ–ಧರ್ಮಗಳ ಗಡಿ–
ಗೋಡೆ
ಮೀರಿ ಬಾ,
ಅಲ್ಲದಿರೆ,
ಬೇಡೆನಗೆ ನಿನ ಸಂಗ




**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲಾ (ಉತ್ತರ ಕನ್ನಡ ಜಿಲ್ಲೆ)

ಗಫೂರ ಮಾತಾಡಲಿಲ್ಲ. ಅವನಿಗೆ ಇದ್ದದ್ದು ಇದೊಂದೇ – ಈ ಗುಡಿಸಲು. ಅವನು ಜಾಗರೂಕತೆ ವಹಿಸದಿದ್ದರೆ ಈ ಮನೆ ಇನ್ನೊಂದು ಮಳೆಗಾಲದವರೆಗೆ ಉಳಿಯಲ್ಲ ಅನ್ನುವುದು ಅವನಿಗಿಂತ ಚೆನ್ನಾಗಿ ಬೇರೆ ಯಾರಿಗೆ ತಾನೆ ಗೊತ್ತಿರಲಿಕ್ಕೆ ಸಾಧ್ಯ ? ಆದರೂ, ನಿಜ ಹೇಳಬೇಕೆಂದರೆ, ಇದರಿಂದ ಪ್ರಯೋಜನವಾದರೂ ಏನಿದೆ ?

"ಬಾ, ಕೈ ತೊಳಕೊಂಡು ಬಂದು ಊಟ ಮಾಡು. ನಾನು ತಟ್ಟೇಲಿ ಊಟ ಬಡಿಸಿದೀನಿ" ಎಂದಳು ಪುಟ್ಟ ಹುಡುಗಿ.

"ಸ್ವಲ್ಪ ಗಂಜಿ ಕೊಡಮ್ಮ, ಮಹೇಶನಿಗೆ ಕೊಡ್ತೀನಿ ಕುಡೀಲಿಕ್ಕೆ."

"ಗಂಜಿ ಇಲ್ಲ, ಅಪ್ಪ – ಅದೆಲ್ಲ ಮಡಕೆಯಲ್ಲೇ ಒಣಗಿಹೋಯ್ತು."

ಸುಮಾರು ಒಂದು ವಾರ ಕಳೆಯಿತು. ಮೈಯಲ್ಲಿ ಹುಷಾರಿಲ್ಲದೆ ಮತ್ತು ಆತಂಕದಲ್ಲಿದ್ದ ಗಫೂರ ಅಂಗಳದಲ್ಲಿ ಕೂತಿದ್ದ. ನಿನ್ನೆಯಿಂದ ಮಹೇಶ ಮನೆಗೆ ಬಂದಿರಲಿಲ್ಲ.




ಅವನು ಸ್ವತಃ ಅಸಹಾಯಕನಾಗಿದ್ದ. ಅಮೀನಾ ಬೆಳಿಗ್ಗೆಯಿಂದಲೇ ಮಹೇಶನನ್ನೂ ಎಲ್ಲಾ ಕಡೆ ಹುಡುಕಿದ್ದಳು. ಅವಳು ಮನೆಗೆ ಬಂದಾಗ ಆಗಲೇ ಕತ್ತಲಾಗುತ್ತಾ ಬಂದಿತ್ತು.

"ಅಪ್ಪ, ನಿನಗೆ ಗೊತ್ತಾಯ್ತಾ ? ಮಾಣಿಕ್ ಘೋಷ್ ಮಹೇಶನ್ನ ಪೊಲೀಸ್ ಸ್ಟೇಷನ್ನಿಗೆ ಕಳ್ಸಿದಾನೆ," ಎಂದಳು.

"ಏನು ಹುಚ್ಚು ಮಾತು !"

"ನಿಜ, ಅಪ್ಪ. ಅವರ ಆಳು ನನಗೆ ಹೇಳಿದ : ಹೋರಿ ದರಿಯಾಪುರದಲ್ಲಿದೆ ಅಂತ ಹೇಳು ನಿಮ್ಮಪ್ಪನಿಗೆ" ಅಂತ.

"ಅದು ಏನು ಮಾಡ್ತಂತೆ ?"

"ಅವರ ತೋಟಕ್ಕೆ ನುಗ್ಗಿತ್ತಂತೆ."

ಗಫೂರ ಏನೂ ಉತ್ತರ ಕೊಡಲಿಲ್ಲ.

"ಮೂರು ದಿನ ಬಿಟ್ಟು ಅದನ್ನ ದನದ ಜಾತ್ರೇಲಿ ಮಾರ್ತಾರಂತೆ."

"ಮಾರಲಿ ಬಿಡು" ಎಂದ ಗಫೂರ.

ಅಮೀನಳಿಗೆ ದನದ ಜಾತ್ರೆ ಅಂದರೆ ಏನು ಅಂತ ಗೊತ್ತಿರಲಿಲ್ಲ. ಮಹೇಶನ ವಿಷಯದಲ್ಲಿ ಅದರ ಪ್ರಸ್ತಾಪ ಬಂದಾಗಲೆಲ್ಲ ತನ್ನ ತಂದೆ ಚಡಪಡಿಸುತ್ತಿದ್ದುದನ್ನು ಆಕೆ ಗಮನಿಸಿದ್ದಳು. ಆದರೆ ಇವತ್ತು ಅವನು ಒಂದೂ ಮಾತಾಡದೆ ಹೊರ ನಡೆದ.

ಅವತ್ತು ರಾತ್ರಿ ಯಾರಿಗೂ ಕಾಣದಂತೆ ಗಫೂರನು ಬನ್ಸಿಯ ಅಂಗಡಿಗೆ ಬಂದ.

"ಅಣ್ಣಯ್ಯ, ನನಗೆ ಒಂದು ರೂಪಾಯಿ ಸಾಲ ಕೊಡ್ತೀಯಾ ?" ಎಂದ, ಒಂದು ಹಿತ್ತಾಳೆ ತಟ್ಟೆಯನ್ನು ಕೆಳಗಿಡುತ್ತಾ. ಬನ್ಸಿಗೆ ಈ ತಟ್ಟೆ ಚೆನ್ನಾಗಿ ಗೊತ್ತಿತ್ತು. ಯಾಕೆಂದ್ರೆ ಈಗ ಎರಡು ವರ್ಷದ ಅವಧಿಯಲ್ಲಿ ಅವನು ತಟ್ಟೆಯನ್ನು ಅಡವು ಇಟ್ಟುಕೊಂಡೇ ಐದು ಸಲ ಒಂದೊಂದು ರೂಪಾಯಿ ಸಾಲ ಕೊಟ್ಟಿದ್ದ. ಹಾಗಾಗಿ ಅವನು ಇವತ್ತೂ ಇಲ್ಲ ಅನ್ನಲಿಲ್ಲ.

ಮರುದಿನ ಬೆಳಿಗ್ಗೆ ಮಹೇಶ ತನ್ನ ಯಾವತ್ತಿನ ಸ್ಥಾನದಲ್ಲಿದ್ದ. ಒಬ್ಬ ಹಿರಿಯ ಮಹಮದೀಯನು ಆ ಹೋರಿಯನ್ನು ಚೆನ್ನಾಗಿ ನೋಡಿ ಪರಿಶೀಲಿಸುತ್ತಿದ್ದ. ಅಲ್ಲೇ ಹತ್ತಿರದಲ್ಲೇ ಒಂದು ಕಡೆ ಗಫೂರ ಮುದುಡಿಕೊಂಡು ನೆಲದ ಮೇಲೆ ಕೂತಿದ್ದ. ಎಲ್ಲ ಪರೀಕ್ಷಿಸಿ ನೋಡಿ ಆ ಮುದುಕ ತನ್ನ ಕಾಲಿನ ಅಂಚಿನಲ್ಲಿ ಗಂಟು ಹಾಕಿಕೊಂಡಿದ್ದ ಹತ್ತು ರೂಪಾಯಿಯ ನೋಟೊಂದನ್ನು ಬಿಚ್ಚಿದ. ಅದನ್ನು ಪದೇ ಪದೇ ಕೈಯಿಂದ ಸವರಿ ನೆಟ್ಟಗೆ ಮಾಡುತ್ತಾ ಹೇಳಿದ : "ಇದು ತಗೊ. ಇದರಲ್ಲಿಂದ ನಾನು ಏನೂ ತಗೊಳಲ್ಲ. ಪೂರ್ತಿ ಹಣ ಕೊಟ್ಟಿದೀನಿ."

ಕೈಯನ್ನು ಮುಂದೆ ಚಾಚಿ ಗಫೂರ ಹಣವನ್ನು ತೆಗೆದುಕೊಂಡ, ಆದರೆ ಮಾತಾಡದೆ ಮೌನವಾಗಿದ್ದ. ಮುದುಕನ ಜೊತೆ ಬಂದಿದ್ದ ಇಬ್ಬರು ಗಂಡಸರು ಆ ಪ್ರಾಣಿಗೆ ಕಟ್ಟಿದ್ದ ಹಗ್ಗವನ್ನು ಮುಟ್ಟುವಷ್ಟರಲ್ಲಿ ಅವನು ತಕ್ಷಣ ಎದ್ದು ನಿಂತು, "ಹಗ್ಗ ಮುಟ್ಟಬೇಡಿ, ಗೊತ್ತಾಯ್ತ ? ಜೋಕೆ !" ಎಂದು ಜೋರಾಗಿ ಕೂಗಿ ಹೇಳಿದ.

ಅವರಿಗೆ ಆಶ್ಚರ್ಯವಾಯಿತು. "ಯಾಕೆ ?" ಎಂದು ಕೇಳಿದ ಆ ಮುದುಕ.

"ಯಾಕೆ ಏನು ಅಂತ ಇಲ್ಲ. ಅದು ನನ್ನ ಸ್ವತ್ತು. ನಾನು ಅದನ್ನ ಮಾರಲ್ಲ" ಎಂದು ಹೇಳಿ ಆ ನೋಟನ್ನು ಬಿಸಾಕಿದ.

"ಆದರೆ ನಿನ್ನೆ ನೀನು ಮುಂಗಡ ಹಣ ಇಸ್ಕೊಂಡಿದ್ದೆಯಲ್ಲ?" ಎಂದು ಮೂವರೂ ಒಟ್ಟಿಗೇ ಕೇಳಿದರು.

"ತಗೊಳೀ ಇದನ್ನ" ಎನ್ನುತ್ತಾ ಅವರತ್ತ ಎರಡು ರೂಪಾಯಿಯನ್ನು ಎಸೆದ.

ಗಫೂರ ಅಂಬಲಿಗಾಗಿ ನೆರೆಹೊರೆಯವರಲ್ಲಿ ಬೇಡಿ ಮಹೇಶನಿಗೆ ಕುಡಿಯಲು ಕೊಟ್ಟ. ಅದರ ತಲೆ ಹಾಗೂ ಕೊಂಬುಗಳನ್ನು ನೇವರಿಸುತ್ತಾ ಏನೇನೋ ಪ್ರೀತಿಯ ಮಾತುಗಳನ್ನು ಉಸುರಿದ.

ಜೂನ್ ತಿಂಗಳ ಮಧ್ಯ ಭಾಗ. ಭಾರತದಲ್ಲಿ ಇಂತಹ ಸಮಯದ ಆಕಾಶವನ್ನು ನೋಡಿಲ್ಲದವರ್ಯಾರಿಗೂ ಆ ಹೊತ್ತಿನ ಸುಡು ಬಿಸಿಲು ಎಷ್ಟು ಭಯಂಕರವಾಗಿರುತ್ತೆ ಎಂಬ ಕಲ್ಪನೆ ಇರುವುದಿಲ್ಲ. ಕರುಣೆಯ ಒಂದು ಸುಳಿವೂ ಎಲ್ಲಿಯೂ ಇಲ್ಲ. ಯಾವತ್ತಾದರೊಂದು ದಿನ ಆಕಾಶದ ಸ್ಥಿತಿ ಬದಲಾಗಿ ಮಳೆ ಮೋಡಗಳು ಕಾಣಿಸಿಕೊಂಡಾವು ಎಂಬ ಕಲ್ಪನೆ ಕೂಡ ಇಂದು ಯಾರಿಗೂ ಬರಲಿಕ್ಕಿಲ್ಲ. ದಿನದಿಂದ ದಿನಕ್ಕೆ – ಕಾಲದ ಕೊನೆಯವರೆಗೂ – ಈ ಸುಡು ಬಿಸಿಲು ಹೀಗೇ ಮುಂದುವರಿಯುವಂತೆ ಕಾಣುತ್ತಿತ್ತು.

ಗಫೂರ ನಡುಮಧ್ಯಾಹ್ನ ಮನೆಗೆ ಬಂದ. ಅವನು ಯಾವತ್ತೂ ಯಾರ ಕೂಲಿ ಕೆಲಸಕ್ಕೂ ಹೋಗಿದ್ದವನಲ್ಲ. ಜ್ವರ ಇಳಿದು ನಾಲ್ಕೈದು ದಿನ ಆಗಿತ್ತು, ಅಷ್ಟೆ. ಅವನು ಇನ್ನೂ ಚೇತರಿಸಿಕೊಂಡಿರಲಿಲ್ಲ.

ಅವನು ಕೆಲಸ ಹುಡುಕಿಕೊಂಡು ಹೊರಹೋಗಿದ್ದ, ಆದರೆ ಪ್ರಯೋಜನವಾಗಿದ್ದಿಲ್ಲ. ಹಸಿವು, ನೀರಡಿಕೆ, ಸುಸ್ತು. ಕಣ್ಣಿಗೆ ಕತ್ತಲು ಕವಿದಂತಾಗಿತ್ತು. "ಅಡಿಗೆ ಯಾಯ್ತೇನಮ್ಮ, ಅಮೀನಾ ?" ಎಂದು ಅಂಗಳದಿಂದ ಕೂಗಿ ಕೇಳಿದ.

ಅವನ ಮಗಳು ಉತ್ತರ ಕೊಡದೆ ಸುಮ್ಮನೆ ಹೊರಬಂದು ಗೋಡೆಗೊರಗಿ ನಿಂತಳು.

"ಅಡಿಗೆ ಆಯ್ತಾ ?" ಎಂದು ಗಫೂರ ಮತ್ತೆ ಕೇಳಿದ. ಆದರೆ ಉತ್ತರ ಬರಲಿಲ್ಲ.

"ಏನು ? ಆಗಿಲ್ಲವಾ ? ಯಾಕೆ ?"

"ಮನೇಲಿ ಅಕ್ಕಿ ಇಲ್ಲ, ಅಪ್ಪ."

"ಅಕ್ಕಿ ಇಲ್ಲವಾ ? ಬೆಳಿಗ್ಗೇನೇ ಯಾಕೆ ಹೇಳಲಿಲ್ಲ ?"

"ನಿನ್ನೆ ರಾತ್ರೇನೇ ಹೇಳಿದ್ದೆನಲ್ಲ."

"ನಿನ್ನೆ ರಾತ್ರೇನೇ ಹೇಳಿದ್ದೆನಲ್ಲ !", ಎಂದು ಗಫೂರ ಅವಳು ಹೇಳಿದ್ದನ್ನೇ ವ್ಯಂಗ್ಯವಾಗಿ ಅಣಕಿಸಿದ. "ನೀನು ನಿನ್ನೆ ರಾತ್ರಿ ಹೇಳಿದ್ದು ನನಗೆ ಹ್ಯಾಗೆ ನೆನಪಿರಬೇಕು ?" ತನ್ನ ಧ್ವನಿ ಕೇಳಿ ಸ್ವತಃ ಅವನಿಗೇ ಮತ್ತಷ್ಟು ಸಿಟ್ಟು ಬಂತು. "ಸರಿ, ಸರಿ, ಅಕ್ಕಿ ಇಲ್ಲ !" ಅಂತ ಗೊಣಗಿದ, ಮುಖ ಇನ್ನೂ ಹೆಚ್ಚು ಸಿಂಡರಿಸಿಕೊಂಡು. "ನಿಮ್ಮಪ್ಪನಿಗೆ ಊಟಕ್ಕೆ ಇದ್ದರೂ ಏನು, ಇಲ್ಲದಿದ್ದರೂ ಏನು, ಈ ಮಹಾರಾಣಿಗೆ ಮಾತ್ರ ಮೂರು ಹೊತ್ತಿನ ಊಟ ಬೇಕು ! ಇನ್ನು ಮೇಲೆ ನಾನು ಅಕ್ಕೀನ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿಬಿಡ್ತೀನಿ ಹೊರಗೆ ಹೋಗೋವಾಗ. ಎಲ್ಲಿ, ಸ್ವಲ್ಪ ನೀರು ಕೊಡು ಕುಡೀಲಿಕ್ಕೆ. ವಿಪರೀತ ದಾಹ. ಸಾಯ್ತೀನೇನೋ ಅನ್ನೋ ಹಾಗಿದೆ... ಏನು, ನೀರೂ ಇಲ್ಲವಾ ?" ಎಂದ ಹತಾಶೆಯ ಧ್ವನಿಯಲ್ಲಿ.

ಅಮೀನಾ ಮೊದಲಿನಂತೆ ತಲೆತಗ್ಗಿಸಿ ಸುಮ್ಮನೆ ನಿಂತಿದ್ದಳು. ಮನೆಯಲ್ಲಿ ಒಂದು ಹನಿ ನೀರೂ ಇಲ್ಲ ಎಂಬುದನ್ನು ನೋಡಿ ಅವನ ತಲೆ ಕೆಟ್ಟುಹೋಯಿತು. ಅವಳತ್ತ ನುಗ್ಗಿ ಮುಖಕ್ಕೆ ಫಟಾರ್ ಅಂತ ಬಾರಿಸಿದ. "ದರಿದ್ರ ಹುಡುಗಿ ! ದಿನವಿಡೀ ಏನು ಮಾಡ್ತೀಯ ನೀನು ? ಎಷ್ಟೋ ಜನ ಸಾಯ್ತಾರೆ. ನೀನೂ ಯಾಕೆ ಸಾಯಬಾರದು ?"

ಹುಡುಗಿ ಒಂದು ಮಾತೂ ಆಡಲಿಲ್ಲ. ಖಾಲಿ ಕೊಡವನ್ನು ತೆಗೆದುಕೊಂಡು, ಕಣ್ಣೀರು ಒರೆಸಿಕೊಳ್ಳುತ್ತಾ ಬಿಸಿಲಲ್ಲಿ ಹೊರ ನಡೆದಳು.

ಅವಳು ಆಚೆ ಹೋದ ಕೂಡಲೇ ತಂದೆ ಪಶ್ಚಾತ್ತಾಪ ಪಟ್ಟ. ತಾಯಿಯಿಲ್ಲದ ಆ ತಬ್ಬಲಿ ಹುಡುಗಿಯನ್ನು ಹೇಗೆ ಬೆಳೆಸಿದ್ದ ಎಂಬುದು ಅವನಿಗೆ ಮಾತ್ರ ಗೊತ್ತು. ಕರ್ತವ್ಯನಿಷ್ಠ, ಶಾಂತ ಸ್ವಭಾವದ ಮುದ್ದಿನ ಹುಡುಗಿಯದು ಏನೂ ತಪ್ಪಿಲ್ಲ ಎಂದು ಅವನಿಗೆ ಅರಿವಾಯಿತು. ಅವರ ಅಲ್ಪ ಪ್ರಮಾಣದ ಅಕ್ಕಿಯ ದಾಸ್ತಾನು ಇರುವಾಗಲೂ

ಕೂಡ ಅವರು ಸರಿಯಾಗಿ ಊಟ ಮಾಡಿದ್ದಿಲ್ಲ. ದಿನಕ್ಕೆ ಮೂರು ಹೊತ್ತಿನ ಊಟವಂತೂ ಅಸಾಧ್ಯದ ಮಾತು. ನೀರಿಲ್ಲದಿದ್ದ ಕಾರಣವೂ ಅವನಿಗೆ ಗೊತ್ತಿತ್ತು. ಹಳ್ಳಿಯಲ್ಲಿದ್ದ ಎರಡೋ ಮೂರೋ ನೀರಿನ ತೊಟ್ಟಿಗಳೂ ಬತ್ತಿ ಹೋಗಿದ್ದವು. ಶಿಬು ಬಾಬುವಿನ ಮನೆಯಲ್ಲಿದ್ದ ಖಾಸಗಿ ತೊಟ್ಟಿಯ ನೀರು ಸಾರ್ವಜನಿಕರಿಗಾಗಿ ಅಲ್ಲ. ಬೇರೆ ಒಂದೆರಡು ತೊಟ್ಟಿಗಳಿಗೆ ಕೆಳಗೆ ತೂತು ಕೊರೆದಿದ್ದರೂ ಒಂದು ಬೊಗಸೆ ನೀರಿಗೂ ಜನ ಹಿಂಡು ಹಿಂಡಾಗಿ ಜಮಾಯಿಸುತ್ತಿದ್ದರು. ಆ ನೂಕುನುಗ್ಗಲಿನಲ್ಲಿ ಪಾಪ ಆ ಹುಡುಗಿಯಾದರೂ ಏನು ಮಾಡಿಯಾಳು? ಗಂಟೆಗಟ್ಟಲೆ ನಿಂತು ಬೇಡಿದಾಗ ಯಾರಾದರೂ ಒಂದು ಸ್ವಲ್ಪ ನೀರು ಕೊಟ್ಟರೆ ಅವಳು ಅದನ್ನು ಮನೆಗೆ ತರುತ್ತಿದ್ದಳು. ಇದೆಲ್ಲ ಅವನಿಗೆ ಗೊತ್ತಿತ್ತು. ಬಹುಶಃ ಇವತ್ತು ನೀರೇ ಇಲ್ಲವೇನೋ ಅಥವಾ ಯಾರಿಗೂ ಅವಳಿಗೆ ಕರುಣೆ ತೋರುವ ವ್ಯವಧಾನ ಇದ್ದಿಲ್ಲವೇನೋ. ಹೀಗೇನಾದರೂ ಆಗಿರಬೇಕು, ಎಂಬ ಯೋಚನೆ ಬಂದು ಅವನ ಕಣ್ಣಲ್ಲಿ ನೀರು ಬಂತು.

"ಗಫೂರ, ಒಳಗಿದೀಯಾ?" ಎಂದು ಯಾರೋ ಅಂಗಳದಲ್ಲಿ ನಿಂತು ಕೇಳಿದರು. ಜಮೀನ್ದಾರನ ದೂತ ಬಂದಿದ್ದ.

"ಹ್ಞೂ, ಇದೀನಪ್ಪ . ಯಾಕೆ?" ಎಂದು ಕಟುವಾಗಿ ಉತ್ತರಿಸಿದ.

"ಒಡೆಯರು ನಿನಗೆ ಬರಲಿಕ್ಕೆ ಹೇಳಿ ಕಳ್ಸಿದಾರೆ. ಬಾ, ಹೋಗೋಣ."

"ನಂದು ಇನ್ನೂ ಊಟ ಆಗಿಲ್ಲ. ಆಮೇಲೆ ಬರ್ತೀನಿ ಹೋಗು" ಎಂದ ಗಫೂರ.

ಇಂಥ ಉದ್ಧಟತನವನ್ನು ಆ ಮನುಷ್ಯ ಸಹಿಸಲಾಗಲಿಲ್ಲ. "ನಿನ್ನನ್ನ ಎಳಕೊಂಡು ಬಂದು ಚೆನ್ನಾಗಿ ಬಾರಿಸಲಿಕ್ಕೆ ಹೇಳಿದಾರೆ ಒಡೆಯರು" ಎಂದು ಅವನು ಗರ್ಜಿಸಿ ಅವನನ್ನು ಅವಾಚ್ಯವಾಗಿ ಬೈದ.

ಗಫೂರನಿಗೆ ಈಗ ಎರಡನೆಯ ಸಲ ತಾಳ್ಮೆಗೆಟ್ಟಿತು. ಆ ಮನುಷ್ಯನಿಗೆ ಸರಿಯಾಗಿ ಉತ್ತರ ಕೊಡುವಂತೆ, "ನಾವು ಯಾರ ಗುಲಾಮರೂ ಅಲ್ಲ. ಇಲ್ಲಿ ಇರಲಿಕ್ಕೆ ನಾವು ಗೇಣಿ ಕೊಡ್ತಾ ಇದೀವಿ. ನಾನು ಬರಲ್ಲ ಹೋಗು" ಎಂದು ಹೇಳಿದ.

ಆದರೆ ಈ ಜಗತ್ತಿನಲ್ಲಿ ದೊಡ್ಡ ಮನುಷ್ಯರೆನಿಸಿಕೊಂಡವರಲ್ಲಿ ಬೇಡಿಕೊಳ್ಳುವುದು ವ್ಯರ್ಥವಷ್ಟೆ ಅಲ್ಲ, ಅಪಾಯಕಾರಿ ಕೂಡ. ಅದೃಷ್ಟವಶಾತ್ ಸಣ್ಣ ದನಿ ದೊಡ್ಡ ಕಿವಿಗಳನ್ನು ಮುಟ್ಟುವುದಿಲ್ಲವೆಂದು ಹೇಳಬಹುದು. ಯಾಕೆ ಅಂದರೆ, ಯಾರಿಗೆ ಗೊತ್ತು ಏನಾಗಬಹುದು ಅಂತ? ಜಮೀನ್ದಾರನ ಮನೆಯಿಂದ ವಾಪಸ್ಸು ಬಂದು ಸದ್ದಿಲ್ಲದೆ ಮೌನವಾಗಿ ಕೂತಾಗ ಅವನ ಮುಖ ಮತ್ತು ಕಣ್ಣು ಊದಿಕೊಂಡಿತ್ತು. ಇಷ್ಟೆಲ್ಲ ತೊಂದರೆ ಅನುಭವಿಸಲು ಮಹೇಶನೇ ಮುಖ್ಯ ಕಾರಣನಾಗಿದ್ದ. ಅವತ್ತು ಬೆಳಿಗ್ಗೆ ಗಫೂರ ಮನೆಯಿಂದ ಹೊರಟಾಗ ಮಹೇಶ ತನ್ನನ್ನು ಕಟ್ಟಿಹಾಕಿದ್ದ ಹಗ್ಗವನ್ನು ಹರಿದುಕೊಂಡು, ಜಮೀನ್ದಾರನ ಜಮೀನಿನೆಡೆ ನುಗ್ಗಿ ಹೂವುಗಳನ್ನು ತಿಂದು ಬಿಸಿಲಲ್ಲಿ ಒಣಹಾಕಿದ್ದ ಧಾನ್ಯವನ್ನು ಚೆಲ್ಲಾಪಿಲ್ಲಿ ಮಾಡಿದ್ದ. ಜಮೀನ್ದಾರನ ಮನೆಯ ಆಳುಗಳು ಅದನ್ನು ಹಿಡಿಯಲು ಪ್ರಯತ್ನಿಸಿದಾಗ ಜಮೀನ್ದಾರನ ಕಿರಿಯ ಮಗಳನ್ನು ಗಾಯಗೊಳಿಸಿ ತಪ್ಪಿಸಿಕೊಂಡು ಓಡಿಹೋಗಿದ್ದ. ಈ ತರಹ ಆದದ್ದು ಮೊದಲನೆಯ ಸಲವೇನೂ ಅಲ್ಲ, ಆದರೆ ಗಫೂರ ಬಡವನಾಗಿದ್ದರಿಂದ ಅವನನ್ನು ಕ್ಷಮಿಸಲಾಗಿತ್ತು. ಅವನು ಈ ಸಲವೂ ಕ್ಷಮೆ ಕೇಳಿದ್ದರೆ ಬಹುಶಃ ಅವನು ಕ್ಷಮಿಸಲ್ಪಡುತ್ತಿದ್ದನೋ ಏನೋ, ಆದರೆ ಹಾಗೆ ಮಾಡುವುದರ ಬದಲಾಗಿ ತಾನು ಗೇಣಿ ಕೊಡುತ್ತಿರುವುದಾಗಿಯೂ, ತಾನು ಯಾರ ಗುಲಾಮನೂ ಅಲ್ಲವೆಂದೂ ಹೇಳಿದ್ದ. ಇದು ಜಮೀನುದಾರ ಶಿಬು ಬಾಬುಗೆ ಸಹಿಸಲಸಾಧ್ಯವಾಗಿತ್ತು. ಜಮೀನುದಾರನ ಹೊಡೆತಗಳನ್ನು, ಹಿಂಸೆಯನ್ನು ಪ್ರತಿಭಟನೆ ಇಲ್ಲದೆ ಸಹಿಸಿಕೊಂಡನು. ಹಸಿವು ಮತ್ತು ಬಾಯಾರಿಕೆ ಅವನಿಗೆ ಈಗ ಮರೆತುಹೋಗಿತ್ತು, ಆದರೆ ಅವನ ಒಳಗಿದ್ದ ಹೃದಯವು ಹೊರಗಿದ್ದ ಸೂರ್ಯನಂತೆ ಸುಡುತ್ತಿತ್ತು. ಕಾಲ ಸರಿದದ್ದು ಅವನಿಗೆ ತಿಳಿಯಲಿಲ್ಲ.

ಯಾರೋ ಒಬ್ಬ ಹುಡುಗಿ ನೋವಿನಿಂದ ಕಿರಿಚಿಕೊಂಡಾಗ ಗಫೂರ ನಿದ್ದೆಯಿಂದೆಂಬಂತೆ ಎಚ್ಚರಗೊಂಡ. ಆ ಹುಡುಗಿ ನೆಲದ ಮೇಲೆ ಬಿದ್ದಿದ್ದಳು. ಅವಳು ಹೊತ್ತು ತರುತ್ತಿದ್ದ ಕೊಡ ಕೆಳಗೆ ಉರುಳಿ ಬಿದ್ದಿತ್ತು, ಮತ್ತು ಮಹೇಶ ನೆಲದ ಮೇಲೆ ಚೆಲ್ಲಿದ್ದ ನೀರನ್ನು ಹೀರುತ್ತಿದ್ದ. ಗಫೂರ ಸಿಟ್ಟಿನಿಂದ ಹುಚ್ಚನಂತಾದ. ಒಂದು ಕ್ಷಣವೂ ಕಾಯದೆ ಅವನು ನಿನ್ನೆಯಷ್ಟೆ ರಿಪೇರಿಗೆಂದು ತೆಗೆದಿಟ್ಟಿದ್ದ ಕುಳ ಎತ್ತಿಕೊಂಡು ಎರಡೂ ಕೈಯಿಂದ ಜೋರಾಗಿ ಮಹೇಶನ ತಲೆಗೆ ಹೊಡೆದ. ಒಂದು ಸಲ ಮಾತ್ರ ಮಹೇಶ ತಲೆ ಎತ್ತಲಿಕ್ಕೆ ಪ್ರಯತ್ನಿಸಿತು, ಆದರೆ ತಕ್ಷಣವೇ ಹಸಿವಿನಿಂದ ಬಳಲಿದ್ದ ಅದರ ಕೃಶ ದೇಹ ದೊಪ್ಪನೆ ನೆಲಕ್ಕೆ ಬಿತ್ತು. ಅದರ ಕಿವಿಯಿಂದ ರಕ್ತ ಸೋರತೊಡಗಿತು. ಮೈಯನ್ನು ಒಂದೆರಡು ಸಲ ಕೊಡವಿ, ಕೈಕಾಲು ಜಾಡಿಸಿ ಆ ಪ್ರಾಣಿ ಸತ್ತು ಬಿದ್ದಿತು. "ಇದೇನು ಮಾಡಿದೆ, ಅಪ್ಪ? ನಮ್ಮ ಮಹೇಶ ಸತ್ತುಹೋಯ್ತಲ್ಲ!" ಎಂದು ಅಮೀನಾ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಗಫೂರ ಕದಲಲಿಲ್ಲ, ಮಾತಾಡಲಿಲ್ಲ; ಸುಮ್ಮನೆ ಆ ಸತ್ತ ಪ್ರಾಣಿಯ ಚಲನವಿಲ್ಲದ, ಮಣಿಗಳಂಥ ಎರಡು ಕಣ್ಣುಗಳನ್ನೇ ದಿಟ್ಟಿಸುತ್ತಾ ನಿಂತ.

ಇದಾದ ಎರಡು ಗಂಟೆಯೊಳಗಾಗಿ ಹಳ್ಳಿಯ ಮೂಲೆಯಲ್ಲಿದ್ದ ಚರ್ಮ ಹದಮಾಡುವ ಜನರು ಬಂದು ಮಹೇಶನನ್ನು ಒಂದು ಬಿದಿರು ಬೊಂಬಿನ ಮೇಲೆ ಹೊತ್ತುಕೊಂಡು ಹೋದರು. ಅವರ ಕೈಯಲ್ಲಿದ್ದ ಮಿಂಚುತ್ತಿದ್ದ ಕತ್ತಿಗಳನ್ನು ನೋಡಿ, ನಡುಗಿ, ಗಫೂರ ಕಣ್ಣು ಮುಚ್ಚಿಕೊಂಡ. ಏನೂ ಮಾತಾಡಲಿಲ್ಲ.

ಪವಿತ್ರ ಪ್ರಾಣಿಯೊಂದು ವಧೆಗೀಡಾದ್ದಕ್ಕೆ ಗಫೂರ ಯಾವ ರೀತಿಯ ಪ್ರಾಯಶ್ಚಿತ್ತ ಕೈಗೊಳ್ಳಬೇಕು ಎಂಬುದನ್ನು ತಿಳಿಯಲು ಜಮೀನುದಾರನು ತಾರಕರತ್ನನನ್ನು ಕರೆತರಲು ಕಳಿಸಿದ್ದಾನೆಂದು ಗಫೂರನಿಗೆ ಯಾರೋ ತಿಳಿಸಿದರು.

ಗಫೂರ ಏನೂ ಹೇಳಲಿಲ್ಲ. ಮಂಡಿಯಲ್ಲಿ ಗದ್ದ ಹುದುಗಿಸಿ ಸುಮ್ಮನೆ ಕೂತಿದ್ದ.

"ಅಮೀನಾ ಮರಿ, ಬಾಮ್ಮ ನಾವು ಇಲ್ಲಿಂದ ಹೊರಟುಹೋಗೋಣ", ಎಂದು ಗಫೂರ ತನ್ನ ಮಗಳನ್ನು ಮಧ್ಯ ರಾತ್ರಿ ಎಬ್ಬಿಸಿ ಹೇಳಿದ.

ಅವಳು ಅಂಗಳದಲ್ಲೇ ಮಲಗಿ ನಿದ್ದೆ ಹೋಗಿದ್ದಳು. "ಎಲ್ಲಿಗೆ ಅಪ್ಪ?", ಎಂದು ಕೇಳಿದಳು ಕಣ್ಣುಜ್ಜಿಕೊಳ್ಳುತ್ತಾ.

"ಫುಲ್ ಬೆರೆಗೆ. ಅಲ್ಲಿ ಸೆಣಬಿನ ಕಾರ್ಖಾನೆಯಲ್ಲಿ ಕೆಲಸ ಮಾಡಲಿಕ್ಕೆ." ಎಂದು ತಂದೆ ಮಗಳಿಗೆ ಹೇಳಿದ.

ಆ ಹುಡುಗಿ ಅಚ್ಚರಿಯಿಂದ ಅವನೆಡೆ ನೋಡಿದಳು. ಹಿಂದೆ, ಎಷ್ಟೋ ಕಷ್ಟ ಒದಗಿಬಂದಿದ್ದರೂ ಅವನು ಫುಲ್ ಬೆರೆಗೆ ಹೋಗಲು ನಿರಾಕರಿಸಿದ್ದ. "ಅಲ್ಲಿ ಧರ್ಮವಿಲ್ಲ, ಮರ್ಯಾದೆಯಿಲ್ಲ, ಹೆಣ್ಣುಮಕ್ಕಳಿಗೆ ಯಾವ ಮರೆಯೂ ಇಲ್ಲ" ಎಂದು ಅವನು ಅನೇಕ ಸಲ ಹೇಳಿದ್ದನ್ನು ಆಕೆ ಕೇಳಿದ್ದಳು.

"ನಡಿಯಮ್ಮ ಬೇಗ, ನಾವು ಬಹಳ ದೂರ ಹೋಗಬೇಕು," ಎಂದ ಗಫೂರ.

ಅಮೀನಾ ಕುಡಿಯುವ ನೀರಿನ ಪಾತ್ರೆ ಮತ್ತು ತಂದೆಯ ಊಟದ ಹಿತ್ತಾಳೆ ತಟ್ಟೆ ಎತ್ತಿಕೊಳ್ಳಲು ಹೊರಟಿದ್ದಳು, ಆದರೆ ಗಫೂರ ಹೇಳಿದ: "ಅವನ್ನ ಅಲ್ಲೇ ಬಿಡಮ್ಮ. ಅವು ಮಹೇಶನ ಸಾವಿಗೆ ನನ್ನ ಪಾಪ ಪರಿಹಾರದ ಕಾಣಿಕೆಯಾಗಿರಲು ಬರುತ್ತೆ."

ನಟ್ಟಿರುಳಿನಲ್ಲಿ ಗಫೂರ ತನ್ನ ಮಗಳ ಕೈ ಹಿಡಿದುಕೊಂಡು ಹೊರ ನಡೆದ. ಈಗ ಈ ಹಳ್ಳಿಯಲ್ಲಿ ತನ್ನವರೆಂದು ಹೇಳಿಕೊಳ್ಳುವಂಥವರ್‍ಯಾರೂ ಇರಲಿಲ್ಲ. ಅವನು ಯಾರಿಗೂ ಏನೂ ಹೇಳುವಂಥದ್ದೂ ಇರಲಿಲ್ಲ. ಅಂಗಳದಿಂದ ಹೊರ ಹೊರಟು ಜಾಲಿ ಮರದ ಹತ್ತಿರಕ್ಕೆ ಬಂದಾಗ ಒಮ್ಮೆಲೆ ನಿಂತು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಮುಖವನ್ನು ಮೇಲೆತ್ತಿ ನಕ್ಷತ್ರರಂಜಿತ ಕಪ್ಪು ಆಕಾಶದೆಡೆ ನೋಡುತ್ತಾ, "ಅಲ್ಲಾ, ನನಗೆ ಎಷ್ಟು ಬೇಕಾದರೂ ಶಿಕ್ಷೆ ನೀಡು. ಮಹೇಶ ನೀರಡಿಕೆಯಿಂದ ಸತ್ತುಹೋಯಿತು. ಅದು ಮೇಯಲು ಯಾರೂ ತಮ್ಮ ಒಂದು ಚೂರು ಜಮೀನನ್ನೂ ಬಿಟ್ಟುಕೊಡಲಿಲ್ಲ. ಆ ಜಮೀನ್ದಾರನ ಪಾಪವನ್ನು ಮನ್ನಿಸಬೇಡ. ಏಕೆಂದರೆ ನೀನು ನಮಗೆ ಅನುಗ್ರಹಿಸಿರುವ ಒಂದು ಹನಿ ನೀರನ್ನಾಗಲೀ ಒಂದು ಚೂರು ಹುಲ್ಲನ್ನಾಗಲೀ ಅವನು ಆ ಪ್ರಾಣಿಗೆ ಕೊಡಲಿಲ್ಲ," ಎಂದ. ಅವರು ಸೆಣಬಿನ ಕಾರ್ಖಾನೆಯತ್ತ ಹೆಜ್ಜೆ ಹಾಕಿದರು.

---

ಬಂಗಾಳಿ ಮೂಲ : **ಶರತ್‌ಚಂದ್ರ ಚಟರ್ಜಿ**
ಕನ್ನಡಕ್ಕೆ: **ಶ್ರೀನಿವಾಸ್ ವಿ. ಸುತ್ರಾವೆ**
ನಂ. ೭೩, ಮಹಡಿ, 'ಶ್ರೀ ಲಕ್ಷ್ಮಿ ವೆಂಕಟೇಶ್ವರ ನಿಲಯ'
ಎಸ್. ನಿಜಲಿಂಗಪ್ಪ ಬಡಾವಣೆ, ದಾವಣಗೆರೆ - ೫೭೭ ೦೦೪

## ತಾರತಮ್ಯ

ಬಡವ–ಬಲ್ಲಿದ
ದಡ್ಡ – ವಿದ್ವಾಂಸ
ಮೃತ್ಯುವಿಗಿಲ್ಲ
ಎಂದಿಗೂ
ತಾರತಮ್ಯ !!

**ಶೋಭಾ ಪ್ರಮೋದ್**
ಮನ್‌ಗಾಂವ್ ಅಂಚೆ – ೪೦೨೧೦೪
ರಾಯ್‌ಗಡ್ ಜಿಲ್ಲೆ. ಮಹಾರಾಷ್ಟ್ರ

# ರಾಜಮಾರ್ಗದಲ್ಲೊಂದು ಪಯಣ

## ಸಾ(ರ)ಥಿಯ ಪ್ರಶ್ನೆಗಳೊಂದಿಗೆ...

**ಡಾ॥ ಎಚ್. ಎಸ್. ಅನುಪಮಾ**

ಈಗ ಪ್ರವಾಸ ಕಷ್ಟವಲ್ಲ : ಕೈಯಲ್ಲಷ್ಟು ದುಡ್ಡು, ಕುತೂಹಲ, ಒಂಟಿಯೆನಿಸದಂತೆ ಜೊತೆಗೊಬ್ಬರು ಇದ್ದರೆ ಎಲ್ಲಿಗಾದರೂ ಹೋಗಿಬರಬಹುದು. ಆದರೆ ಹಾಗೆ ಹೋದಾಗ ಅಪರಿಚಿತ ಸ್ಥಳಗಳಲ್ಲಿ ಸಾಥಿಯಾಗಿ ಸಿಗುವ ಕೆಲವರು ಬದುಕೆಂಬ ಅಚ್ಚರಿಯನ್ನು ನಮ್ಮೊಳಗೆ ತುಂಬುತ್ತಾರೆ. ನಮ್ಮ ಇತ್ತೀಚಿನ ದೆಹಲಿ–ಆಗ್ರಾ–ರಾಜಸ್ಥಾನ ಪ್ರವಾಸದಲ್ಲಿ ಜೊತೆಯಾದ ಡ್ರೈವರ್ ಅನಿಲ್ ಒಂದು ವಾರ, ಸಾವಿರ ಕಿಲೋಮೀಟರಿಗಿಂತ ಹೆಚ್ಚು ದೂರ ನಮ್ಮೊಡನೆ ಕ್ರಮಿಸಿದರು. ಅನಿಲ್ ತಿಳುವಳಿಕೆಯುಳ್ಳ, ಪ್ರಾಮಾಣಿಕ, ಮಿತಭಾಷಿ ಮನುಷ್ಯ. ಅವರ ನಡೆನುಡಿಗಳೇ ಅವರ ವ್ಯಕ್ತಿತ್ವಕ್ಕೊಂದು ಗಾಂಭೀರ್ಯ ಕೊಟ್ಟಿದ್ದವು. ೨೦ ವರ್ಷಗಳಿಂದ ಟ್ರಾವೆಲ್ ಏಜೆನ್ಸಿಯಲ್ಲಿ ಕೆಲಸ ಮಾಡುತ್ತಿರುವ ಅವರು ಬಲುಬೇಗ ನಮ್ಮ ಆದ್ಯತೆ, ಅಪೇಕ್ಷೆಗಳನ್ನು ಗುರುತಿಸಿ ಸಂದುಗೊಂದು ಮೂಲೆಗಳ ಫೋಟೋ ತೆಗೆಯಲು ಅನುವುಮಾಡಿಕೊಟ್ಟಿದ್ದರು. ವರ್ತಮಾನದ ಕುರಿತು ತಮ್ಮ ಅನಿಸಿಕೆಯನ್ನು ಹಂಚಿಕೊಳ್ಳುತ್ತ ತಾವು ಆಮ್‌ಆದ್ಮಿ ಪಕ್ಷವನ್ನು ಬೆಂಬಲಿಸಿದ್ದಾಗಿ ಹೇಳಿದರು. ಅವರ ಪ್ರಕಾರ ದೆಹಲಿಯಲ್ಲಿ ಏನಾದರೂ ಬದಲಾವಣೆ ತರುವುದಾದರೆ ಅದು ಆಮ್‌ಆದ್ಮಿ ಪಕ್ಷಕ್ಕೆ ಮಾತ್ರ ಸಾಧ್ಯವಿತ್ತು. 'ಆದರೆ ಏನು ಮಾಡುವುದು ? ಹಾಗಾಗಿ ಹೋಯಿತು.'

**(ನಿಮ್ಮೊಂದಿಗೆ) ಆ ಸಾರಥಿಯೊಂದಿಗಿನ ಪ್ರವಾಸದ ಒಂದು ತುಂಡು ಅನುಭವ :**

ದೆಹಲಿಯ ನಾಲ್ಕೂ ದಿಕ್ಕಿನಲ್ಲಿ ಮುಘಲ್ ಕಾಲದ ಗಡಿಗುರುತು ಎಂದು ಗಡಿ ಸೂಚಿಸುವ ಕಲ್ಲುಕಂಬಗಳಿವೆ. ಅಂಥದೊಂದು ನಮಗೆದುರಾಗಿ ದೆಹಲಿ ಹೊರವಲಯಕ್ಕೆ ಬಂದೆವೆಂದು ಹೇಳಿತು. ಅನಿಲ್ ಸೀಳುದಾರಿಯಲ್ಲಿ ವಾಹನ ನಿಲ್ಲಿಸಿ, 'ಆಗ್ರಾಗೆ ಹೋಗಲು ನಮ್ಮೆದುರು ಎರಡು ಆಯ್ಕೆಗಳಿವೆ : ಮೊದಲನೆಯದು, ಹಳೆಯ ದೆಹಲಿ–ಆಗ್ರಾ ರಸ್ತೆ. ಈ ಹೊತ್ತು ಸರಿಸುಮಾರು ಐದು ಘಂಟೆ ಬೇಕು. ಎರಡನೆಯದು, ಯಮುನಾ ಎಕ್ಸ್‌ಪ್ರೆಸ್ ವೇ. ದೇಶದಲ್ಲೇ ನಂಬರ್ ವನ್. ಸ್ವಲ್ಪ ತುಟ್ಟಿ, ಆದರೆ ಎರಡು ತಾಸಿನಲ್ಲಿ ಹೋಗಬಹುದು. ಯಾವುದರಲ್ಲಿ ಹೋಗುವ ?' ಎಂದರು. ದೇಶದಲ್ಲೇ ಅಂಥ ಹೈವೇ ಇಲ್ಲ ಎನ್ನುತ್ತಾರಲ್ಲ, ನೋಡೇಬಿಡುವ ಎಂದು ಯಮುನಾ ಎಕ್ಸ್‌ಪ್ರೆಸ್ ವೇ ದಾರಿ ಹಿಡಿದೆವು.

ನೋಯ್ಡಾ ದಾಟಿತು. ಗ್ರೇಟರ್ ನೋಯ್ಡಾ ಬಂದಿತು. ಅಲ್ಲಿ ಬಡಾವಣೆಗಳನ್ನು ನಮ್ಮ ಮಲ್ಲೇಶ್ವರ, ಗಾಂಧಿನಗರ, ಜಯನಗರ, ಜೆಪಿ ನಗರ ಮುಂತಾದ ನಾಮಪದಗಳ ಬದಲಾಗಿ ಸೆಕ್ಟರುಗಳೆಂದು ಸಂಖ್ಯೆಯಿಂದ ಗುರುತಿಸಲಾಗಿದೆ. ಆ ಜಾಗ ಮೊದಲು ಹೇಗಿತ್ತು ಎಂದು ತಿಳಿಸುವ ಪಳೆಯುಳಿಕೆಗಳ ನಡುವೆಯೇ ಇನ್ನು ಒಂದು ವರ್ಷದ ನಂತರ ಹೇಗಾದೀತು ಎಂದು ಊಹಿಸಿಕೊಳ್ಳಲು ಹೋರ್ಡಿಂಗುಗಳು ನೆರವಾಗುತ್ತವೆ.

ರಣರಣ ಬಿಸಿಲಿನಲ್ಲಿ ಹೊಳೆಯುತ್ತಿದ್ದ, ಎರಡೂ ಕಡೆ ೬+೨ ಲೇನುಗಳಿರುವ ದೋ..ಡ್ಡ ಹೆದ್ದಾರಿ ಯಮುನಾ ಎಕ್ಸ್‌ಪ್ರೆಸ್ ವೇ. ಕಾರಲ್ಲಿ ಕೂತಿದ್ದೇವೋ, ಕೋಣೆಯ ಕುರ್ಚಿಯಲ್ಲಿ ಕೂತಿದ್ದೇವೋ ಎಂಬುದು ಗೊತ್ತಾಗದಂತೆ ಕುಡಿದ ನೀರು ಅಲುಗದಂತೆ ದಾರಿ ಸವೆಯುತ್ತಿತ್ತು. ಒಂದು ತಿರುವಿಲ್ಲ, ಸೈಡ್ ಕೊಡಲು ಆಚೀಚೆ ಹೋಗುವ ಕೆಲಸವಿಲ್ಲ. ಮುಂದೆ ಬರುವವ ತಾಗಿಸಿಯಾನೆಂಬ ಆತಂಕವಿಲ್ಲ. ಹೊಂಡ ಬಂದೀತೋ, ಗುಂಡಿಯೋ ಎಂಬ ಚಿಂತೆಯಿಲ್ಲ. ಓವರ್‌ಟೇಕ್ ಮಾಡಬೇಕೆಂದರೆ ಪೂರ್ತಾ ಬಲಗಡೆಗೆ ಹೋಗಬೇಕು. ಇಲ್ಲದಿದ್ದರೆ ಒಂದು ಲೇನ್ ಹಿಡಿದರೆ ಮುಗಿಯಿತು, ನೇರ ಅಂದರೆ ನೇರ. ವೇಗ ಗಂಟೆಗೆ ೧೦೦ ಕಿ.ಮೀ. ಮೀರಬಾರದು ಎನ್ನುವುದನ್ನು ಬಿಟ್ಟರೆ ಡ್ರೈವರ್ ನಿದ್ದೆ ಮಾಡಿದರೂ ಗಾಡಿ ತಾನೇ ಹೋದೀತು. ಇಂಥ ರಸ್ತೆಯಲ್ಲಿ ಸೆಲ್ಫ್ ಡ್ರೈವ್ ವೆಹಿಕಲ್ ತರಬಹುದು ಎಂದು ನಾಳಿನ ತಂತ್ರಜ್ಞಾನ ಕುರಿತು ಮಗಳು ಹೇಳತೊಡಗಿದಳು.

ಅಮ್ಯೂಸ್‌ಮೆಂಟ್ ಪಾರ್ಕ್, ಅಪಾರ್ಟ್‌ಮೆಂಟ್, ಶೈಕ್ಷಣಿಕ ಸಂಘಸಂಸ್ಥೆಗಳು, ಕೈಗಾರಿಕೆ, ವ್ಯಾಪಾರೋದ್ಯಮಗಳನ್ನು ಎರಡೂ ಕಡೆ ಅಭಿವೃದ್ಧಿಪಡಿಸುವುದು ತಮ್ಮ ಗುರಿಯೆಂದು ಅಭಿವೃದ್ಧಿ ಪ್ರಾಧಿಕಾರದ ಬೋರ್ಡುಗಳು ಸಾರಿ ಹೇಳುತ್ತಿದ್ದವು. ೨೦೧೦ರಲ್ಲಿ ಶುರುವಾದ ಮಹಾಮಾಯಾ ಟೆಕ್ನಿಕಲ್ ವಿಶ್ವವಿದ್ಯಾಲಯ, ಗೋಲ್ಗೊತಿಯಾ ಖಾಸಗಿ ವಿಶ್ವವಿದ್ಯಾಲಯಗಳ ಕ್ಯಾಂಪಸ್ ಹಾದುಹೋದವು. ಭಾರತದ ಏಕೈಕ ಗ್ರ್ಯಾನ್ ಪ್ರೀ ಫಾರ್ಮುಲಾ ರೇಸ್ ಟ್ರ್ಯಾಕ್ ಇರುವ ಮೈದಾನ ವಿಸ್ತಾರ ಜಾಗದಲ್ಲಿ ಹರಡಿಕೊಂಡಿತ್ತು. ನಂತರ ಸ್ಪೋರ್ಟ್ಸ್ ಸಿಟಿ, ಗಾಲ್ಫ್ ಕೋರ್ಸ್, ಅಸಂಖ್ಯ ಬಹುಮಹಡಿ ಫ್ಲ್ಯಾಟುಗಳ ಕಾಡು, ಕಾಲೇಜುಗಳು, ಸಂಶೋಧನಾ ಕೇಂದ್ರಗಳು, ವಿಮಾನ ನಿಲ್ದಾಣ... ಇಕ್ಕೆಲಗಳಲ್ಲಿ ಏನುಂಟು ? ಏನಿಲ್ಲ ! ಅಷ್ಟು ಕಟ್ಟಡ ಕೆಲಸಕ್ಕೆ ಬೇಕಾದ ಇಟ್ಟಿಗೆಯಾಗಿ ಸಾವಿರಾರು ಎಕರೆ ಹೊಲಗಳ ಮೇಲ್ಪದರಿಯ ಫಲವತ್ತಾದ ಮಣ್ಣು, ಅಕಾ, ಅಷ್ಟು ದೂರದಲ್ಲಿ ನೂರಾರು ಭಟ್ಟಿಗಳಲ್ಲಿ ಹೊಗೆಯುಗುಳುತ್ತ ಸುಟ್ಟುಕೊಳ್ಳುತ್ತಿದ್ದವು.

ರಸ್ತೆಯೇನೋ ಅತ್ಯದ್ಭುತವಾಗಿತ್ತು. ಆದರೆ ವಾಹನಗಳೇ ಇಲ್ಲ. ಹೈವೇ ಎಂದ ಮೇಲೆ ಟ್ರಾಫಿಕ್ ಇರಬೇಕಲ್ಲವೆ ? ಆದರೆ ಅಲ್ಲೊಂದು ಇಲ್ಲೊಂದು ವಾಹನ, ಅದೂ ಕಾರುಗಳಷ್ಟೇ ಕಂಡವು. ಟ್ರಕ್ ಮತ್ತು ಭಾರೀ ವಾಹನಗಳಂತೂ ಇಲ್ಲವೆನ್ನುವಷ್ಟು ಕಡಿಮೆ. ಆಚೀಚೆ ಭಣಭಣ. ಜನರಿಲ್ಲ, ಅಂಗಡಿ ಹೋಟೆಲು ಗಳಿಲ್ಲ, ಪ್ರಾಣಿಗಳಿಲ್ಲ, ಊರುಗಳಿಲ್ಲ. ಹೈವೇಗಳ ಮೇಲೆ ಸಾಮಾನ್ಯವಾಗಿ ಕಾಣುವ ಢಾಬಾಗಳೂ ಕಾಣಿಸಲಿಲ್ಲ. ಅಂತೂ ಹೈವೇ ಪಕ್ಕ ಒಂದು ಪಾಶ್ 'ಸುವಿಧಾ' ಕಾಣಿಸಿ ಅತ್ತ ಹೊರಟೆವು.

ಅಲಿಘರ್, ಮಥುರಾ ಮತ್ತಿತರ ಊರುಗಳ ಹೊರಹೊರಗೇ ಈ ರಸ್ತೆ ಹಾರಿಕೊಂಡು ಹೋಗುತ್ತದೆ. ಮೊದಲೆಲ್ಲ ಎಷ್ಟು ಹೆಚ್ಚಾದರೆ ಅಷ್ಟು ಊರುಗಳನ್ನು ಜೋಡಿಸಲು ರಸ್ತೆ ಮಾಡುತ್ತಿದ್ದರು. ಒಂದು ಹೈವೇ ಹಾದುಹೋಯಿತು ಎಂದರೆ ಊರಿನ ಲಕ್ಷಣ, ಭೂಮಿಯ ದರ ಎಲ್ಲ ಬದಲಾಗುತ್ತಿತ್ತು. ಆದರೆ ಊರೊಳಗೆ ಹಾದುಹೋಗದ ಇಂಥ ರಸ್ತೆಗಳಿಂದ ಆ ಊರವರಿಗೇನು ಲಾಭವಿದೆ ?

ನಮಗೆ ಹೀಗೆನಿಸುವ ಹೊತ್ತಿಗೆ ಒಂದೆಡೆ ರಸ್ತೆಯ ಅಂಚಿನಲ್ಲಿ ಜನಸಂದಣಿ ಕಾಣಿಸಿತು. ಬಾವುಟಗಳೂ, ಪಟಗಳೂ ಹಾರುತ್ತಿರುವುದರಿಂದ ದರ್ಗಾವೋ, ಗದ್ದಿಗೆಯೋ ಇರಬೇಕೆಂದುಕೊಂಡೆವು. ನಮ್ಮ ಊಹೆಗೆ ಅನಿಲ್ ನಕ್ಕರು. ಅದೊಂದು ಅಪಘಾತ ನಡೆದ ಸ್ಥಳ. ಅಪಘಾತವಾದ ಬೈಕ್ ಅಲ್ಲಿ ದೇವರ ರೂಪದಲ್ಲಿದೆ. ದಿನಾ ಬೈಕಿಗೆ ಪೂಜೆ ನಡೆಯುತ್ತದೆ. ಬೈಕ್ ಹಾಗೂ ಅಪಘಾತದಲ್ಲಿ ಅಲ್ಲೇ ಸತ್ತ ಅದರ ಸವಾರನ ಮಹಿಮೆ ಎಂಥದೆಂದರೆ ಅಲ್ಲಿ ಪವಾಡಗಳು ಜರುಗಿವೆ. ಹಲವು ಘೋರ ದುರಂತಗಳು ತಪ್ಪಿವೆ. ಸತ್ತವರು ಬದುಕಿದ್ದಾರೆ. ಜಖಂ ಆದ ವಾಹನಗಳು ತಾವೇ ಚಲಿಸಿ ಸವಾರನನ್ನು ಆಸ್ಪತ್ರೆಗೆ ಒಯ್ದಿವೆ ! ಎಂದೇ ಜನ ಹರಕೆ ಹೊತ್ತು, ಹೊಸ ವಾಹನ ಕೊಂಡು ಅಲ್ಲಿ ಬರುತ್ತಾರೆ – ಎಂದು ವಿವರಿಸಿದರು.

ಇನ್‌ಕ್ರೆಡಿಬಲ್ ಇಂಡಿಯಾ !

**ಯಮುನಾ ಎಕ್ಸ್‌ಪ್ರೆಸ್ ವೇ**

ದೆಹಲಿ ಮತ್ತು ಆಗ್ರಾಗಳ ನಡುವಿನ ೧೬೫ ಕಿಲೋಮೀಟರ್ ಉದ್ದದ ಯಮುನಾ ಎಕ್ಸ್‌ಪ್ರೆಸ್ ವೇ ದೇಶದಲ್ಲೇ ಅತಿ ಉದ್ದದ ಆರು ಲೇನ್‌ಗಳ ನಿಯಂತ್ರಿತ ಎಕ್ಸ್‌ಪ್ರೆಸ್ ವೇ. ಇದು ಅತಿಬಳಕೆ, ದುರ್ಬಳಕೆಯಿಂದ ಕೃಶಳಾದ ಯಮುನಾ ನದಿಯ ಪೂರ್ವ ದಂಡೆಯಲ್ಲಿದೆ. ಹಳೆಯ ಗ್ರಾಂಡ್‌ಟ್ರಂಕ್ ರಸ್ತೆ (ಎನ್‌ಎಚ್. ೯೧) ಹಾಗೂ ಎನ್‌ಎಚ್–೨ರಲ್ಲಿ ವಾಹನ ದಟ್ಟಣೆ ಕಡಿಮೆ ಮಾಡಲು ೨೦೦೧ರಲ್ಲಿ ಉತ್ತರ ಪ್ರದೇಶದ ಮುಖ್ಯಮಂತ್ರಿ ರಾಜನಾಥ್ ಸಿಂಗ್ 'ತಾಜ್ ಎಕ್ಸ್‌ಪ್ರೆಸ್ ವೇ' ಯೋಜನೆ ರೂಪಿಸಿದರು. ಆದರೆ ಸರ್ಕಾರ ಬದಲಾಗಿದ್ದರಿಂದ ಯೋಜನೆ ನೆನೆಗುದಿಗೆ ಬಿದ್ದಿತ್ತು. ಮಾಯಾವತಿ ಮುಖ್ಯಮಂತ್ರಿ ಯಾದಾಗ ಅದಕ್ಕೆ 'ಯಮುನಾ ಎಕ್ಸ್‌ಪ್ರೆಸ್ ವೇ' ಎಂದು ಮರುನಾಮಕರಣ ಮಾಡಿ ೨೦೦೭ರಲ್ಲಿ ನಿರ್ಮಾಣ ಶುರುವಾಯಿತು. ೨೦೧೨ ಆಗಸ್ಟ್‌ನಲ್ಲಿ ಪೂರ್ಣಗೊಂಡಿತು.




ಗೌತಮ ಬುದ್ಧ ನಗರ, ಬುಲಂದ ಶಹರ್, ಅಲಿಘರ್, ಹಾತ್ರಾಸ್, ಮಥುರಾ, ಆಗ್ರಾ ಜಿಲ್ಲೆಗಳ ೧೧೮೭ ಹಳ್ಳಿಗಳು ಯಮುನಾ ಎಕ್ಸ್‌ಪ್ರೆಸ್ ವೇಗೆ ಭೂಮಿ ಬಿಟ್ಟುಕೊಟ್ಟಿವೆ. ದೆಹಲಿ–ಆಗ್ರಾ ನಡುವಿನ ಪ್ರಯಾಣ ಸಮಯವನ್ನು ೪ ತಾಸಿನಿಂದ ೧೦೦ ನಿಮಿಷಗಳಿಗಿಳಿಸುವ ಮಹತ್ವಾಕಾಂಕ್ಷೆಯಿಂದ ಇದು ರೂಪುಗೊಂಡಿದ್ದು ಜೇಪೀ ಗ್ರೂಪ್ ಎಂಬ ಕಂಪನಿ ಬಂಡವಾಳ ಹಾಕಿದೆ. ಈ ಹೈವೇ ದೀರ್ಘಕಾಲ ಬಾಳಿಕೆ ಬರುವ ಸಿಮೆಂಟ್ ಕಾಂಕ್ರೀಟ್‌ನಿಂದ ಮಾಡಲ್ಪಟ್ಟಿದೆ. ೩೫ ಅಂಡರ್‌ಪಾಸ್ ಹಾಗೂ ೫ ಟೋಲ್‌ಗೇಟ್‌ಗಳಿದ್ದು ಪೂರ್ತಿ ಬಲಗಡೆಯ ಲೇನಿನಲ್ಲಷ್ಟೇ ಓವರ್‌ಟೇಕ್ ಮಾಡಬೇಕು. ಅಪಘಾತ ಮತ್ತು ಮಿತಿಮೀರಿದ ವೇಗ ತಡೆಗಟ್ಟಲು ಪ್ರತಿ ಐದು ಕಿ.ಮೀ.ಗೊಂದು ಸಿಸಿಟಿವಿಯನ್ನು ಅಳವಡಿಸಲಾಗಿದ್ದು ಅಲ್ಲಲ್ಲಿ ಗಸ್ತು ವಾಹನಗಳು ಕಾಣುತ್ತವೆ.

ನಾವು ನೋಡಿದಾಗ ವಾಹನಗಳು ತುಂಬ ವಿರಳವಾಗಿ ಕಂಡುಬಂದರೂ ಪ್ರತಿದಿನ ಒಂದು ಲಕ್ಷ ವಾಹನಗಳು ಈ ರಸ್ತೆ ಬಳಸಬಹುದೆಂದು ಅಂದಾಜು ಮಾಡಲಾಗಿದೆ. ಸಾವಿರಾರು ಕಿ.ಮೀ. ಚಲಿಸ ಬೇಕಾದವರಿಗೆ ಇಲ್ಲಿ ತೆರಬೇಕಾಗಿರುವ ಸುಂಕ ತುಟ್ಟಿ ಎನ್ನುವುದೇ ಕಡಿಮೆ ವಾಹನಗಳು ಓಡಾಡಲು ಕಾರಣ ಎಂದರು ಅನಿಲ್. ಅಲ್ಲಿನ ಸುಂಕ ದರ ಹೀಗಿದೆ :

ಅಲಿಘರ್, ಮಥುರಾ, ಆಗ್ರಾ ಎಂದು ದೂರವನ್ನು ಮೂರು ಭಾಗವಾಗಿಸಿಕೊಂಡು ಸುಂಕ ವಿಧಿಸ ಲಾಗುತ್ತದೆ. ದೆಹಲಿ–ಆಗ್ರಾ ನಡುವೆ ಒಮ್ಮೆ ಹೋಗಲು ವಿಧಿಸುವ ಶುಲ್ಕ ಹೀಗಿದೆ :

| | | |
|---|---|---|
| ದ್ವಿಚಕ್ರ ವಾಹನಗಳಿಗೆ | – | ೧೫೦ ರೂ. |
| ಕಾರ್/ಜೀಪ್/ವ್ಯಾನ್ | – | ೩೨೦ ರೂ. |
| ಮಿನಿ ಬಸ್/ಲಾರಿ | – | ೫೦೦ ರೂ. |
| ಬಸ್/ಟ್ರಕ್ | – | ೧೦೫೦ ರೂ. |
| ಮಲ್ಟಿ ಆಕ್ಸೆಲ್ ವಾಹನ | – | ೧೬೦೦ ರೂ. |
| ಏಳಕ್ಕಿಂತ ಹೆಚ್ಚು ಆಕ್ಸೆಲ್ ಇರುವ ವಾಹನ | – | ೨೧೦೦ ರೂ. |

ಮರಳಿ ೨೪ ತಾಸಿನಲ್ಲಿ ಬರುವುದಾದರೆ ಒಂದೂವರೆ ಪಟ್ಟು ಶುಲ್ಕ ಕೊಡಬೇಕು. ತಿಂಗಳಿಗೆ ೧೯ಕ್ಕಿಂತ ಹೆಚ್ಚು ಸಲ (ಹತ್ತೊಂಭತ್ತೇ ಏಕೆ ?) ಬಳಸುವ ವಾಹನಗಳಿಗೆ ವಿಶೇಷ ರಿಯಾಯ್ತಿ ! ಅಂದಹಾಗೆ ೧೬೫ ಕಿಲೋಮೀಟರು ದೂರದ ಎಕ್ಸ್‌ಪ್ರೆಸ್ ವೇ ನಿರ್ಮಾಣಕ್ಕೆ ತಗುಲಿದ ವೆಚ್ಚ ೧೨,೮೪೦ ಕೋಟಿ ರೂಪಾಯಿ ! ೨೦೧೪, ಜೂನ್ ೨೦ಕ್ಕೆ ಮಂಡಿಸಿದ ಉತ್ತರಪ್ರದೇಶ ರಾಜ್ಯದ ಒಟ್ಟೂ ಆಯವ್ಯಯದ ಕೊರತೆ ೪,೫೭೦ ಕೋಟಿ ರೂಪಾಯಿ.

✶ ✶ ✶

ನಿವೃತ್ತಿ ಅನಿವಾರ್ಯವಾಗುವ ತನಕ ಡ್ರೈವಿಂಗ್ ನಿಂದಲೇ ಬದುಕು ನಡೆಸಬೇಕಾದ ಅನಿಲ್ ತನ್ನಿಬ್ಬರು ಮಕ್ಕಳನ್ನು ಹೇಗಾದರೂ ಓದಿಸಿ ಈ ಕೆಲಸ ಬಿಟ್ಟು ಬೇರೆ ಕೆಲಸಕ್ಕೆ ಹಚ್ಚುವುದಾಗಿ ಹೇಳಿದರು. ಮನೆ ಬಿಟ್ಟು ಹೊರಟವರು ವಾಪಸು ಬರುವುದೇ ಖಾತ್ರಿಯಿರದ ಈ ಕೆಲಸ ಮಕ್ಕಳಿಗೆ ಬೇಡ ಎನ್ನುವುದು ಅವರ ನಿಲುವು. ತಮ್ಮ ವೃತ್ತಿಬಾಂಧವರ, ಅದರಲ್ಲೂ ಟ್ರಕ್ ಡ್ರೈವರ್ ಗೆಳೆಯರ ಕುರಿತು ಅವರ ಮಾತು ತಿರುಗಿತು.

ಭಾರತದ ಅಜಮಾಸು ೪೮ ಲಕ್ಷ ಟ್ರಕ್ ಡ್ರೈವರುಗಳ ಬದುಕಿನತ್ತ ಕಣ್ಣುಹಾಯಿಸಿದರೆ ನಮ್ಮ ಆರ್ಥಿಕತೆಯ ಬೆನ್ನೆಲುಬಾದ ಅವರ ಜೀವನ ಹೇಗಿದೆಯೆಂದು ತಿಳಿಯುತ್ತದೆ. ದೇಶವೆಂಬ ವಾಹನದ ಚಕ್ರ ಚಲಿಸಲು ಎಷ್ಟೋ ಲಕ್ಷಾಂತರ ಜೀವಗಳು ಬದುಕಿನ ಬೆಲೆ ತೆರುತ್ತಿದ್ದಾರೆಂದು ಗೊತ್ತಾಗುತ್ತದೆ. ಜೀವಮಾನವಿಡೀ ದೂರದೂರದ ರಾಜ್ಯ–ಊರುಗಳಿಗೆ ಸಾಮಾನು ಸಾಗಿಸುವ ಟ್ರಕ್ ಡ್ರೈವರು/ಕ್ಲೀನರುಗಳದ್ದು ಕಡಿಮೆ ಸಂಬಳಕ್ಕೆ ಅತಿ ಅಪಾಯಕಾರಿ ಮತ್ತು ಏಕತಾನತೆಯ ಕೆಲಸ. ಕೆಲವೊಮ್ಮೆ ೧೫–೨೦ ದಿನ ರಸ್ತೆ ಮೇಲೆಯೇ ಇರಬೇಕಾಗುತ್ತದೆ. ಲೋಡ್ ಇಳಿಸಿದ ಕೂಡಲೇ ಮತ್ತೆ ಯಜಮಾನ ಹೇಳಿದಲ್ಲಿಗೆ ಹೊರಡಲು ಸಿದ್ಧವಾಗಬೇಕು. ವಾರಗಟ್ಟಲೆ ಮನೆ–ಹೆಂಡತಿ–ಮಕ್ಕಳಿಂದ ದೂರ ಉಳಿಯಬೇಕು. ಮನರಂಜನೆ, ವಿರಾಮಗಳಿಲ್ಲದೆ ದಿನರಾತ್ರಿ ಚಲಿಸಬೇಕು. ರಸ್ತೆ ಬದಿಯಿರುವ ಢಾಬಾಗಳಲ್ಲೇ ಊಟ, ನಿದ್ದೆ, ಸ್ನಾನ ಎಲ್ಲ ಮುಗಿಸಬೇಕು. ಬೇಸಿಗೆಯಲ್ಲಿ ಎ.ಸಿ. ಇಲ್ಲದ ಕ್ಯಾಬಿನ್ನಿನಲ್ಲಿ ಬಿಸಿಗಾಳಿಯನ್ನು ಸಹಿಸಿಕೊಳ್ಳಬೇಕು. ಮಳೆಗಾಲದಲ್ಲಿ ಜಾರುವ ರಸ್ತೆಯ ಮೇಲೆ ಲೋಡು ಸರಿಯಿದೆಯೋ ಇಲ್ಲವೋ ಎಂದು ಮತ್ತೆ ಮತ್ತೆ ಖಚಿತಪಡಿಸಿಕೊಳ್ಳುತ್ತ ಮುಂದೆ ಸಾಗಬೇಕು. ಒಂದೇ ಭಂಗಿಯಲ್ಲಿ, ಕೊನೆಯಿರದ ಏಕತಾನತೆಯಲ್ಲಿ ಸಾವಿರಾರು ಕಿಲೋಮೀಟರ್ ದಾರಿಯನ್ನು ಒಬ್ಬಿಬ್ಬ ಡ್ರೈವರ್/ಕ್ಲೀನರನೊಡನೆ ಕ್ರಮಿಸಬೇಕು.

ಕೆಲಸವೆಷ್ಟೋ ಅಷ್ಟೇ ವಿರಾಮವೂ ಮನುಷ್ಯನಿಗೆ ಮುಖ್ಯ. ಆದರೆ ವಾರಗಟ್ಟಲೆ ರಸ್ತೆ ಮೇಲಿರುವವರಿಗೆ ವಿರಾಮವೆಂದರೇನು ? ಲಾರಿ ನಿಲ್ಲಿಸಿ, ನೆಲದ ಮೇಲೆ ಬಟ್ಟೆ ಹಾಸಿ, ಯಾವುದಾದರೂ ಢಾಬಾದಲ್ಲಿ ೩–೪ ತಾಸು ಮಲಗುವುದು. ಮನರಂಜನೆಯೆಂದರೆ ಹಾಡು ಕೇಳುವುದು ಅಥವಾ ಬೀಡಿ, ಸಿಗರೇಟು, ಕುಡಿತ ವಗೈರೆ ಚಟಗಳಿಗೆ ದೇಹವನ್ನೊಪ್ಪಿಸುವುದು. ಮನರಂಜನೆ ಇಲ್ಲದ ಕೆಲಸವೇ ಅವರು ರಿಸ್ಕಿ ಗುಣಗಳನ್ನು

ಬೆಳೆಸಿಕೊಳ್ಳುವಂತೆ ಮಾಡುತ್ತದೆ. ಡ್ರೈವರುಗಳಲ್ಲಿ ಸ್ಟ್ರೆಸ್ ಕಾರಣದಿಂದ ಅನೇಕ ಕಾಯಿಲೆಗಳು ಅವಧಿಪೂರ್ವವಾಗಿ ಕಾಣಿಸಿಕೊಳ್ಳುತ್ತಿವೆ. ಏರುತ್ತಿರುವ ಏಡ್ಸ್ ಮತ್ತಿತರ ಲೈಂಗಿಕ ರೋಗಗಳ ಪ್ರಮಾಣವೂ ಆತಂಕಕಾರಿಯಾಗಿದೆ.

ಅನಿಲ್ ಹೇಳಿದಂತೆ ಸೂಕ್ತ ಪಗಾರವಿಲ್ಲದೆ ದಿನಕ್ಕೆ ೧೮–೨೦ ತಾಸು ಕೆಲಸ ಮಾಡುವ ಟ್ರಕ್ ಡ್ರೈವರುಗಳು ಕನಿಷ್ಠ ಅವಧಿ ವಿಶ್ರಾಂತಿ ತೆಗೆದುಕೊಳ್ಳುವುದನ್ನು ಕಡ್ಡಾಯ ಮಾಡಬೇಕು. ದಿನದ ಯಾವುದಾದರೂ ಒಂದು ಅವಧಿಯ ೪–೫ ತಾಸು ಟ್ರಕ್ಕುಗಳು ರಸ್ತೆ ಮೇಲಿರಬಾರದೆಂಬ ಕಾನೂನು ಮಾಡಬೇಕು. ಅವರಿಗೆ ಕೊಡುವ ದಿನಭತ್ಯೆ ಲಾಡ್ಜಿಗೆ ಹೋಗಿ ಉಳಿಯಲು ಸಾಕಾಗುವುದಿಲ್ಲ. ಎಂದೇ ಟ್ರಕ್ ಡ್ರೈವರುಗಳಿಗೆ ಮಾತ್ರ ಮೀಸಲಾದ ಕಡಿಮೆ ಬೆಲೆಯ ವಸತಿ ವ್ಯವಸ್ಥೆ ಮಾಡಬೇಕು. ಹೈವೇ ಪಕ್ಕ ಪ್ರಯಾಣಿಕರಿಗೆ ಸುವಿಧಾ ಇರುತ್ತದೆ. ವಾಹನಕ್ಕೆ ಬಂಕ್, ಗರಾಜುಗಳಿರುತ್ತವೆ. ಆದರೆ ಡ್ರೈವರುಗಳಿಗೆ ? ಹೆದ್ದಾರಿಗಳಲ್ಲಿ ಕಡ್ಡಾಯವಾಗಿ ನಾಲ್ಕು ತಾಸಿನ ದಾರಿ ಕ್ರಮಿಸಿದ ಕೂಡಲೇ ಒಂದು 'ಡ್ರೈವರ್ ಸುವಿಧಾ' ಇರುವಂತೆ ನೋಡಿಕೊಳ್ಳಬೇಕು. ಆಗ ಅನಿವಾರ್ಯವಾಗಿ ಅವರು ವಿರಮಿಸುತ್ತಾರೆ. ಮನುಷ್ಯರಂತೆ ಬದುಕಲು ಅದು ಅತಿ ಅವಶ್ಯವಾಗಿದೆ.

* * *

**ಯಮುನಾ ಎಕ್ಸ್‌ಪ್ರೆಸ್ ವೇ ನನ್ನಲ್ಲೂ ಕೆಲ ಪ್ರಶ್ನೆಗಳನ್ನು ಕೆದಕಿತು**

ತನ್ನ ಬಳಿ ಲೋಕೋಪಯೋಗಿ ಇಲಾಖೆಯನ್ನು ಹೊಂದಿರುವ ರಾಜ್ಯ ಸರ್ಕಾರ ಅಥವಾ ಹೈವೇ ಅಥಾರಿಟಿ ಆಫ್ ಇಂಡಿಯಾ ಅಥವಾ ಇನ್ಯಾವುದೇ ಸರ್ಕಾರಿ ಸ್ವಾಮ್ಯದ ಇಲಾಖೆ/ಮಂಡಳಿ/ಸಂಸ್ಥೆ ಏಕೆ ಇಂಥ ರಸ್ತೆ ನಿರ್ಮಿಸಲಾಗದು ?

– ಹೈವೇ ಮೇಲೆ ದಿನಕ್ಕೆ ಒಟ್ಟು ಎಷ್ಟು ವಾಹನಗಳು ಹಾದುಹೋದವು? ಅದರಿಂದ ಎಷ್ಟು ಹಣ ಸಂಗ್ರಹವಾಯಿತು? ಎಂಬ ಲೆಕ್ಕವನ್ನು ಯಾರಿಗೆ ಕೊಡಲಾಗುತ್ತದೆ ? ಹಾಗೆ ಎಷ್ಟು ವರ್ಷ ವಸೂಲಿ ಮಾಡುತ್ತಾರೆ ? ಅದರಲ್ಲಿ ಸರ್ಕಾರದ ಪಾಲೆಷ್ಟು ? ರಸ್ತೆ ಮಾಡಿದವನ ಉತ್ತರದಾಯಿತ್ವ ಯಾವ ಬಗೆಯದು ?

– ಈ ಅಭಿವೃದ್ಧಿಗಾಗಿ ನೆಲೆ ಕಳೆದುಕೊಂಡವರಿಗೆ ಇಂತಹ ರಸ್ತೆಗಳು ಎಷ್ಟರಮಟ್ಟಿಗೆ ಉಪಯುಕ್ತ ? ಜೇಪೀ ಕಂಪನಿ 'ದೇಶದ ಅಭಿವೃದ್ಧಿ'ಗಾಗಿ ಇಂಥ ಹೈವೇ ನಿರ್ಮಿಸಿ ದಶಕಗಟ್ಟಲೆ ದುಡ್ಡು ಬಾಚುವುದನ್ನೇ ಕಸುಬಾಗಿಸಿಕೊಳ್ಳುತ್ತದೆ. ಆದರೆ ಇಂಥ ಯೋಜನೆಗಳಿಗಾಗಿ ಭೂಮಿ ಕಳೆದುಕೊಂಡವರು ಒಮ್ಮೆ ಮಾತ್ರ ಪರಿಹಾರ ಪಡೆದು ಸುಮ್ಮನಾಗಬೇಕು. ರೈತರು/ಸರ್ಕಾರ ೧೦ ವರ್ಷಕ್ಕೆ ಮಾತ್ರ ಲೀಸ್‌ಗೆ ಕೊಡುವಂತಾಗಬೇಕು. ನಂತರ ಪ್ರತಿ ಅವಧಿ ಮುಗಿದ ಮೇಲೂ ಅಂದಂದಿನ ದರದಂತೆ ಲೀಸ್ ನವೀಕರಣಗೊಳ್ಳಬೇಕು. ಏಕೆ ಇಂತಹ 'ಬಹುಜನ ಸ್ನೇಹಿ' ಪಾಲಿಸಿಯನ್ನು ಎಲ್ಲ ಅಭಿವೃದ್ಧಿ ಕಾರ್ಯಗಳಲ್ಲಿ ಭೂಮಿ ಕಳೆದುಕೊಳ್ಳುವವರ ಪರವಾಗಿ ಜಾರಿ ಮಾಡಬಾರದು ?

ಈಗ ವೇಗದ ಚಲನೆಗೆ ವಾಹನ ಬೇಕು. ಅದನ್ನು ತಯಾರಿಸಲು ಕಾರ್ಖಾನೆಯಿರಬೇಕು. ವಾಹನಗಳಿಗೆ ತುಂಬಲು ತೈಲ ಬೇಕು. ತೈಲಕ್ಕಾಗಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹೆಣಗಬೇಕು. ವಾಹನ ಕೊಳ್ಳುವ ಹಣ ಕಡಿಮೆ ಬಿದ್ದರೆ ಸಾಲ ಕೊಡಲು ಬ್ಯಾಂಕ್ ಬೇಕು. ಕೊನೆಗೆ ವಾಹನ ಓಡಿಸಲು ಒಳ್ಳೆಯ ರಸ್ತೆ ಮಾಡಬೇಕು. ಅದಕ್ಕಾಗಿ ವಿಶ್ವಬ್ಯಾಂಕ್‌ನಿಂದ ದುಬಾರಿ ಬಡ್ಡಿಗೆ ಸಾಲ ಪಡೆಯಬೇಕು. ಆಯಕಟ್ಟಿನ ಭೂಮಿ ಸ್ವಾಧೀನಪಡಿಸಿಕೊಳ್ಳಬೇಕು. ದೊಡ್ಡ ರಸ್ತೆ ಮಾಡಿದ ಮೇಲೆ ಬರೀ ಕಾರು ಲಾರಿ ಓಡಿಸಿ ಸುಮ್ಮನಿರಲು ಸಾಧ್ಯವೇ ? ರಸ್ತೆಯ ಆಚೀಚೆ ಜನರನ್ನು ಯಾವ್ಯಾವ ರೀತಿಯಲ್ಲಿ ಸೆಳೆಯಬಹುದೋ ಅಂಥ ಎಲ್ಲ ವ್ಯಾಪಾರ, ಮನರಂಜನೆಗೆ ವ್ಯವಸ್ಥೆ ಮಾಡಬೇಕು...

ಇದೇ ಅಭಿವೃದ್ಧಿ ಎಂದಾದಲ್ಲಿ ಅದು ಯಾರಿಂದ ? ಯಾರಿಗಾಗಿ ? ಯಾರಿಗೋಸ್ಕರ ?

**ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕಾವಲಕ್ಕಿ ಅಂಚೆ – ೫೮೧ ೩೪೧
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ

# ಹಂಬಲಿಸುತ್ತಿದ್ದಾನೆ ಬಸವಣ್ಣ



ಕಾವ್ಯಲೋಕ

ಇದು ಕೂಡಲ ಸಂಗಮ
ಸಂಗಮನಾಥ ಪ್ಲಾಸ್ಟಿಕ್ ಫೋಟೊ ರುದ್ರಾಕ್ಷಿ
ತೊಟ್ಟು, ಸುಣ್ಣದ ವಿಭೂತಿ ಬಡೆಯಿಸಿಕೊಂಡು
ಹುದಲಾಗ ಸಿಕ್ಕು ಒದ್ದ್ಯಾಡಾಕ ಹತ್ತ್ಯಾನ.
ದಶ ದಿಕ್ಕಿನ್ಯಾಗಿನಿಂದ
ಗಾಳಿ ಗಾಲಿ ಗಾಡಿ, ಬಂದ ಬರ್ತಾವ
ಹೊಟ್ಟಿಪಾಡಿಗೆ ತರಹೆವಾರಿ ತೆಗೆಯೂ
ಫೋಟೊಗಳಿಗೆ ಸಂಗಮನಾಥ
ಸಾಕ್ಷಿ ಆಗಾಕ ಹತ್ತ್ಯಾನ
ಹಗಲ ವೇಷದ ಜನ
ಹಗಲs ರಾತ್ರಿs ದರೋಡಿ ಮಾಡಿ
ಗೊಡ್ಡು ಶರಣ ಮೇಳ ನಡಸ್ಯಾಕ ಇಲ್ಲಿ
ಹತ್ತ್ಯಾರ
ಇದs ಕೂಡಲ ಸಂಗಮ
ದಾಗ
ಬಿಳಚಿಕೊಂಡ ಮುಖದಿಂದ
ಬಸವಣ್ಣ ಕೊಸರಾಡಾಕೆ ಹತ್ತ್ಯಾನ
ಜಾತಿ ಹಗ್ಗ ಹರಿಬೇಕಂದ್ರ ಅವಗ
ಆಗವಲ್ತು
ರಕ್ತ ಬೀಜಾಸೂರನಂಗ ನೆಲಕಂಡಲ್ಲಿ ಹುದಿ ಹುದಿ
ಏಳಾಕ ಹತ್ತ್ಯಾವ ದೆವ್ವಗೊಳು,
ಬಸವಣ್ಣ ಇಲ್ಲಿ ಮೂಗು ಮುಚ್ಚಿಕೊಂಡು
ಹೋಗಬೇಕಾಗೇದ
ಹೆಜ್ಜೆ ಇಡಾಕ ಹಸನ ಜಾಗಾನ ಇಲ್ಲ.
ಬರೀ ಹೇಲು ಉಚ್ಚೆಗಳ ಗಬ್ಬುನಾತ
ಹಂಬಲಿಸುತ್ತಿದ್ದಾನೆ ಬಸವಣ್ಣ
ಕಳೆದುಕೊಂಡ ಹೆಜ್ಜೆಗಳಿಗಾಗಿ.

**ಉಡುಪಿರಾವ್, ಜಯರಾವ್ ಕುಲಕರ್ಣಿ (ಜೇಸು)**
ತಾಯಿ ಸಾಹೇಬ, ಬಿವೂರು – ೫೮೭ ೧೧೫, ಬಾಗಲಕೋಟೆ ಜಿಲ್ಲೆ







**ಜನಪದ ರಮ್ಯ ಕಥಾನಕಗಳು**

ಕೃಷ್ಣಮೂರ್ತಿ ಹನೂರು

**ಪುಟ : xxiv + ೧೪೮ = ೧೭೨**

**ಬೆಲೆ : ರೂ. ೧೪೦**

**ಮನೋಹರ ಗ್ರಂಥಮಾಲಾ,** ಲಕ್ಷ್ಮೀ ಭವನ, ಸುಭಾಶ್ ರಸ್ತೆ, ಧಾರವಾಡ – ೫೮೦ ೦೦೧

*ಜಾನಪದ ರಮ್ಯಲೋಕವು ನೆಲದ ಒಡಲಿನಿಂದ ಚಿಗುರೊಡೆದು ಎದ್ದು ಬಂದ ನೈಜ ಸಾಹಿತ್ಯ. ಅಲ್ಲಿ ಸಾಹಿತ್ಯ ಬೇರೆ ಅಲ್ಲ, ಜನರ ಬದುಕು ಬೇರೆ ಅಲ್ಲ. ಜನಪದ ಸಂಸ್ಕೃತಿಯ ತಾಯಿ ಬೇರೇ ಮುಂದಿನ ಬೆಳವಣಿಗೆಯ ಎಲ್ಲ ರೆಂಬೆಕೊಂಬೆಗಳು ಹರಡಲು ಮೂಲಾಧಾರ. ಅಲ್ಲಿ ಕಥೆಗಳು ಪುಂಖಾನುಪುಂಖವಾಗಿ ಸೃಷ್ಟಿಯಾಗಿ ಜಗತ್ತಿನ ಮೂಲೆ ಮೂಲೆಗೆ ತಲುಪಿ ಭೂಮಂಡಲದ ನೋವು–ನಲಿವೆಲ್ಲ ಒಂದೇ ಎಂದು ಸಾರುತ್ತವೆ. ಆಯಾ ದೇಶ ಪ್ರದೇಶದ ಸಂಸ್ಕೃತಿಗೆ ಅನುಗುಣವಾಗಿ ಕಥೆಗಳು ಯಾವುದೇ ಮುಚ್ಚುಮರೆ ಇಲ್ಲದೆ ಪಾರದರ್ಶಕ ಗುಣ ಹೊಂದಿವೆ. ಜನಪದ ಭಾಷೆಯಾದ ಆಡುಮಾತಿನ ಶೈಲಿಯಲ್ಲಿದ್ದರಂತೂ ಕೇಳುಗನ – ಓದುಗನ ಅಂತರಾಳಕ್ಕಿಳಿಯುತ್ತವೆ. ಅವು ಜನಹಿತವಾದ ನೀತಿಗಳನ್ನೊಳಗೊಂಡಿರುತ್ತವೆ. ಸತ್ಯಕ್ಕೆ ಜಯ, ದುಷ್ಟರಿಗೆ ವಿನಾಶ ಎಂಬ ತತ್ವವೂ ಅಲ್ಲಿರುತ್ತದೆ. ಇಲ್ಲಿನ ಐದು ಕಥೆಗಳೂ ಅಷ್ಟೆ. ರಾಜ–ಮಹಾರಾಜ, ರಾಣಿ–ಮಹಾರಾಣಿ ಯಾರೇ ಆಗಲಿ ತನ್ನ ಕರ್ತವ್ಯ ಮರೆತರೆ ಏನಾಗುವುದೆಂದು ಎಚ್ಚರಿಸುತ್ತವೆ. ಕಥೆಗಳೂ ತುಂಬ ಪ್ರಾಚೀನವಾಗಿದ್ದು ಕೆಲವು ಇಂದಿನ ಸನ್ನಿವೇಶಕ್ಕೆ ಹೊಂದುವುದಿಲ್ಲವೆಂಬುದನ್ನು ನಾವು ಮರೆಯಬಾರದು. ಅವನ್ನು ನಾವು ರಮ್ಯ–ಹೆಣೆಯಲ್ಪಟ್ಟ ಕಥೆಗಳೆಂದು ಪರಿಗಣಿಸಬೇಕು. ನೀತಿ ಹೇಳುವ ಭರದಲ್ಲಿ ಅವೈಜ್ಞಾನಿಕತೆಯನ್ನೂ ಗುರುತಿಸಬೇಕು. ಅಂಥ ಆರು ಕಥೆಗಳು ಇಲ್ಲಿವೆ.*

**ಸಾಂಸ್ಕೃತಿಕ ರಂಗದ ಕ್ರಾಂತಿಕಾರಿಗಳು** — *ವಿವಿಧ ಲೇಖಕರು*

**ಪುಟ : ೨೮೪** **ಬೆಲೆ : ರೂ. ೧೭೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*ಕ್ರಾಂತಿ ಮಾಡಲು ಶಸ್ತ್ರಾಸ್ತ್ರಗಳೇನೂ ಬೇಕಿಲ್ಲ. ಹಿಂಸೆಯ ದಾರಿಯೂ ಬೇಡ. ಲೇಖನಿ ಸಾಕು. ಬರಹಗಾರರು ತಮ್ಮ ಕೃತಿಗಳಲ್ಲಿ ಅನ್ಯಾಯವನ್ನು ಖಂಡಿಸಿ ದುರಾಡಳಿತದ ವಿರುದ್ಧ ದನಿಯೆತ್ತಬೇಕು. ಪರಿಣಾಮಕಾರಿ ಬರವಣಿಗೆ ಕ್ರಾಂತಿಕಾರಿಗಳಿಗೆ ಸ್ಫೂರ್ತಿ–ಧೈರ್ಯ ತುಂಬುತ್ತದೆ. ಸರಿಯಾದ ದಾರಿಯಲ್ಲಿ ಕ್ರಮಿಸುವಂತೆ ಜನರನ್ನು ಅಣಿನೆರೆಸಲು ಅದು ಶಕ್ತವಾಗಿರಬೇಕು. ಬದಲಾವಣೆಯ ಮೊದಲ ಹೆಜ್ಜೆಯೇ ಅಂತಹ ಸಾಹಿತ್ಯ ನಿರ್ಮಾಣ. ಸಮಾಜವಾದಿ ರಾಷ್ಟ್ರಗಳಲ್ಲಿನ ಯಶಸ್ವೀ ಕ್ರಾಂತಿಗಳೆಡೆ ಕಣ್ಣು ಹಾಯಿಸಿದರೆ ಅಲ್ಲಿ ಸಾಹಿತ್ಯದ ಪಾತ್ರ ಹಿರಿದು. ಸಾಹಿತ್ಯ–ಸಿದ್ಧಾಂತ–ಹೋರಾಟಗಳು ಪರಸ್ಪರ ಪೂರಕ. ಸ್ವಸ್ಥ ಸಮಾಜ ನಿರ್ಮಾಣ ಅದರ ಗುರಿ. ನಮ್ಮ ದೇಶದಲ್ಲೂ ಕ್ರಾಂತಿಕಾರಿ ಬರಹಗಾರರು ಮಿಂಚಿ ತಮ್ಮಿಂದಾದಷ್ಟು ಬೆಳಕನ್ನು ಚೆಲ್ಲಿ ಹೋಗಿದ್ದಾರೆ. ಇವರಲ್ಲಿ ಯಾರು ಹೆಚ್ಚು – ಯಾರು ಕಡಿಮೆ ಎಂಬ ಮಾತೇ ಇಲ್ಲ! ಅವರ ಬದುಕೇನೂ ಹೂವಿನ ಹಾಸಿಗೆಯಾಗಿರಲಿಲ್ಲ. ಏನೇ ಕಷ್ಟಗಳು ಬಂದರೂ ಪ್ರಾಣಾರ್ಪಣೆ ಮಾಡಬೇಕಾದ ಸಂದರ್ಭ ಎದುರಾದರೂ ಬೆನ್ನು ತಿರುಗಿಸಿದವರಲ್ಲ. ಸಾಹಿತ್ಯದ ಮೂಲಕ ಕ್ರಾಂತಿಯ ಕಹಳೆಯೂದಿ, ಎಡ ಬಲಗಳಲ್ಲಿ ಸಿದ್ಧಾಂತ–ಹೋರಾಟಗಳನ್ನಿರಿಸಿ ಎದೆ ಸೆಟೆಸಿ ಸಾಗಿದವರಿವರು. ಜನಪರ ಸಿದ್ಧಾಂತಗಳಿಗೆ ಸ್ಪಂದಿಸುತ್ತ ಸಾಹಿತ್ಯ ರಚನೆಗೈದು – ಅದನ್ನೇ ಉಸಿರಾಗಿಸಿದ ಒಂಬತ್ತು ಜನರ ಬದುಕಿನ ಚಿತ್ರಣವಿದು. ಇಂದಿನ ಯುವಜನತೆ ಇಂಥ ಪ್ರಗತಿಶೀಲ ಸಾಹಿತಿ–ಹೋರಾಟಗಾರರನ್ನು ಅರಿಯಬೇಕು.*




**ಜೀವಜಗತ್ತಿನ ಕೌತುಕಗಳು : ವಿನೋದ–ವಿಸ್ಮಯ** — *ಡಾ॥ ಎನ್. ಎಸ್. ಲೀಲಾ*

**ಪುಟ : ೮೪** **ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಮ್ಮದು ಜೀವಂತ ಭೂಮಿ. ಇಲ್ಲಿನ ಜೀವವೈವಿಧ್ಯ ಅಸಂಖ್ಯ. ಲೋಕದಲ್ಲಿನ ವಿಸ್ಮಯಗಳೂ ಅಪಾರ. ಈ ಭೂಮಿಯ ಮೇಲೆ, ನೆಲದೊಳಗಡೆ, ಆಕಾಶಗಾಮಿಗಳಾಗಿ ಮರಗಳನ್ನಾಶ್ರಯಿಸಿ, ಗಾಳಿಯೊಂದಿಗೆ ತೇಲುವ – ಹೀಗೆ ಜೀವಕೋಟಿಗಳು ನಮ್ಮಂತೆಯೇ ಬದುಕಲು ಇಚ್ಛಿಸುತ್ತವೆ. ಕೆಲವು ದೈತ್ಯಜೀವಿಗಳು, ಇನ್ನು ಕೆಲವು ಸೂಕ್ಷ್ಮದರ್ಶಕಗಳಲ್ಲಿ ಮಾತ್ರ ಕಾಣುವಷ್ಟು ಅಣು ಆಕಾರದವು. ಜೀವಜಾಲ ಪೂರ್ಣಗೊಳ್ಳಲು ಇವುಗಳ ಅಸ್ತಿತ್ವ ಬೇಕೇ ಬೇಕು. ಪರಿಸರ ಸಮತೋಲನ ಸಾಧಿಸಲು ಎಲ್ಲ ಜೀವಿಗಳ ಅವಶ್ಯಕತೆ ಇದೆ. ಮನುಷ್ಯನಿಗೆ ಕೆಲವು ಉಪಕಾರಿ. ಆತನೂ ಸಹ ಇವುಗಳನ್ನು ಪಳಗಿಸಿ ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಂಡಿದ್ದಾನೆ. ಕೆಲವನ್ನು ಮನರಂಜನೆಗೆ ಬಳಸಿಕೊಂಡಿದ್ದಾನೆ. ಈ ಕೃತಿಯಲ್ಲಿ ಇಂತಹ ಹಲವು ಪ್ರಾಣಿ–ಪಕ್ಷಿಗಳ ಪರಿಚಯ, ಅವು ತೋರುವ ವೈವಿಧ್ಯಮಯ ಗುಣವಿಶೇಷಗಳು, ಅವುಗಳ ಆಟೋಟಗಳು ವರ್ಣಿಸಲ್ಪಟ್ಟಿವೆ. ಮೈನವಿರೇಳಿಸುವ ಗೂಳಿ ಕಾಳಗದಂಥ ಅಪಾಯಕಾರಿ ಆಟಗಳೂ ಬೆರಗು ಹುಟ್ಟಿಸುತ್ತವೆ. ಸಾಹಸ ಮತ್ತು ಹೋರಾಟ ಜೀವಿಗಳ ಅವಿಭಾಜ್ಯ ಅಂಗ. ಆದರೆ ಮನುಷ್ಯ ತಾನೊಬ್ಬನೇ ಬದುಕಬೇಕೆಂಬ ಸ್ವಾರ್ಥಭಾವನೆಯಿಂದ ಉಳಿದ ಜೀವಜಂತುಗಳ ವಿನಾಶಕ್ಕೆ ಕಾರಣನಾಗಿರುವುದು ಅಕ್ಷಮ್ಯವೆಂಬ ವಿಚಾರವೂ ಇಲ್ಲಿ ಪ್ರಸ್ತಾಪಿತವಾಗಿದೆ. ನಾವು ಪ್ರಾಣಿಗಳಿಂದ ಹಲವು ಪಾಠಗಳನ್ನು ಕಲಿಯಬೇಕಾದ ಅಗತ್ಯವಿಂದು ಹೆಚ್ಚಾಗಿದೆ. ಜಗತ್ತಿನ ವಿನೋದ–ವಿಸ್ಮಯಗಳನ್ನಿಲ್ಲಿ ತೆರೆದಿಡಲಾಗಿದೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

**ಪ್ರಿಯಸಖೀ... ಪಾತರಗಿತ್ತಿ...** (ಪ್ರಬಂಧ ಸಂಕಲನ) — *ಸುಧಾ ಚಿದಾನಂದಗೌಡ*

**ಪುಟ : ೮೪** **ಬೆಲೆ : ರೂ. ೧೦೦**

**ಸುಯೋಧನ ಪ್ರಕಾಶನ,** ಹಗರಿಬೊಮ್ಮನಹಳ್ಳಿ, ಬಳ್ಳಾರಿ – ೫೮೩ ೨೧೨

*ಶ್ರೀಮತಿ ಸುಧಾ ಚಿದಾನಂದಗೌಡ ಅವರು ಉತ್ತಮ ಕಥೆಗಾರರಲ್ಲದೆ, ಅತ್ಯುತ್ತಮ ಪ್ರಬಂಧಕಾರರು ಕೂಡ. ಈ ಕೃತಿಯ ೧೦ ಪ್ರಬಂಧಗಳಲ್ಲೂ ವಿಷಯ ವೈವಿಧ್ಯತೆಯಿದ್ದು, ಪ್ರತಿಯೊಂದು ವಸ್ತು, ವಿಷಯದ ಬಗ್ಗೆಯೂ ಇತಿಹಾಸವನ್ನು ತೆರೆದಿಡುತ್ತಲೇ ವೈಚಾರಿಕತೆಯ ಹಿಡಿತವಿದೆ. ನನ್ನನ್ನು ಹೆಚ್ಚು ಹಿಡಿದಿಟ್ಟಿದ್ದು "ಅವಮಾನ"ಗಳನ್ನು ಕುರಿತು. ಅವಮಾನದಿಂದ ಸೆಟೆದು ನಿಂತು ಸೇಡು ತೀರಿಸಿಕೊಳ್ಳುವರು, ಇಲ್ಲವೇ ಮನೋವ್ಯಾಕುಲಕ್ಕೆ ಈಡಾಗುವರು, ಸಹಿಸಿಕೊಳ್ಳಲಾಗದವರು ಆತ್ಮಹತ್ಯೆ ಮಾಡಿಕೊಳ್ಳುವರು. ನಮ್ಮ ಅಸಹಾಯಕತೆ, 'ಅಹಂ'ನ ಅರಿವಿದ್ದಾಗ ಮಾತ್ರ ಅವಮಾನವು ಕಾಡುವುದಿಲ್ಲ. 'ಹಿನ್ನೀರು ಎಂಬ ಜೀವ ತಾಣ' ಕವಿಯಿತ್ರಿ, ಕಣ್ಣಿಗೆ ಕಟ್ಟುವಂತೆ ನಿಸರ್ಗಸೌಂದರ್ಯ ವರ್ಣಿಸುತ್ತಾರೆ. ತುಂಗಭದ್ರ ಅಣೆಕಟ್ಟನ್ನು ಕಟ್ಟುವಾಗ 'ಮುಳುಗಡೆ'ಯಾದಾಗ ಇದ್ದ ಜನರು ಗುಳೇ ಹೋದ ಸ್ಥಿತಿಗತಿಗಳನ್ನು ಹೇಳುತ್ತಲೇ, ಬಯಲುಸೀಮೆಯಲ್ಲಿ ಜೀವಸಮೃದ್ಧಿ–ವೈವಿಧ್ಯತೆಯನ್ನು ಸೃಷ್ಟಿಸಿದ ಅಣೆಕಟ್ಟಿನ ಐತಿಹಾಸಿಕ ಹಿನ್ನಲೆಯನ್ನು ಹೇಳುತ್ತಾರೆ. ಪ್ರಪಂಚದಾದ್ಯಂತ ಹೆಸರಾಗಿರುವ ಅಣೆಕಟ್ಟುಗಳ ಕಿರುಪರಿಚಯವಿದೆ. ಮತ್ತೊಂದು ಮನಕಲಕುವಂತಹ 'ಕೋತಿ ಕಥನ' ತನ್ನ ಕಣ್ಣು ಮುಂದೆಯೇ, ತನ್ನ ಮರಿಯು ಟ್ರಾಕ್ಟರ್ ಕೆಳಗೆ ಸಿಕ್ಕಿ ಸತ್ತ ರಕ್ತ ಸಿಕ್ತ ದೇಹವನ್ನು ಕಂಡು ಮನೋವಿಕಲ್ಪವಾಗಿ ವಾಹನಗಳಲ್ಲಿರುವ ಡ್ರೈವರ್‌ಗಳನ್ನು ಕಂಡರೆ ಸಾಕು ಪರಚಿ, ಕಚ್ಚಿ ಹಿಂಸಿಸುವ ಹಂತಕ್ಕೆ ತಲುಪುವುದು. ಪಕ್ಷಿಸಂಕುಲದ 'ಕೋಳಿಯ ಕುಟುಂಬ', ಕೀಟ ಸಂಬಂಧಿ 'ಪ್ರಿಯ ಸಖಿ ಪಾತರಗಿತ್ತಿ' ಹಣ್ಣಿನ ರಾಜ 'ಮೋಹದೊಳಗಾದ ಮಾವು', ಪ್ರಬಂಧಗಳು ನಮ್ಮ ಬಾಲ್ಯದ ನೆನಪುಗಳನ್ನು ಮರುಕಳಿಸುವಂತಹದಾಗಿವೆ. ಕಾಡಿದ ಸಿನಿಮಾ "ಪರ್ಲ್ ಹಾರ್ಬರ್" – ದಿ ಲೆಗಸಿ ಆಫ್ ಅಟ್ಯಾಕ್ ಬಾಂಬ್ ದಾಳಿಯಿಂದ ಉಂಟಾಗುವ ಭೀಕರತೆಯನ್ನು ಪರಿಚಯಿಸುತ್ತದೆ. ಸ್ವಾತಂತ್ರ್ಯ ಚಳುವಳಿಯ ಇತಿಹಾಸ ಪುಟಗಳನ್ನು ತಿರುವಿ ಹಾಕುವಂತಹದು 'ಗಾಂಧಿಗಿರಿ ಮತ್ತು ಸಾಬರ್ಮತಿ'. ಕನ್ನಡ ಭಾಷೆಯ ಬಗ್ಗೆ ಹೇಳುವಂತಹದು 'ಇಂಗ್ಲಿಷ್, ಕನ್ನಡಗಳ ಜೋಕಾಲಿ. ಸುಂದರ ಮುಖಪುಟದೊಂದಿಗೆ ವೈವಿಧ್ಯಪೂರ್ಣವಾದ ಲೇಖನಗಳು ಈ ಕೃತಿಯಲ್ಲಿವೆ.*

– **ತೇಜ,** *ಬೆಂಗಳೂರು – ೫೬೦ ೦೬೧*




# ಥ್ಯಾಲಿಡೋಮೈಡ್ ಕುಖ್ಯಾತಿಯಿಂದ ಪ್ರಖ್ಯಾತಿಗೆ

ಅಕ್ಟೋಬರ್ ೨೦೧೪ರ 'ಹೊಸತು'ವಿನಲ್ಲಿ ಪ್ರಕಟವಾದ 'ಲಾಭ ಬಡುಕರೂ ಜೋಕ್ ಮಾಡಬಲ್ಲರು' ಲೇಖನಕ್ಕೆ ಪ್ರತಿಕ್ರಿಯೆಯಾಗಿ ಈ ಪತ್ರ, ಲೇಖನ.

ಥ್ಯಾಲಿಡೋಮೈಡ್ ಔಷಧದ ಬಗೆಗೆ ಶ್ರೀ ಕೆ. ಎಸ್. ರವಿಕುಮಾರ್ ಅವರು ಹಲವು ವಿಷಯಗಳನ್ನು ಲೇಖನದಲ್ಲಿ ತಿಳಿಸಿದ್ದಾರೆ. ಇನ್ನೂ ಹಲವಾರು ಮುಖ್ಯ ವಿಷಯಗಳನ್ನು ತಿಳಿಸಿಲ್ಲ. ಹಾಗೆಯೇ ಥ್ಯಾಲಿಡೋಮೈಡ್ ಪುನಃ ಬಳಕೆಗೆ ಬಂದ ಬಗೆಗೆ ತಮ್ಮದೇ ಆದ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ. ಆ ಔಷಧದ ಬಗೆಗಿನ ವಸ್ತುಸ್ಥಿತಿಯ ಬಗೆಗೆ ತಿಳಿಸಲು ಈ ಲೇಖನ.

ಥ್ಯಾಲಿಡೋಮೈಡ್‌ಅನ್ನು ೧೯೫೪ರಲ್ಲಿ ಜರ್ಮನಿಯಲ್ಲಿ ಕಂಡುಹಿಡಿಯಲಾಯಿತು. ಗ್ರುನೆಂಥಾಲ್ ಕಂಪೆನಿ ೧೯೫೭ರಿಂದ ಜರ್ಮನಿಯಲ್ಲಿ ಅದನ್ನು 'ಓವರ್ ದಿ ಕೌಂಟರ್' ಔಷಧವಾಗಿ ಮಾರಾಟ ಮಾಡಲಾರಂಭಿಸಿತು. ಸ್ವಲ್ಪ ಮತ್ತು ಬರಿಸುವ ಔಷಧವಾದ್ದರಿಂದ ಇದನ್ನು ಸೇವಿಸಿದವರಿಗೆ ಜಗತ್ತಿನ ಯಾವ ಅಪಾಯಗಳನ್ನೂ ಎದುರಿಸಬಲ್ಲೆನೆಂಬ ಭ್ರಮೆ ಉಂಟಾಗುತ್ತಿತ್ತು. ಪಾಶ್ಚಾತ್ಯ ಹೆಂಗಸರಲ್ಲಿ ಬಸುರಾಗುವುದೆಂದರೆ ಭಯದ ವಿಷಯವಾಗಿದ್ದಾಗ ಅಲ್ಲಿನ ಔಷಧ ಕಂಪೆನಿಗಳು, ಈ ಔಷಧ ಆತಂಕಕ್ಕೊಂದು ರಾಮಬಾಣ ಎಂದು ಪ್ರಚಾರ ಮಾಡತೊಡಗಿದವು. ಥ್ಯಾಲಿಡೋಮೈಡ್‌ಅನ್ನು ಸೇವಿಸಿ ಬಸುರಿನ ಬಾಧೆಗಳನ್ನು ಆ ಕ್ಷಣಕ್ಕೆ ಮರೆಯಲು ಅಲ್ಲಿನ ಸ್ತ್ರೀಯರು ಪ್ರಯತ್ನಿಸಿದರು. ಬಸುರಿಯರಲ್ಲಿ ಉಂಟಾಗುವ ವಾಂತಿ ನಿಲ್ಲಲೂ ಒಳ್ಳೆಯದು ಎಂದು ಇದಕ್ಕೆ ಪ್ರಚಾರಕೊಡಲಾಯಿತು.




೧೯೬೦ರ ಹೊತ್ತಿಗೆ ಜರ್ಮನಿಯಲ್ಲದೆ ೨೪ ಉಳಿದ ದೇಶಗಳಲ್ಲಿ ೫೦ ವಿವಿಧ ಬ್ರಾಂಡ್‌ಗಳಲ್ಲಿ ಈ ಔಷಧ ಲಭ್ಯವಾಗುವಷ್ಟು ಜನಪ್ರಿಯವಾಯಿತು. ಜರ್ಮನಿಯಲ್ಲಿ ಗ್ರುನೆಂಥಾಲ್ ಕಂಪೆನಿ ಇದನ್ನು ಮಾರುತ್ತಿದ್ದರೂ, ೧೯೬೦ರಲ್ಲಿ ಮೆರೆಲ್ ಫಾರ್ಮಾಸುಟಿಕಲ್ಸ್ ಕಂಪೆನಿ ಅಮೆರಿಕದಲ್ಲಿ ಮಾರ್ಕೆಟ್ ಮಾಡಲು ಅಲ್ಲಿನ ಎಫ್.ಡಿ.ಎ. (ಆಹಾರ ಮತ್ತು ಔಷಧ ಕಾರ್ಯನಿರ್ವಹಣ ಕೇಂದ್ರ)ಗೆ ಅನುಮತಿ ಕೇಳಿತು. ಎಫ್.ಡಿ.ಎ.ದ ಅಧಿಕಾರಿ ಡಾ॥ ಫ್ರಾನ್ಸಸ್ ಓ. ಕೆಲ್ಸಿ ಎಂಬ ಮಹಿಳೆ ಈ ಅರ್ಜಿಯನ್ನು ಕೂಲಂಕಷವಾಗಿ ಪರಿಶೀಲಿಸಿ ೬೦ ದಿನಗಳ ಒಳಗೆ ತೀರ್ಮಾನ ಹೇಳಬೇಕಿತ್ತು. ಆಕೆ ಕಂಪೆನಿಯ ಅಧಿಕಾರಿಗಳನ್ನು ಆ ಔಷಧದ ಬಗ್ಗೆ ಹೆಚ್ಚಿನ ವಿವರಣೆ ಕೇಳಿದಳು. ಥ್ಯಾಲಿಡೋಮೈಡ್ ಔಷಧ ಮನುಷ್ಯರಲ್ಲಿ ಮತ್ತು ಪ್ರಾಣಿಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಕೆಲಸ ಮಾಡುತ್ತದೆ ಎಂಬ ಸಂಶಯ ಆಕೆಗೆ ಬಂದಿತು. ಮಾನವರಲ್ಲಿ ನಿದ್ದೆ ತರುವ ರೀತಿಯ ಪರಿಣಾಮ ಹೊಂದಿದ ಈ ಔಷಧ, ಪ್ರಾಣಿಗಳಲ್ಲಿ ಈ ರೀತಿಯ ಪರಿಣಾಮವನ್ನೇ ತೋರಿಸುತ್ತಿರಲಿಲ್ಲ. ಕೆಲ್ಸಿಯ ಈ ಕ್ರಿಯೆ ಮೆರೆಲ್ ಕಂಪೆನಿಯ ಅಧಿಕಾರಿಗಳಿಗೆ ತೀವ್ರ ಅಸಂತೋಷ ಉಂಟುಮಾಡಿತು. ಅವರು ತಮ್ಮ ಉನ್ನತ ಅಧಿಕಾರಿಗಳನ್ನು ವಾಷಿಂಗ್ಟನ್‌ಗೆ ಕಳುಹಿಸಿ ಎಫ್.ಡಿ.ಎ.ದ ಉನ್ನತ ಅಧಿಕಾರಿಗಳಿಗೆ ಡಾ॥ ಕೆಲ್ಸಿಯ ಬಗ್ಗೆ ದೂರಿದರು. ಆದರೆ ಡಾ॥ ಕೆಲ್ಸಿ ಈ ಚರ್ಯೆಗಳಿಗೆ ಸೊಪ್ಪು ಹಾಕಲಿಲ್ಲ ಹಾಗೂ ಎಫ್.ಡಿ.ಎ.ನ ಉನ್ನತ ಅಧಿಕಾರಿಗಳೂ ಆಕೆಯ ಪರವಾಗಿಯೇ ನಿಲುವು ತೆಗೆದುಕೊಂಡರು.

ಇದೇ ಸಂದರ್ಭದಲ್ಲಿ ಪ್ರತಿಷ್ಠಿತ ಬ್ರಿಟಿಷ್ ಮೆಡಿಕಲ್ ಜರ್ನಲ್‌ನಲ್ಲಿ ವರದಿಯೊಂದು ಪ್ರಕಟವಾಯಿತು. ಥ್ಯಾಲಿಡೋಮೈಡ್ ಬಹಳ ದಿನಗಳವರೆಗೆ ಸೇವಿಸಿದ ಕೆಲವರ ಕೈಕಾಲುಗಳ ನರಗಳಿಗೆ ತೊಂದರೆ ಅಥವಾ ಹಾನಿಯಾಗಿದೆ ಎಂದು ಆ ವರದಿಯಲ್ಲಿತ್ತು. ಆಗ ಎಚ್ಚೆತ್ತ ಮೆರೆಲ್ ಕಂಪೆನಿ ಈ ರೀತಿಯ ಹಾನಿಯ ಬಗ್ಗೆ ಔಷಧದ ಮೇಲೆ ಎಚ್ಚರಿಕೆಯ ಸಂದೇಶವಾಗಿ ಪ್ರಕಟಿಸುವುದಾಗಿ ಹೇಳಿತು. ಆದರೆ ಡಾ॥ ಕೆಲ್ಸಿ ಆ ಕ್ರಮವನ್ನು ಒಪ್ಪದೆ – ಗರ್ಭಿಣಿ ಹೆಂಗಸರು ಈ ಔಷಧವನ್ನು ತೆಗೆದುಕೊಂಡರೆ ಗರ್ಭದಲ್ಲಿರುವ ಮಗುವಿಗೆ ಏನೂ ಹಾನಿಯಾಗುವುದಿಲ್ಲ ಎಂಬ ಅಂಶವನ್ನು ಸಾಬೀತುಪಡಿಸಬೇಕು ಎಂದು ಪಟ್ಟುಹಿಡಿದರು. ಬೇರೆ ಕಂಪೆನಿಯವರು ಅಮೆರಿಕದಂತಹ ಒಳ್ಳೆಯ ಮಾರುಕಟ್ಟೆ ಪ್ರವೇಶಿಸುವ ಮೊದಲೇ ಅಲ್ಲಿ ಥ್ಯಾಲಿಡೋಮೈಡ್ ವ್ಯಾಪಾರ ಮಾಡಿ ಕೋಟ್ಯಂತರ ಡಾಲರುಗಳನ್ನು ದೋಚಿಕೊಳ್ಳುವ ಹುನ್ನಾರದಲ್ಲಿದ್ದ ಮೆರೆಲ್ ಕಂಪೆನಿಯವರಿಗೆ ಈ 'ಜಿಗುಟು ಅಧಿಕಾರಿ' ನುಂಗಲಾರದ ತುತ್ತಾಗಿ ಪರಿಣಮಿಸಿದರು.

ಆಗ ಅನಿವಾರ್ಯವಾಗಿ ಆ ಕಂಪೆನಿಯವರು ಅದಕ್ಕೆ ಸಂಬಂಧಪಟ್ಟ ಪ್ರಯೋಗಗಳನ್ನು ಮಾಡತೊಡಗಿದರು. ಅದೇ ಸಂದರ್ಭದಲ್ಲಿ, ಅಂದರೆ ೧೯೬೧ರಲ್ಲಿ ಜರ್ಮನಿಯಲ್ಲಿ ಕೈಕಾಲುಗಳು ಸರಿಯಾಗಿ ಬೆಳವಣಿಗೆಯಾಗದೆ ವಿಚಿತ್ರ ರೀತಿಯಲ್ಲಿ ವಿಕಾರರೂಪದ ಮಕ್ಕಳು ಜನಿಸುತ್ತಿರುವ ಬಗ್ಗೆ ವರದಿಯಾಗತೊಡಗಿತು. ೧೯೬೧ರಲ್ಲಿ ಡಾ॥ ವಿಡುಕಿಂಗ್ ಲೆನ್ಜ್ ಜರ್ಮನಿಯಲ್ಲಿ ಹಾಗೂ ಡಬ್ಲ್ಯೂ. ಜಿ. ಮೆಕ್‌ಬ್ರೈಡ್ ಆಸ್ಟ್ರೇಲಿಯಾದಲ್ಲಿ ಸುಮಾರು ಒಂದೇ ಸಮಯದಲ್ಲಿ – ಹೀಗೆ ವಿಚಿತ್ರ ರೀತಿಯಲ್ಲಿ ಹುಟ್ಟುತ್ತಿರುವ ಮಕ್ಕಳ ತಾಯಂದಿರು ಥ್ಯಾಲಿಡೋಮೈಡ್ ಔಷಧ ಸೇವಿಸಿದ್ದಾರೆಂದು ತಮ್ಮ ಸಂಶೋಧನೆಯಲ್ಲಿ ಹೊರಗೆಡಹಿದರು. ಆಗ ಪ್ರಪಂಚ ಈ ಔಷಧದ ಬಗ್ಗೆ ಒಂದು ರೀತಿಯಲ್ಲಿ ಆಘಾತಗೊಂಡಿತು ಮತ್ತು ಎಚ್ಚರಗೊಂಡಿತು.

ಸೆಪ್ಟೆಂಬರ್ ೧೯೬೨ರ ಹೊತ್ತಿಗೆ ಪಶ್ಚಿಮ ಜರ್ಮನಿಯಲ್ಲಿ ಥ್ಯಾಲಿಡೋಮೈಡ್ ಅವಘಡದ ಬಗ್ಗೆ ದೃಢಪಟ್ಟಿತು. ೧೯೫೭ರಿಂದ ಮುಕ್ತ ಮಾರುಕಟ್ಟೆಯಲ್ಲಿ ಲಭ್ಯವಿದ್ದ ಇದು ಅಲ್ಲಿ ೧೦,೦೦೦ಕ್ಕೂ ಹೆಚ್ಚಿನ ಮಕ್ಕಳಲ್ಲಿ ವಿವಿಧ ರೀತಿಯ ಕೈಕಾಲಿನ ಊನಕ್ಕೆ ಕಾರಣವಾಗಿತ್ತು. ಇಂಗ್ಲೆಂಡ್‌ನಲ್ಲಿ ಊನವಿರುವ ೧೦೦೦ ಮಕ್ಕಳು ಹುಟ್ಟಿದ್ದು ವರದಿಯಾದರೆ, ಉಳಿದ ದೇಶಗಳಲ್ಲಿ ದೊಡ್ಡ ಸಂಖ್ಯೆಯ ಊನದ ವರದಿಯಾಗದಿದ್ದುದು ಅದೃಷ್ಟವೇ ಸರಿ. ಥ್ಯಾಲಿಡೋಮೈಡ್‌ನಿಂದ ವಿಕೃತ ಮಕ್ಕಳು ಹುಟ್ಟಿದ ಬಗ್ಗೆ ಅಮೆರಿಕದ ಪ್ರತಿಷ್ಠಿತ ವೈಜ್ಞಾನಿಕ ನಿಯತಕಾಲಿಕ 'ಸೈನ್ಸ್', ಜನಪ್ರಿಯ ದೈನಿಕ 'ನ್ಯೂಯಾರ್ಕ್ ಟೈಮ್ಸ್', 'ವಾಷಿಂಗ್ಟನ್ ಪೋಸ್ಟ್' ಪತ್ರಿಕೆಗಳು ವಿಸ್ತೃತ ವರದಿ ಪ್ರಕಟಿಸಿ ಡಾ॥ ಕೆಲ್ಸಿಯೊಬ್ಬರೇ ಏಕಾಂಗಿಯಾಗಿ ಕಂಪೆನಿಯ ಆಮಿಷಕ್ಕೆ ಒಳಗಾಗದೆ ಅಮೆರಿಕದಲ್ಲಿ ಉಂಟಾಗಬಹುದಾದ ಬಹುದೊಡ್ಡ ಅನಾಹುತವನ್ನು ಹೇಗೆ ತಡೆಗಟ್ಟಿದರು – ಎಂಬುದನ್ನು ಹೊಗಳಿ ಬರೆದಿದ್ದರು. ಈ ವರದಿಗಳಿಂದ ಪ್ರಭಾವಿತರಾಗಿ ಆಗಿನ ಅಧ್ಯಕ್ಷ ಕೆನಡಿಯವರು ಡಾ॥ ಕೆಲ್ಸಿಯವರಿಗೆ 'ಅತ್ಯುತ್ಕೃಷ್ಟ ಸಾರ್ವಜನಿಕ ಸೇವೆಯ ವಿಶೇಷ ಮೆಡಲ್' ಕೊಟ್ಟು ಸನ್ಮಾನಿಸಿದರು.

**ಹೊಸ ಕಾನೂನಿನ ಉದಯ**

ಅಲ್ಲಿಗೇ ಕತೆ ಕೊನೆಗೊಳ್ಳಲಿಲ್ಲ. ಇದು ಮುಂದಿನ ಕೆಲವು ಒಳ್ಳೆಯ ಘಟನೆಗಳಿಗೆ ನಾಂದಿಯಾಯಿತು. ಅಮೆರಿಕದ ಜನಪ್ರತಿನಿಧಿ ಸಭೆ ಕಾಂಗ್ರೆಸ್ 'ಕೇಫರ್ – ಹ್ಯಾರಿಸ್ ಔಷಧ ಕಾನೂನು' ಎಂಬ ಹೊಸ ಕಾನೂನನ್ನು ೧೯೬೨ರಲ್ಲಿ ಒಪ್ಪಿ ಜಾರಿಗೆ ತಂದಿತು. ೧೯೦೬ರಿಂದ ಅಮೆರಿಕದಲ್ಲಿ ಜಾರಿಯಲ್ಲಿದ್ದ ಔಷಧಗಳ ಕಾನೂನಿನ

ಡಾ॥ ಎಚ್. ಎಸ್. ಮೋಹನ್

ಪ್ರಕಾರ, ಯಾವುದೇ ಔಷಧವು ರಾಸಾಯನಿಕವಾಗಿ ಕಲಬೆರಕೆಯಿಲ್ಲದೆ ಶುದ್ಧವಾಗಿದ್ದರೆ ಸಾಕಿತ್ತು. ಉಳಿದ ಯಾವ ಸಂಗತಿಯೂ ಔಷಧದ ಮಾರಾಟಕ್ಕೆ ಅಡ್ಡಿ ಎನಿಸುತ್ತಿರಲಿಲ್ಲ. ಹೊಸ ಕಾನೂನಿನ ಪ್ರಕಾರ – ಎಫ್.ಡಿ.ಎ. ಸಂಸ್ಥೆಗೆ ಹೊಸ ಔಷಧಗಳ ಸುರಕ್ಷತೆ ಮತ್ತು ಪರಿಣಾಮಗಳ ಬಗ್ಗೆ ಕೈಗೊಳ್ಳಬೇಕಾದ ನಿರ್ದಿಷ್ಟ ಪರೀಕ್ಷೆ ಮತ್ತು ವಿಶೇಷ ಕ್ರಮಗಳ ಬಗ್ಗೆ – ಆ ಸಂಸ್ಥೆಗೆ ಸ್ಪಷ್ಟ ನಿರ್ದೇಶನ ಕೊಟ್ಟು, ಅದಕ್ಕೆ ವಿಶೇಷ ಅಧಿಕಾರವನ್ನೂ ಕೊಟ್ಟಿತು.

ಥ್ಯಾಲಿಡೋಮೈಡ್‌ನ ಈ ಅವಘಡದ ನಂತರ ಇನ್ನೂ ಹಲವಾರು ವಿಶಾಲ ಬೆಳವಣಿಗೆಗಳು ಜರುಗತೊಡಗಿದವು. ಅಲ್ಲಿಯವರೆಗೆ ಹೊಸ ಔಷಧಗಳು ಅಥವಾ ರಾಸಾಯನಿಕಗಳು ಕ್ಯಾನ್ಸರ್‌ನಂಥ ಕಾಯಿಲೆ ಉಂಟುಮಾಡಬಹುದು ಎಂಬ ಬಗ್ಗೆ ಅಮೆರಿಕನ್ನರಲ್ಲಿ ಭಯ, ಸಂಶಯ, ಭೀತಿ ಇತ್ತು. ಆದರೆ ಹುಟ್ಟುವ ಮೊದಲೇ ಅಂಗಾಂಗ ಊನ ಮತ್ತು ಹುಟ್ಟಿನಿಂದಲೇ ವಂಶವಾಹಿಯ ಬದಲಾವಣೆ – ಈ ರೀತಿಯ ಭೀಕರ ಪರಿಣಾಮಗಳ ಬಗ್ಗೆ ಜನರಿಗೆ ಅರಿವಿರಲಿಲ್ಲ. ಥ್ಯಾಲಿಡೋಮೈಡ್ ಈ ಎರಡರ ಬಗ್ಗೆ ತಿಳುವಳಿಕೆ ಹೇಳಿ, ಪಾಠ ಕಲಿಸಿದ ಹಾಗೆ ಆಯಿತು. ಅಲ್ಲಿಯವರೆಗೆ ಯಾವುದೇ ಹೊಸ ಔಷಧವನ್ನು ಉಪಯೋಗಿಸಲು ಬಹಳವಾಗಿ ಹಪಹಪಿಸುತ್ತಿದ್ದ ಅಮೆರಿಕನ್ನರು ಆ ವಿಚಾರದಲ್ಲಿ ಉತ್ಸುಕತೆ ಕಳೆದು ಕೊಳ್ಳಲಾರಂಭಿಸಿದರು.

**ಹಾನಿಪೀಡಿತರಿಗೆ ಪರಿಹಾರ ಮತ್ತು ಅದಕ್ಕಾಗಿ ಹೋರಾಟ**

ಹಾನಿಗೊಳಗಾದವರು ಔಷಧ ಕಂಪೆನಿಗಳಿಂದ ಪರಿಹಾರಕ್ಕಾಗಿ ಹೋರಾಡತೊಡಗಿದರು. ೬೨ರಿಂದ ೬೮ರ ತನಕ ದೀರ್ಘಕಾಲ ನಡೆದ ಈ ಹೋರಾಟ ೬೮ರಲ್ಲಿ ಕೋರ್ಟಿನ ಹೊರಗಿನ ಒಪ್ಪಂದದಲ್ಲಿ ಪರ್ಯವಸಾನವಾಯಿತು. ಜಗತ್ತಿನಾದ್ಯಂತ ೪೦ ದೇಶ ಗಳಲ್ಲಿ ೧೮ರಿಂದ ೨೦ ಸಾವಿರ ಜನ ಥ್ಯಾಲಿಡೋಮೈಡ್ ಅವಘಡದಲ್ಲಿ ಹಾನಿಗೀಡಾದವರಿದ್ದಾರೆ ಎಂಬ ಒಂದು ಅಂದಾಜಿದೆ. ಆ ಔಷಧದ ಅಧಿಕೃತ ವಿತರಕರಾದ ಡಿಸ್ಟಿಲರ್ಸ್ ಬಯೋಕೆಮಿಕಲ್ ಕಂಪೆನಿ ಪ್ರತಿಯೊಬ್ಬರಿಗೆ ೧೫–೧೬,೦೦೦ ಪೌಂಡ್‌ಗಳ (ವಾರ್ಷಿಕ) ಪರಿಹಾರ ಕೊಡುತ್ತಿದೆ.

> **ಒಂದಾಗುವಿಕೆ**
>
> ಕೈ ಕೈ ಹಿಡಿದು
> ನಾನು ನೀನು
> ನಡೆದು ಬರಲು
> ನಮಗರಿವಿಲ್ಲದೆ
> ಒಂದಾಗಿ ಸೇರಿತು
> ನಮ್ಮಿಬ್ಬರ ನೆರಳು
>
> **ಶ್ರೀನಿವಾಸ ಕುಂಡಂತಾಯ**
> ಯಲಹಂಕ, ಬೆಂಗಳೂರು – ೫೬೦ ೦೬೪

೧೯೬೦ರ ದಶಕದಲ್ಲಿ ತೀವ್ರ ಕುಖ್ಯಾತಿಗೆ ಒಳಗಾದ ಈ ಔಷಧದ ಬಗ್ಗೆ ನಿಧಾನವಾಗಿ ವಿಜ್ಞಾನಿಗಳಿಗೆ, ವೈದ್ಯರಿಗೆ ಆಸಕ್ತಿ ಕಡಿಮೆಯಾಯಿತು. ಆದರೂ ಇದರ ಕೆಲವು ಅಪರೂಪದ ಗುಣಗಳಿಂದ ಗುಣಪಡಿಸಲಾಗದ ಬೇರೆ ಬೇರೆ ಕಾಯಿಲೆಗಳ ಚಿಕಿತ್ಸೆಯಲ್ಲಿ ಈ ಔಷಧ ಉಪಯೋಗವಾಗಬಹುದೇ ? ಎಂಬ ಹಲವು ವೈದ್ಯರ ಸಂಶಯ ಕ್ರಮೇಣವಾಗಿ ನಿಜವಾಗತೊಡಗಿತು. ಇಸ್ರೇಲಿನ ಜೆರೂಸಲೇಮ್‌ನ ಹೀಬ್ರೂ ವಿಶ್ವವಿದ್ಯಾನಿಲಯದ ಆಸ್ಪತ್ರೆಯಲ್ಲಿ ಪ್ರೊ॥ ಜೇಕಬ್ ಷೆಸ್ಕಿನ್ (Sheskin) ೧೯೬೪ರಲ್ಲಿ ಕುಷ್ಠರೋಗದಿಂದ ಬಳಲುತ್ತಿರುವ ರೋಗಿಯಲ್ಲಿ, ನಿಷೇಧಕ್ಕೆ ಒಳಗಾಗಿದ್ದರೂ ಥ್ಯಾಲಿಡೋಮೈಡ್ ಔಷಧವನ್ನು ಪ್ರಯೋಗಿಸಿದರು. ಪರಿಣಾಮ ಉತ್ತಮವೆಂದು ಕಂಡುಬಂದು 'ಕ್ಲಿನಿಕಲ್ ಟ್ರಯಲ್' ಮಾಡಿ ಈ ಕಾಯಿಲೆಗೆ ಥ್ಯಾಲಿಡೋಮೈಡ್ ಉತ್ತಮ ಔಷಧ ಎಂದು ಸಾಬೀತುಪಡಿಸಲಾಯಿತು.

**ಔಷಧ ಹೇಗೆ ಕೆಲಸ ಮಾಡುತ್ತದೆ ?**

ಇದು ಕೆಲವು ಕಾಯಿಲೆಗಳಲ್ಲಿ ಕಂಡು ಬರುವ ಉರಿಯೂತ (Inflammation)ವನ್ನು ಗಮನಾರ್ಹವಾಗಿ ಕಡಿಮೆ ಮಾಡುತ್ತದೆ. ಫ್ಯಾಕ್ಟರ್ ಆಲ್ಫಾ ಎಂಬ ಪ್ರೋಟೀನ್ ಉತ್ಪಾದನೆಯನ್ನು ತೀವ್ರವಾಗಿ ಕಡಿಮೆಮಾಡುತ್ತದೆ. ಈ ಕ್ರಿಯೆಯ ಮೂಲಕ ಮುಖ್ಯವಾಗಿ ಉರಿಯೂತ ಉಂಟು ಮಾಡುವ ಕಾಯಿಲೆಗಳಾದ ರುಮಟ್ಯಾಡ್ ಆರ್ತ್ರೈಟಿಸ್, ಕ್ರಾನ್ಸ್ ಕಾಯಿಲೆ, ಲೆಪ್ರೊ ಮಾಟಸ್ ಕುಷ್ಠರೋಗಗಳಲ್ಲಿ ಪರಿಣಾಮಕಾರಿ ಔಷಧವಾಗಿ ಹೊರಹೊಮ್ಮಿದೆ. ದೇಹದಲ್ಲಿ ವಿವಿಧ ಕಾರಣಗಳಿಂದ ಉತ್ಪತ್ತಿಯಾಗುವ ಹೊಸ ರೀತಿಯ ರಕ್ತನಾಳಗಳ ಉತ್ಪಾದನೆಯನ್ನು ನಿಲ್ಲಿಸುತ್ತದೆ. ಕ್ಯಾನ್ಸರ್‌ನ ವಿವಿಧ ಗೆಡ್ಡೆಗಳು ಬೆಳೆಯಲು ಮತ್ತು ದೇಹದ ಉಳಿದ ಭಾಗಗಳಲ್ಲಿ ಹರಡಲು ಈ ರೀತಿಯ ಹೊಸ ರಕ್ತನಾಳಗಳು ಹುಟ್ಟಿಕೊಳ್ಳುವುದು, ಹರಡುವುದು ಅನಿವಾರ್ಯ. ಈ ಗುಣಗಳಿಂದ ಹಲವು ರೀತಿಯ ಕ್ಯಾನ್ಸರ್ ಕಾಯಿಲೆಗಳಲ್ಲಿ, ಏಡ್ಸ್ ಕಾಯಿಲೆಯಲ್ಲಿ, ಕಣ್ಣಿನ ಕಾಯಿಲೆ – ಮ್ಯಾಕ್ಯುಲಾರ್ ಡಿಜನರೇಷನ್‌ನಲ್ಲಿ ಚಿಕಿತ್ಸೆಗಾಗಿ ಉಪಯೋಗವಾಗುತ್ತಿದೆ. ಈಗ ಅದು ಉಪಯೋಗವಾಗುತ್ತಿರುವ ಮುಖ್ಯ ಕಾಯಿಲೆಗಳೆಂದರೆ :

**೧. ಚರ್ಮದ ಕಾಯಿಲೆಗಳು :**

ಸಾರ್ಕಾಯಿಡೋಸಿಸ್, ಲೂಪಸ್ ಕಾಯಿಲೆ, ಬೆಸೆಟ್ ಸಿಂಡ್ರೋಮ್, ಲೆಪ್ರೊಮಾಟಸ್ ಕುಷ್ಠರೋಗ.

**೨. ಸಂಧಿವಾತ ಕಾಯಿಲೆಗಳು :** ರುಮಟ್ಯಾಡ್ ಆರ್ತ್ರೈಟಿಸ್, ಆಂಕಲೋಸಿಂಗ್ ಸ್ಪಾಂಡಿಲೈಟಿಸ್, ಸ್ಟಿಲ್ ಕಾಯಿಲೆ, ಸೋಜರ್ನ್ ಸಿಂಡ್ರೋಮ್.

**೩. ಕ್ರಾನ್ಸ್ ಕಾಯಿಲೆ**

**೪. ಏಡ್ಸ್ ಮತ್ತು ಎಚ್.ಐ.ವಿ.**

**೫. ವಿವಿಧ ಕ್ಯಾನ್ಸರ್‌ಗಳು :** ಮೂತ್ರಪಿಂಡ ಕ್ಯಾನ್ಸರ್, ಮೆದುಳಿನ ಕ್ಯಾನ್ಸರ್, ದೊಡ್ಡ ಕರುಳಿನ ಕ್ಯಾನ್ಸರ್, ಮೈಲಿಗ್ನಂಟ್ ಮೆಲನೋಮಾ, ಪ್ರಾಸ್ಟೇಟ್ ಗ್ರಂಥಿಯ ಕ್ಯಾನ್ಸರ್, ಶ್ವಾಸಕೋಶದ ಕ್ಯಾನ್ಸರ್, ಮಹಿಳೆಯರ ಸ್ತನದ ಕ್ಯಾನ್ಸರ್, ರಕ್ತದ ಕ್ಯಾನ್ಸರ್, ಥೈರಾಯ್ಡ್ ಕ್ಯಾನ್ಸರ್, ಅಂಡಾಶಯದ ಕ್ಯಾನ್ಸರ್.

**ಮುಖ್ಯ ಮುನ್ನೆಚ್ಚರಿಕೆ ಕ್ರಮ :** ಗರ್ಭ ಧರಿಸುವ ವಯಸ್ಸಿನ ಮಹಿಳೆಯರಲ್ಲಿ ಇದನ್ನು ಉಪಯೋಗಿಸ ಬಾರದು. ಹಾಗೊಮ್ಮೆ ಉಪಯೋಗಿಸುವ ಸಂದರ್ಭ ಉಂಟಾದರೂ ತಾತ್ಕಾಲಿಕವಾಗಿ ಗರ್ಭ ಧರಿಸದಂತೆ ಮುನ್ನೆಚ್ಚರಿಕೆ ವಹಿಸಬೇಕು. ಪುರುಷರು ಸಹಿತ ಕಾಂಡಮ್ ಧರಿಸಿಯೇ ಲೈಂಗಿಕ ಕ್ರಿಯೆಯಲ್ಲಿ ತೊಡಗಬೇಕು. ಏಕೆಂದರೆ ವೀರ್ಯದಲ್ಲಿನ ಸೂಕ್ಷ್ಮ ಜೀವಕೋಶಗಳನ್ನು ಇದು ವಿಕೃತಗೊಳಿಸುತ್ತದೆ.

ಹೀಗೆ ಈ ಔಷಧದ ವಿವಿಧ ಉಪಯೋಗಗಳು ಗೊತ್ತಾದಾಗ, ವೈದ್ಯರೇ ಇದನ್ನು ೯೦ರ ದಶಕದ ನಂತರ ಉಪಯೋಗಿಸಲು ಆರಂಭಿಸಿದ್ದಾರೆ (ಯಾವುದೇ ಔಷಧ ಕಂಪೆನಿಯ ಒತ್ತಾಯದಿಂದಲ್ಲ). ಹೀಗೆ ಒಂದು ಕಾಲದಲ್ಲಿ ಕುಖ್ಯಾತಿಗೆ ಒಳಗಾಗಿದ್ದ ಥ್ಯಾಲಿಡೋಮೈಡ್ ಔಷಧ ಈಗ ಪುನಃ ಪ್ರಖ್ಯಾತಿ ಪಡೆದುಕೊಂಡಿದೆ ಎಂಬುದು ವಸ್ತುಸ್ಥಿತಿ.

**ಡಾ॥ ಎಚ್. ಎಸ್. ಮೋಹನ್**
ವಿಜಯ ಕಣ್ಣಿನ ಚಿಕಿತ್ಸಾಲಯ, ಸಾಗರ – ೫೭೭ ೪೦೧
ಶಿವಮೊಗ್ಗ ಜಿಲ್ಲೆ

## ಹೊಸತು ೨೦೧೫ ಜನವರಿ ಸಂಚಿಕೆ

ಆತ್ಮೀಯ ಓದುಗರಿಗೆ,

ಜನವರಿ ತಿಂಗಳ ಸಂಚಿಕೆ ವಿಶೇಷ ಸಂಚಿಕೆ ಎಂಬುದು ತಮ್ಮೆಲ್ಲರಿಗೂ ತಿಳಿದ ವಿಷಯ. ಈ ಸಲದ ವಿಶೇಷ ಸಂಚಿಕೆಯ ಓದುಗರ ವೇದಿಕೆಯ ವಿಷಯ 'ಪರಿಸರ'.

ಪರಿಸರ ಎಂದಾಕ್ಷಣ ಕೇವಲ ಅರಣ್ಯ, ಗಿಡ, ಮರ ಮಾತ್ರವಲ್ಲ. ಅವನ್ನೂ ಒಳಗೊಂಡು ನೀರು, ಕೆರೆ, ನದಿ, ಅಂತರ್‌ಜಲ, ಗಾಳಿ, ಬೆಳಕು, ನಗರ ನೈರ್ಮಲ್ಯ, ವಾಯು ನೈರ್ಮಲ್ಯ, ಭೂಮಿಯ ಬಳಕೆ – ದುರ್ಬಳಕೆ ಎಲ್ಲ ವಿಷಯಗಳನ್ನೂ ಒಳಗೊಳ್ಳಬಹುದು. ಈ ವಿಷಯಗಳ ಕುರಿತು ೨೫೦ ಪದಗಳಿಗೆ ಮೀರದಂತೆ ಓದುಗರು ತಮ್ಮ ಅನಿಸಿಕೆ, ಅಭಿಪ್ರಾಯಗಳನ್ನು ಡಿಸೆಂಬರ್ ೧ ರೊಳಗೆ ತಲುಪುವಂತೆ ಕಳಿಸಬೇಕಾಗಿ ವಿನಂತಿ

–ಸಂ.



ಆರ್ಫಿಯ ಪೊಲೀಸ್ ಇಲಾಖೆಯಲ್ಲಿ ವರಿಷ್ಠನಾಗಿರುವ ತನ್ನ ತಂದೆಯ ಬಳಿ ಯಾವುದೇ ಉದ್ದೇಶವಿಲ್ಲದೆ ಈ ಮಾಹಿತಿಯನ್ನು ಹಂಚಿಕೊಳ್ಳುತ್ತಾಳೆ. ಖುರ್ರಂನನ್ನು ಮುಗಿಸಲು ಹೈದರ್ ಪ್ರಯತ್ನಿಸುವಾಗ ಆರ್ಫಿಯಾಳ ತಂದೆ ಆತನನ್ನು ಹಿಡಿಯುತ್ತಾನೆ; ಕೊಲ್ಲಲು ನಿರ್ದೇಶಿಸುತ್ತಾನೆ. ಆದರೆ ತಪ್ಪಿಸಿಕೊಂಡ ಹೈದರ್ ರೂಹ್‌ದಾರ್‌ನನ್ನು ಭೇಟಿ ಮಾಡುತ್ತಾನೆ. ನಂತರ ಹೈದರ್‌ನ ತಾಯಿ ಗಜ಼ಲ ತನ್ನ ಮನೆಯಲ್ಲಿ ಗಂಡ ಉಗ್ರವಾದಿಯೊಬ್ಬನಿಗೆ ಆಶ್ರಯ ನೀಡಿದ ವಿಚಾರವನ್ನು ಮೈದುನ ಖುರ್ರಂಗೆ ಹೇಳಿದ ವಿಷಯವನ್ನು ಹೈದರ್‌ನಿಗೆ ತಿಳಿಸುತ್ತಾಳೆ. ಹೈದರ್‌ನನ್ನು ಪತ್ತೆ ಹಚ್ಚುವ ಆರ್ಫಿಯಾಳ ತಂದೆ ಆತನಿಂದಲೇ ಗುಂಡೇಟಿನ ಮೂಲಕ ಹತನಾಗುತ್ತಾನೆ. ಆರ್ಫಿಯಾ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸ್ಮಶಾನದಲ್ಲಿ ಆರ್ಫಿಯಾಳ ಕಳೇಬರವನ್ನು ಕಂಡ ಹೈದರ್ ಅತೀವ ದುಃಖದಲ್ಲಿ ಮುಳುಗಿಹೋಗುತ್ತಾನೆ.

# ಹೈದರ್

## ಕಾಡುವ ಸಂವೇದನಾಶೀಲ ಚಲನಚಿತ್ರ

**ಮ. ಶ್ರೀ. ಮುರಳಿ ಕೃಷ್ಣ**

**ಸು**ಮಾರು ಐದು ಶತಮಾನಗಳ ಹಿಂದೆ ಇಂಗ್ಲೆಂಡ್‌ನಲ್ಲಿ ಬದುಕಿದ್ದ ಶೇಕ್ಸ್‌ಪಿಯರ್ ತನ್ನ ಉತ್ಕೃಷ್ಟ ನಾಟಕಗಳಿಂದಾಗಿ ಜಗದ್ವಿಖ್ಯಾತನಾಗಿದ್ದಾನೆ. ಇಂದಿಗೂ ಆತನ ನಾಟಕಗಳು, ಕಲಾವಿದರು / ಸಾಹಿತಿಗಳ ಮೇಲೆ ಪ್ರಭಾವ ಬೀರುತ್ತಿರುವುದಕ್ಕೆ ಇತ್ತೀಚೆಗೆ ತೆರೆ ಕಂಡ ನಿರ್ದೇಶಕ ವಿಶಾಲ್ ಭಾರದ್ವಾಜರ ಹಿಂದಿ ಚಲನಚಿತ್ರ 'ಹೈದರ್' ಒಂದು ನಿದರ್ಶನ. ಶೇಕ್ಸ್‌ಪಿಯರ್‌ನ ಹೆಚ್ಚಿನ ನಾಟಕಗಳಲ್ಲಿ ದುರಂತದ ಛಾಯೆ ಢಾಳಾಗಿ ಕಂಡುಬರುತ್ತದೆ. ಆತನ ಅಂತಹ ಒಂದು ನಾಟಕ 'ಹ್ಯಾಮ್ಲೆಟ್'. ಇದನ್ನು ಆಧರಿಸಿದ ಚಲನಚಿತ್ರ 'ಹೈದರ್'.

ಈ ಚಲನಚಿತ್ರದ ಕಥೆ ೧೯೯೦ರ ದಶಕದ ಮಧ್ಯಭಾಗದ ಕಾಶ್ಮೀರ ಕಣಿವೆಯ ಕುಟುಂಬವೊಂದಕ್ಕೆ ಸಂಬಂಧಿಸಿದೆ. ಚಿತ್ರಕಥೆ ಹೀಗಿದೆ: ಡಾ॥ ಹಿಲಾಲ್ ಮೀರ್ ಮಾನವೀಯತೆಯ ದೃಷ್ಟಿಯಿಂದ ಉಗ್ರನೊಬ್ಬನಿಗೆ ತನ್ನ ಮನೆಯಲ್ಲೇ ಶಸ್ತ್ರಕ್ರಿಯೆ ನಡೆಸುತ್ತಾನೆ. ಆದರೆ ಈ ವೈದ್ಯ ಉಗ್ರವಾದಿಗಳ ಪರವಾಗಿದ್ದ ವ್ಯಕ್ತಿಯೇನಲ್ಲ. ಮಿಲಿಟರಿ ಅಧಿಕಾರಿಗಳಿಗೆ ಈ ವಿಷಯ ತಿಳಿದು, ಆತನ ನಿವಾಸವನ್ನು ಗ್ರೆನೇಡ್ ಲಾಂಚರ್ ಬಳಸಿ ಧ್ವಂಸಮಾಡುತ್ತಾರೆ. ಡಾ॥ ಮೀರ್ ಕಾಣೆಯಾಗುತ್ತಾನೆ. ಅಲೀಗಢ್‌ನಲ್ಲಿ ಓದುತ್ತಿರುವ ಮಗ ಹೈದರ್ ವಾಪಸ್ಸಾಗಿ ಮನೆಗೆ ಬಂದಾಗ ತನ್ನ ತಾಯಿ ಗಜ಼ಲ, ತನ್ನ ಚಿಕ್ಕಪ್ಪ ಖುರ್ರಂನ ಜೊತೆ ಸರಸವಾಡುವುದನ್ನು ಕಂಡು ಕ್ರುದ್ಧನಾಗುತ್ತಾನೆ. ಕಾಣೆಯಾಗಿರುವ ತಂದೆಯನ್ನು ಹುಡುಕಲು ಶುರು ಮಾಡುತ್ತಾನೆ. ಒಂದು ದಿನ ರೂಹ್‌ದಾರ್ (ನಟ ಇರ್ರ್‌ಫಾನ್ ಖಾನ್) ಎಂಬ ಪ್ರತ್ಯೇಕವಾದಿಯನ್ನು ಭೇಟಿ ಮಾಡುವ ಸಂದರ್ಭ ಒದಗಿಬರುತ್ತದೆ. ಆತ ಹೈದರ್‌ನ ತಂದೆಯನ್ನು ಭೇಟಿ ಮಾಡಿದ್ದು, ಅವರು ಹತ್ತಿರವಾದದ್ದು, ನಂತರ ಸೈನ್ಯದ ಮಾಹಿತಿದಾರನಾಗಿದ್ದ ಖುರ್ರಂ ಅಣ್ಣನನ್ನೇ (ಅತ್ತಿಗೆಯ ಮೇಲಿನ ವ್ಯಾಮೋಹದಿಂದ) ಮುಗಿಸುವ ಸಂಚು ಹೂಡಿದ್ದು ಇತ್ಯಾದಿ ವಿವರಣೆಗಳನ್ನು ಹೈದರ್‌ನಿಗೆ ನೀಡುತ್ತಾನೆ. ತಂದೆ ಹೈದರನಿಗೆ ತಮ್ಮನು ಎಸಗಿದ ದೋಖಾದ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳಬೇಕೆಂಬ ಸಂದೇಶ ನೀಡಿರುವುದಾಗಿ ಹೇಳುತ್ತಾನೆ. ತನ್ನ ತಂದೆ ಬದುಕಿಲ್ಲ ಎಂಬ ವಿಚಾರ ತಿಳಿದು ಮತಿಭ್ರಾಂತನಾಗುವ ಹೈದರ್ ಸೇಡು ತೀರಿಸಿಕೊಳ್ಳಲು ನಿಶ್ಚಯಿಸುತ್ತಾನೆ. ಗೂಢಚಾರರ ಮೂಲಕ ರೂಹ್‌ದಾರ್ ಮತ್ತು ಹೈದರ್‌ನ ಭೇಟಿ ಅರಿತ ಖುರ್ರಂ, ರೂಹ್‌ದಾರ್‌ನೇ ತನ್ನ ಅಣ್ಣನನ್ನು ಕೊಂದವನೆಂದು ಹೈದರನಿಗೆ ತಿಳಿಸುತ್ತಾನೆ. ಗೊಂದಲಕ್ಕೀಡಾಗುವ ಹೈದರ್ ತನ್ನ



*ಹೈದರ್ ತನ್ನ ತಾಯಿ ಗಜ್ಹಲಳೊಂದಿಗೆ*

ಇನಿಯಳಾದ ಆರ್ಶಿಯಳ ಬಳಿ ಈ ವೃತ್ತಾಂತವನ್ನು ತಿಳಿಸಿ, ರೂಹ್‌ದಾರ್ ಖುರ್ರಂನನ್ನು ಮುಗಿಸಲು ಪಿಸ್ತೂಲನ್ನು ನೀಡಿರುವುದಾಗಿ ಹೇಳುತ್ತಾನೆ. ಆರ್ಶಿಯ ಪೊಲೀಸ್ ಇಲಾಖೆಯಲ್ಲಿ ವರಿಷ್ಠನಾಗಿರುವ ತನ್ನ ತಂದೆಯ ಬಳಿ ಯಾವುದೇ ಉದ್ದೇಶವಿಲ್ಲದೆ ಈ ಮಾಹಿತಿಯನ್ನು ಹಂಚಿಕೊಳ್ಳುತ್ತಾಳೆ. ಖುರ್ರಂನನ್ನು ಮುಗಿಸಲು ಹೈದರ್ ಪ್ರಯತ್ನಿಸುವಾಗ ಆರ್ಶಿಯಾಳ ತಂದೆ ಆತನನ್ನು ಹಿಡಿಯುತ್ತಾನೆ; ಕೊಲ್ಲಲು ನಿರ್ದೇಶಿಸುತ್ತಾನೆ. ಆದರೆ ತಪ್ಪಿಸಿಕೊಂಡ ಹೈದರ್ ರೂಹ್‌ದಾರ್‌ನನ್ನು ಭೇಟಿ ಮಾಡುತ್ತಾನೆ. ನಂತರ ಹೈದರ್‌ನ ತಾಯಿ ಗಜ್ಹಲ ತನ್ನ ಮನೆಯಲ್ಲಿ ಗಂಡ ಉಗ್ರವಾದಿಯೊಬ್ಬನಿಗೆ ಆಶ್ರಯ ನೀಡಿದ ವಿಚಾರವನ್ನು ಮೈದುನ ಖುರ್ರಂಗೆ ಹೇಳಿದ ವಿಷಯವನ್ನು ಹೈದರ್‌ನಿಗೆ ತಿಳಿಸುತ್ತಾಳೆ. ಹೈದರ್‌ನನ್ನು ಪತ್ತೆ ಹಚ್ಚುವ ಆರ್ಶಿಯಾಳ ತಂದೆ ಆತನಿಂದಲೇ ಗುಂಡೇಟಿನ ಮೂಲಕ ಹತನಾಗುತ್ತಾನೆ. ಆರ್ಶಿಯಾ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸ್ಮಶಾನದಲ್ಲಿ ಆರ್ಶಿಯಾಳ ಕಳೇಬರವನ್ನು ಕಂಡ ಹೈದರ್ ಅತೀವ ದುಃಖದಲ್ಲಿ ಮುಳುಗಿಹೋಗುತ್ತಾನೆ. ಖುರ್ರಂ ಹೈದರ್‌ನನ್ನು ಕೊಲ್ಲಲು ದೊಡ್ಡ ಪಡೆಯೊಂದಿಗೆ ಬರುತ್ತಾನೆ. ಭಯೋತ್ಪಾದಕನಿಂದ ಗುಂಡಿನ ಚಕಮಕಿ ಜರುಗುತ್ತದೆ. ಗಜ್ಹಲ ಮಾನವ ಬಾಂಬಾಗಿ ಆತ್ಮಾಹುತಿಗೆ ತನ್ನನ್ನೇ ಒಡ್ಡಿಕೊಳ್ಳುತ್ತಾಳೆ. ತಂದೆಯ ಇಚ್ಛೆಯಂತೆ ಖುರ್ರಂನನ್ನು ಹತ್ಯೆಮಾಡಲು ಹೈದರ್ ಮುಂದಾಗುತ್ತಾನೆ. ಆದರೆ ತಾಯಿ ಗಜ್ಹಲಳ "ಸೇಡು ಸೇಡನ್ನು ಮಾತ್ರ ಹುಟ್ಟಿಸುತ್ತದೆ" ಎಂಬ ಮಾತುಗಳ ನೆನಪಾಗಿ ತೀವ್ರವಾಗಿ ಗಾಯಗೊಂಡ ಖುರ್ರಂನನ್ನು ಕೊಲ್ಲುವುದಿಲ್ಲ.

ಆ ಕಾಲಘಟ್ಟದಲ್ಲಿ ಕಾಶ್ಮೀರ ಕಣಿವೆ ಭಯೋತ್ಪಾದಕರ ಅಟ್ಟಹಾಸದಿಂದ ತತ್ತರಿಸಿತ್ತು. ಅವರನ್ನು ಸದೆಬಡಿಯಲು ಮಿಲಿಟರಿ ಕೂಡ ತೀವ್ರವಾದ ಕಾರ್ಯಾಚರಣೆಗಳನ್ನು ಜರುಗಿಸಿತು. ಹಿಂಸೆ, ಪ್ರತಿಹಿಂಸೆಯಲ್ಲಿ ಅಲ್ಲಿನ ಜನರ ಜೀವನ ಮೂರಾಬಟ್ಟೆಯಾಯಿತು. ತಂದೆ, ತಾಯಿ, ಮಕ್ಕಳು, ಬಾಂಧವರನ್ನು ಕಳೆದುಕೊಂಡವರ ಆಕ್ರಂದನ ಕಣಿವೆಯಲ್ಲಿ ಮಾರ್ದನಿಸುತ್ತಿತ್ತು. ಭಯೋತ್ಪಾದಕರಿಗೆ ಸಹಾಯಹಸ್ತವನ್ನು ನೀಡುತ್ತಿದ್ದಾರೆ ಎಂಬ ಗುಮಾನಿಯ ಮೇಲೆ ವಿಚಾರಣೆಗೊಳಗಾದ ಎಷ್ಟೋ ಮಂದಿ ಸುಳಿವಿಲ್ಲದೆ ಮಾಯವಾದರು. ಒಂದು ಘಟನೆಯಲ್ಲಿ ಭೂಮಿಯನ್ನು ಅಗೆದಾಗ, ಅಧಿಕ ಸಂಖ್ಯೆಯ ಶವಗಳು ದೊರೆತವು. ಕಣಿವೆಯಲ್ಲಿ ೧೯೯೦ರಿಂದಲೇ ಸೈನ್ಯದ ವಿಶೇಷಾಧಿಕಾರದ ಕಾನೂನು (ಎ.ಎಫ್.ಎಸ್.ಪಿ.ಎ.) ಜಾರಿಯಲ್ಲಿತ್ತು. ಈ ಕಾನೂನಿನಲ್ಲಿದ್ದ ನಿಬಂಧನೆಗಳನ್ನು ಉಲ್ಲಂಘಿಸಿ, ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ನೆಪದಲ್ಲಿ ಅತಿರೇಕಗಳು ಜರುಗಿವೆಯೆಂದು ನಿಷ್ಪಕ್ಷಪಾತವಾದ ದನಿಗಳು ಕೇಳಿಬಂದವು; ಜೊತೆಯಲ್ಲಿ ಜನತೆಯನ್ನು ದಿಕ್ಕು ತಪ್ಪಿಸುವಂತಹ ಪ್ರತ್ಯೇಕವಾದಿಗಳ ಕೂಗುಗಳು ಕೂಡ. ದಿಕ್ಕು ತಪ್ಪಿದ ಅನೇಕ ಯುವಕರು ಉಗ್ರವಾದಕ್ಕೆ ಆತುಕೊಂಡು ತಮ್ಮ ಕುಟುಂಬಗಳಿಂದ ಬೇರ್ಪಟ್ಟರು. ಕಾಶ್ಮೀರಿ ಪಂಡಿತರ ವಲಸೆಯೂ ಅಲ್ಲಿ ಜರುಗಿದ ಕರಾಳ ಘಟನೆಗಳಲ್ಲಿ ಒಂದು.



ನಮ್ಮಪ್ಪ ಕುಡಿದ ಕ್ವಾರ್ಟರ್ ಬಾಟ್ಲಿ ಮಾರಿದ್ರೆ ತಿಂಗಳ ಅಕ್ಕಿಗೆ 30 ರೂಪಾಯಿ ಸಿಗುತ್ತೆ

ಇಂತಹ ಅನೇಕ ವಿಚಾರಗಳನ್ನು ಪಾತ್ರಗಳ ಮೂಲಕ ಸೂಕ್ಷ್ಮವಾಗಿ ಪ್ರಸ್ತುತಪಡಿಸಿರುವುದು 'ಹೈದರ್' ಚಲನಚಿತ್ರದ ಹೆಗ್ಗಳಿಕೆ. ಜವಹರ್‌ಲಾಲ್ ನೆಹರು ವಿಶ್ವಸಂಸ್ಥೆಯ ಮುಂದೆ ಒಪ್ಪಿಕೊಂಡಿದ್ದ ಕಾಶ್ಮೀರ ವಿವಾದದ ಬಗೆಗಿನ ಪ್ಲೆಬಿಸೈಟ್ (ಜನಮತದ ಮೂಲಕ ವಿಷಯವನ್ನು ಇತ್ಯರ್ಥಗೊಳಿಸುವುದು) ಎ.ಎಫ್.ಎಸ್.ಪಿ.ಎ. ಜಾರಿಯ ಸುತ್ತ ಇದ್ದ (ಈಗಲೂ ಇರುವ) ವಿವಾದಾಸ್ಪದ ವಿಚಾರಗಳ ಕುರಿತು ಕಾಶ್ಮೀರಿ ಅಧಿಕಾರಶಾಹಿ ತೋರಿದ ಅಸಡ್ಡೆಯಂತಹ ಅಂಶಗಳು ಈ ಚಲನಚಿತ್ರದಲ್ಲಿ ವಿಡಂಬನಾತ್ಮಕವಾಗಿ ನಿರೂಪಣೆಯಾಗಿವೆ. 'ಹೈದರ್' ಅನಾವರಣಗೊಳ್ಳುವ ಚಿಂತನಾಶೀಲ ಅಂಶಗಳಲ್ಲಿ ಇದೂ ಸಹ ಒಂದು.

ಹೈದರ್‌ನ ತಾಯಿಯ (ಗಜ್ಹಲ) ಪಾತ್ರ (ನಟಿ ತಬು) ಸಂವೇದನಾಶೀಲವಾಗಿರುವುದರ ಜೊತೆಗೆ ಸಂಕೀರ್ಣವೂ ಆಗಿದೆ. ಮೂಲ ನಾಟಕದಲ್ಲಿರುವಂತೆ ಸಿನಿಮಾದಲ್ಲೂ ಈಕೆಗೆ ಇರುವ ಈಡಿಪಸ್ ಕಾಂಪ್ಲೆಕ್ಸ್‌ಅನ್ನು ನವಿರಾಗಿ / ಸೂಕ್ಷ್ಮವಾಗಿ ಬಿಂಬಿಸಲಾಗಿದೆ. ಒಂದು ದೃಶ್ಯದಲ್ಲಿ, "ಹೈದರ್, ನೀನು ಚಿಕ್ಕವನಿದ್ದಾಗ ನನ್ನನ್ನೇ ಮದುವೆಯಾಗುವೆ ಎಂದು ಹೇಳುತ್ತಿದ್ದೆ..." ಎಂದು ಗಜ್ಹಲ ಹೇಳುತ್ತಾಳೆ. ಇಂತಹ ಇತರ ಕೆಲವು ಸಂಭಾಷಣೆಗಳೂ ಇವೆ. ಆಕೆ ಆಪ್ತವಾಗಿ ಹೈದರ್‌ನನ್ನು ಆಲಂಗಿಸುವ ಮೂಲಕವೂ ಈ ಅಂಶವನ್ನು ಯಾವುದೇ ಮುಜುಗರವಾಗದಂತೆ ಚಿತ್ರಿಸಲಾಗಿದೆ. ತನ್ನ ಮಗನ ಬಗೆಗಿನ ಪ್ರೀತಿ, ಸಂತಾಪ, ಬೇಸರ ಮತ್ತು ಕೋಪದಂತಹ ವಿವಿಧ ಭಾವಗಳು, ಮೈದುನ ಖುರ್ರಂ (ನಟ ಕೆ. ಕೆ.) ಮೆನನ್)ಅನ್ನು ಕುರಿತಂತೆ ವ್ಯಕ್ತಪಡಿಸುವ ಸಮ್ಮಿಶ್ರ ಸ್ಪಂದನ ಮತ್ತು ಎಷ್ಟೇ ಪ್ರಯತ್ನಪಟ್ಟರೂ ತನ್ನನ್ನು ತಾನೇ ನಿಯಂತ್ರಿಸಿಕೊಳ್ಳಲಾರದಂತಹ ಅಸಹಾಯಕತೆ ಮುಂತಾದ ಗಜ್ಹಲಳ ವ್ಯಕ್ತಿತ್ವದ ಜಟಿಲವಾದ ಚರ್ಯೆಗಳನ್ನು ಕಟ್ಟಿಕೊಡುವುದರ ಮೂಲಕ ನಿರ್ದೇಶಕರು ಒಂದು ವಿಭಿನ್ನ ಸ್ತ್ರೀಪಾತ್ರವನ್ನು ಗಟ್ಟಿಯಾಗಿ ಸೃಷ್ಟಿಸುವುದರಲ್ಲಿ ಸಫಲರಾಗಿದ್ದಾರೆ. ತಬು ಸಹ ತನ್ನ ನಟನಾ ಕೌಶಲ್ಯವನ್ನು ಹರಿಬಿಟ್ಟಿದ್ದಾಳೆ. ಹಿಂದೆ, ಈ ನಟಿ 'ಮಾಚೀಸ್' ಮತ್ತು 'ಚಾಂದ್ನಿ ಬಾರ್' ಚಲನಚಿತ್ರಗಳಲ್ಲಿನ ತಮ್ಮ ನಟನೆಗೆ ರಾಷ್ಟ್ರಮಟ್ಟದ ಶ್ರೇಷ್ಠ ಅಭಿನೇತ್ರಿ ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ. ಗಜ್ಹಲ ಪಾತ್ರಕ್ಕಾಗಿ ಮೂರನೇ ಬಾರಿ ಈ ಪ್ರಶಸ್ತಿ ದೊರಕುವ ಎಲ್ಲ ಸಾಧ್ಯತೆಗಳಿವೆ !

ಕಾಶ್ಮೀರ ಎಂದರೆ ನಿಸರ್ಗದ ರಮಣೀಯ ದೃಶ್ಯಗಳು, ಹಿಮಚ್ಛಾದಿತ ಶಿಖರಗಳು, ಸರೋವರಗಳು, ಕೋವಿಗಳನ್ನು ಹಿಡಿದಿರುವ ಉಗ್ರರು ಮತ್ತು ಸೈನಿಕರು, ದೋಣಿಗಳಲ್ಲಿ ಹಾಡುತ್ತ

# ಅಸ್ಮಿತೆ

ತನ್ನದೇ ಜಾತಿಯ
ಬಾವಲಿ
ಹಾರಿದರೆ ಹಾರಿಕೊಳ್ಳಲಿ
(ರಕ್ತ ಹೀರುವ
ಬಾವಲಿಯೂ ಉಂಟಂತೆ);
ಮನುಷ್ಯ ಮನುಷ್ಯನಾಗಿ
ಉಳಿಯುವುದು ಒಳಿತು !

ಸಿ.ಪಿ.ಕೆ.
ಮೈಸೂರು

ಸಾಗುವ ಪ್ರೇಮಿಗಳು ಮುಂತಾದ ಚರ್ವಿತಚರ್ವಣ ಅಭಿವ್ಯಕ್ತಿಯ ಹೊರತಾಗಿ ಅಲ್ಲಿನ ಜನತೆ ಭಯ, ಆತಂಕದ ನೆರಳಲ್ಲೇ ಬದುಕುವ ಪರಿ, ಕಾಶ್ಮೀರ ಕುರಿತಂತೆ ಅವರಲ್ಲಿರುವ ಇನ್ನೊಂದು ಮಗ್ಗುಲಿನ ಅನಾವರಣ ಮುಂತಾದ ದಿಟ್ಟ ನಿರೂಪಣೆಗಳಿಂದ ಚಲನಚಿತ್ರ ಗಮನ ಸೆಳೆಯುತ್ತದೆ.

ಹೈದರ್ ನಟ ಶಾಹಿದ್ ಕಪೂರ್ ಪಾತ್ರವನ್ನು (ಹ್ಯಾಮ್ಲೆಟ್) ಸಮರ್ಥವಾಗಿ ನಿಭಾಯಿಸಿರುವುದು ಎಂತಹ ನಟನಿಗೂ ಸವಾಲೊಡ್ಡುವ ವಿಷಯವೇ ಸರಿ. ಈ ಪಾತ್ರಕ್ಕೆ ಜೀವ ತುಂಬಿದ್ದಾರೆ ಶಾಹೀದ್. ಇದರಲ್ಲಿರುವ ಹತ್ತಾರು ಮುಖಗಳನ್ನು ಮನೋಜ್ಞವಾಗಿ ಬಹಿರಂಗಗೊಳಿಸುವುದರಲ್ಲಿ ಸಫಲರಾಗಿದ್ದಾರೆ. ಹೈದರ್ ತನ್ನ ತಂದೆಯ ಸಾವಿನ ವೃತ್ತಾಂತವನ್ನು 'ಬಿಸ್ಮಿಲ್ ಬಿಸ್ಮಿಲ್...' ಎಂಬ ಹಾಡನ್ನು ಹಾಡುತ್ತ ಅಭಿನಯಿಸುವುದರ ಮೂಲಕ ತಿಳಿಸುತ್ತಾನೆ. ಈ ಹಾಡಿಗೆ ಅಳವಡಿಸಲಾಗಿರುವ ನೃತ್ಯದಲ್ಲಿ ಶಾಹಿದ್ ಕಪೂರ್‌ನ ಹಸಿ ಕಸುವನ್ನು (ರಾ ಎನರ್ಜಿ) ಕಂಡು "ಅಬ್ಬಾ !" ಎನ್ನದಿರಲಾಗದು ! ಸುಮಾರು ನೂರು ಅಡಿಯ ಬೊಂಬೆಯನ್ನು (ಮೂಲ ನಾಟಕದಲ್ಲಿರುವಂತೆ) ಮತ್ತು ಕಾಶ್ಮೀರ ಕಣಿವೆಯ ಸಾಂಪ್ರದಾಯಿಕ ಜಾನಪದ "ದುಮ್ಹಾಲ್" ನೃತ್ಯವನ್ನು ಬಳಸಿರುವುದು ಈ ಗೀತೆಯ ವೈಶಿಷ್ಟ್ಯ. ಇದನ್ನು ಮಾರ್ತಾಂಡ ಸೂರ್ಯ ದೇವಾಲಯದ ಮುಂದೆ ಚಿತ್ರೀಕರಿಸಲಾಗಿದೆ. ಇದರ ನೃತ್ಯ ಸಂಯೋಜನೆ ಮತ್ತು ಛಾಯಾಚಿತ್ರಗ್ರಹಣ ಶ್ಲಾಘನಾರ್ಹವಾಗಿವೆ.

ಸ್ಮಶಾನದಲ್ಲಿ ಚಿತ್ರಣಗೊಂಡಿರುವ ಇನ್ನೊಂದು ಗೀತೆ "ಆವೊ ಹಾ"... ವಿಲಕ್ಷಣವಾಗಿದೆ. ಮೂವರು ವೃದ್ಧರು (ಇವರು ಭಯೋತ್ಪಾದಕರು !!) ಗುಂಡಿ ತೋಡುವ ಕಾರ್ಯದಲ್ಲಿ ನಿರತರಾಗಿರುವಾಗ ಮೂರು ಗುಂಡಿಗಳನ್ನು ತೋಡಿ ಅವುಗಳಲ್ಲಿ ಮಲಗಿ ಹೈದರ್‌ನನ್ನು ತಮ್ಮೊಡನೆ ಸೇರಲು ಹೇಳುತ್ತಾ, "ನಮ್ಮ ಗುಂಡಿಗಳನ್ನು ನಾವೇ ತೋಡಿಕೊಂಡಿದ್ದೇವೆ. ನೀನೂ ಬಾ" ಎಂದು ಮಾರ್ಮಿಕವಾಗಿ ಹಾಡುತ್ತಾರೆ ! ಈ ಹಾಡಿನ ಚಿತ್ರೀಕರಣವೂ ಕಣ್ಮನ ಸೆಳೆಯುತ್ತದೆ.

ಈ ಚಲನಚಿತ್ರದ ಸಂಭಾಷಣೆಯನ್ನು ವಿಶಾಲ್ ಭಾರದ್ವಾಜರೇ ಬರೆದಿದ್ದಾರೆ. "ಅಮ್ಮ ಆದವಳು ಸುಳ್ಳು ಹೇಳಬೇಕಾದರೆ ಎಂದಿನಂತೆ ಮುದ್ದಾಗಿ ಕಾಣಿಸುವುದಿಲ್ಲ" (ಹೈದರ್ ತಾಯಿಗೆ ಹೇಳುವುದು), "ಕಾಣೆಯಾದವರ ಹೆಂಡತಿಯರನ್ನು ಅರ್ಧ ವಿಧವೆಯರೆಂದು ಕರೆಯಲಾಗುತ್ತದೆ" (ಕಾಣೆಯಾದವರ ಪಟ್ಟಿಯಲ್ಲಿರುವ ತನ್ನ ತಂದೆ ಬದುಕಿರುವ ಸಾಧ್ಯತೆಗಳಿರುವಾಗ ಹೈದರ್ ತನ್ನ ತಾಯಿ ಮೈದುನನಿಗೆ ಹತ್ತಿರವಾದದ್ದನ್ನು ಆಕ್ಷೇಪಿಸಿದಾಗ ತಾಯಿ ಹೇಳುವ ತಲ್ಲಣದ ನುಡಿಗಳು), "ಬಂದೂಕು ಸೇಡು ತೀರಿಸಿಕೊಳ್ಳಲಷ್ಟೇ ಬಳಕೆಯಾಗಬಲ್ಲದು", "ಸೇಡು ಮತ್ತಷ್ಟು ಸೇಡನ್ನು ಹುಟ್ಟಿಸಬಲ್ಲುದೇ ಹೊರತು ಸ್ವಾತಂತ್ರ್ಯವನ್ನಲ್ಲ" (ಕೊನೆಯ ದೃಶ್ಯದಲ್ಲಿ ತಾಯಿ ಹೈದರನಿಗೆ ಹೇಳುವ ಮಾತುಗಳು) ಇತ್ಯಾದಿ ಸಂಭಾಷಣೆಗಳು ವೀಕ್ಷಕರನ್ನು ಬಡಿದೆಬ್ಬಿಸುತ್ತವೆ.

ಈ ಚಲನಚಿತ್ರದ ಗತಿ ಅಲ್ಲಲ್ಲಿ ನಿಧಾನವಾಗುತ್ತದೆ. ನಿರ್ದೇಶಕರು ವೀಕ್ಷಕರಿಗೆ ಚಿಂತನ-ಮಂಥನ


**ಹೈದರ್ ತನ್ನ ಆರ್ಷಿಯಳೊಂದಿಗೆ**

ಮಾಡಲು ಸಮಯ ಒದಗಿಸಿರುವರೇನೋ ಎಂದು ಭಾಸವಾಗುತ್ತದೆ ! ಭಯೋತ್ಪಾದನೆಯ ಸಾಮಾಜಿಕ ಆರ್ಥಿಕ ಆಯಾಮವು ಇಲ್ಲಿ ಪ್ರಕಟಗೊಂಡಿಲ್ಲ. ಕಾಶ್ಮೀರಿ ಪಂಡಿತರ ದುಸ್ಥಿತಿಗೆ ನಿರ್ದೇಶಕರು ನ್ಯಾಯ ಒದಗಿಸಿಲ್ಲ ಎಂಬ ಕೆಲವು ವಿಮರ್ಶೆಗಳು ಬಂದಿವೆ. ಒಂದು ವಿಶ್ವವಿಖ್ಯಾತ ನಾಟಕವನ್ನು ಈ ಸಿನಿಮಾ ಆಧರಿಸಿರುವುದರಿಂದ, ಇಂತಹ ನಿರೀಕ್ಷೆಗಳನ್ನಿರಿಸಿ ಕೊಳ್ಳುವುದು ಎಷ್ಟು ಸರಿ ? ಎಂಬ ಪ್ರಶ್ನೆಯೂ ತಳ್ಳಿ ಹಾಕುವಂತಹದ್ದಲ್ಲ !

ಇದು ಶೇಕ್ಸ್‌ಪಿಯರ್‌ನ ನಾಟಕ ಆಧಾರಿತ ವಿಶಾಲ್ ಭಾರದ್ವಾಜರ ಮೂರನೆಯ ಸಿನಿಮಾ. ಇವರ "ಓಂಕಾರ್" ("ಒಥೆಲೊ") ಮತ್ತು "ಮಾಕ್ಬೂಲ್" ("ಮ್ಯಾಕ್‌ಬೆತ್") ಚಲನಚಿತ್ರಗಳು ಕ್ರಮವಾಗಿ ೨೦೦೩ ಮತ್ತು ೨೦೦೬ರಲ್ಲಿ ಲೋಕಾರ್ಪಣೆಯಾಗಿ ವೀಕ್ಷಕರು ಮತ್ತು ವಿಮರ್ಶಕರನ್ನು ಆಕರ್ಷಿಸಿದ್ದವು. "ಜಮ್ಮು ಮತ್ತು ಕಾಶ್ಮೀರದಲ್ಲಿನ ರಾಜಕೀಯ ಸಂಕ್ಷೋಭೆ ಮತ್ತು ಸುಮಾರು ೨೫ ವರ್ಷಗಳ ಅವಧಿಯಲ್ಲಿ ಜರುಗಿದ ದುರಂತಗಳು ಈ ಚಲನಚಿತ್ರವನ್ನು ಮಾಡಲು ಪ್ರೇರೇಪಿಸಿವೆ. ಇದುವರೆಗೆ ನಾವು ಕಾಶ್ಮೀರವನ್ನು ಕಾಸ್ಮೆಟಿಕ್ಕಾಗಿ ಕಂಡಿದ್ದೇವೆ. ಕಾಶ್ಮೀರವನ್ನು ಆಂತರ್ಯದಿಂದ ಕಾಣುವ ಪ್ರಥಮ ಚಲನಚಿತ್ರ 'ಹೈದರ್' ನಾವು ಈ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ಮುಖ್ಯವಾಹಿನಿಯ ಚಲನಚಿತ್ರವನ್ನು ನೀಡಿಲ್ಲ" ಎಂದು ವಿಶಾಲ್ ಹೇಳಿದ್ದಾರೆ. ಇದು ನಿಜವೂ ಹೌದು.

ಒಟ್ಟಿನಲ್ಲಿ 'ಹೈದರ್' ಒಂದು ಕಾಡುವ, ಸಂವೇದನಾಶೀಲ ಚಲನಚಿತ್ರ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು – ೫೬೦ ೦೬೧

# ನಮನ



ಕವಿ, ಉಪನ್ಯಾಸಕ ಶಂಕರ ಕಟಗಿ ಹೃದಯಾಘಾತದಿಂದ ದಿ। ೨೮-೯-೨೦೧೪ರಂದು ನಿಧನರಾಗಿದ್ದಾರೆ. ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ಸಕ್ರಿಯರಾಗಿದ್ದ ಶಂಕರ ಕಟಗಿ ಇಂಗ್ಲಿಷ್ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದರು. 'ನೆಲದ ನಾಲಿಗೆ' ಎಂಬ ಕವನ ಸಂಕಲನದ ಜೊತೆಗೆ ಹಲವಾರು ಕವನ ಸಂಕಲನಗಳನ್ನು ಪ್ರಕಟಿಸಿದ್ದ ಕಟಗಿಯವರು ಎಡಪಂಥೀಯ ಚಳುವಳಿಗಳ ಜೊತೆ ನಿರಂತರ ಸಂಪರ್ಕ, ಸಂಬಂಧ ಹೊಂದಿದ್ದರು. ವಿಜಾಪೂರದಲ್ಲಿ ನೆಲೆಸಿದ್ದ ಕಟಗಿಯವರು ಮೂಲತಃ ಈಗಿನ ಬಾಗಲಕೋಟ ಜಿಲ್ಲೆಯ ಬೀಳಗಿ ತಾಲ್ಲೂಕಿನವರು. ಬಡತನದ ಬದುಕಿನಿಂದ ಬಂದು, ನಿರಂತರ ಪರಿಶ್ರಮದ ಮೂಲಕ ವಿದ್ಯಾಭ್ಯಾಸ ಮಾಡಿ ಉತ್ತಮ ಕವಿ ಹಾಗೂ ಉಪನ್ಯಾಸಕರಾಗಿ ಬೆಳೆದಿದ್ದರು. ಪತ್ನಿ, ಪುತ್ರಿ ಹಾಗೂ ಅಪಾರ ಆಪ್ತರ ಬಳಗವನ್ನು ಹೊಂದಿದ್ದ, ನಮ್ಮ ಪತ್ರಿಕೆಯ ಬಳಗದವರಾಗಿದ್ದ ಶಂಕರ ಕಟಗಿಯವರ ನಿಧನಕ್ಕೆ 'ಹೊಸತು' ಕಂಬನಿ ಮಿಡಿಯುತ್ತದೆ.

–ಸಂ



# ಪಶ್ಚಿಮ ಏಶಿಯದಲ್ಲಿ ಅಮೆರಿಕದ ಹಸ್ತಕ್ಷೇಪ ನಿಲ್ಲಲಿ

**ಪ**ಶ್ಚಿಮ ಏಶಿಯದಲ್ಲಿ ತಲೆ ಎತ್ತಿರುವ ಇಸ್ಲಾಮಿಕ್ ಸ್ಟೇಟ್ ಆಫ್ ಇರಾಕ್ ಅಂಡ್ ಸಿರಿಯ (ಐಎಸ್ಐಎಸ್) ಇಸ್ಲಾಮಿಕ್ ಮೂಲಭೂತವಾದಿ ಸಂಘಟನೆಯ ಉಪಟಳವನ್ನು ಹತ್ತಿಕ್ಕಲು ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಮುಂದಾಗಿವೆ. ಈಗಾಗಲೇ ಹಲವು ಪ್ರದೇಶಗಳನ್ನು ಆಕ್ರಮಿಸಿಕೊಂಡಿರುವ ಈ ಸಂಘಟನೆಯ ಗುರಿ ಇಸ್ಲಾಮಿಕ್ ರಾಜ್ಯದ ಸ್ಥಾಪನೆ. ಅಲ್‌ಖೈದಾ, ತಾಲಿಬಾನ್ ಜಾಡಿನಲ್ಲೇ ಸಾಗಿರುವ ಐಎಸ್ಐಎಸ್ ಈಗಾಗಲೇ ತನ್ನ ಕ್ರೌರ್ಯವನ್ನು ಪ್ರದರ್ಶಿಸಿದೆ. ಇಬ್ಬರು ಅಮೆರಿಕನ್ ಪತ್ರಕರ್ತರು ಹಾಗೂ ಒಬ್ಬ ಬ್ರಿಟನ್ನಿನ ಪತ್ರಕರ್ತನ ಶಿರಚ್ಛೇದ ಮಾಡಿದೆ ಅದು. ಇದರಿಂದ ಆಕ್ರೋಶಗೊಂಡಿರುವ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಇಸ್ಲಾಮಿಕ್ ಸಂಘಟನೆ ವಿರುದ್ಧ ಯುದ್ಧವನ್ನೇ ಸಾರಿವೆ. ವಿಶ್ವಸಂಸ್ಥೆಯ ಅನುಮತಿಯನ್ನೂ ಪಡೆದುಕೊಳ್ಳದೆ ಐಎಸ್ಐಎಸ್ ಕೇಂದ್ರಗಳ ಮೇಲೆ ಬಾಂಬುದಾಳಿ ನಡೆಸಲು ಹೊರಟಿವೆ. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಪ್ರಕಾರ ಇದು ಯುದ್ಧದ ವ್ಯಾಪ್ತಿಗೆ ಬರುವುದಿಲ್ಲ, ಭಯೋತ್ಪಾದನೆಯ ವಿರುದ್ಧ ಸಮರದ ಭಾಗ. ಅಮೆರಿಕದ ಕಾಂಗ್ರೆಸ್ ಸದನ ಒಬಾಮಾರ ಬಾಂಬ್ ದಾಳಿ ಯೋಜನೆಗೆ ಸಮ್ಮತಿ ನೀಡಿಲ್ಲ. ಈಗ ಪ್ರಾರಂಭಿಸಿರುವ ದಾಳಿ ನೇರವಾಗಿ ಇರಾಕ್ ಮತ್ತು ಸಿರಿಯಾಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪವಾಗಿದೆ. ಈ ಪ್ರದೇಶದಲ್ಲಿ ಇಸ್ಲಾಮಿಕ್ ಮೂಲಭೂತವಾದಿಗಳು ಬೆಳೆದದ್ದು ಅಮೆರಿಕದ ಬೆಂಬಲದಿಂದಲೇ. ಇರಾಕ್‌ನ ಆಕ್ರಮಣದ ನಂತರದ ಬೆಳವಣಿಗೆಗಳು ಅದಕ್ಕೆ ಮೂಲ. ಹಾಗೆಯೇ ಸಿರಿಯಾದ ಅಸ್ಸಾದ್ ಆಡಳಿತೆಯನ್ನು ಪದಚ್ಯುತಗೊಳಿಸಲು ವಿರೋಧಿ ಗುಂಪುಗಳಿಗೆ ಹಣ ಹಾಗೂ ಶಸ್ತ್ರಾಸ್ತ್ರಗಳನ್ನು ಒದಗಿಸಿದ್ದು, ಸಿಐಎಯಿಂದ ವಿವಿಧ ಬಣಗಳಿಗೆ ತರಬೇತಿ ನೀಡಿದ್ದು ಅಮೆರಿಕ. ಈಗ ಅವೇ ಅದಕ್ಕೆ ಮುಳುವಾಗಿದೆ.

ಈ ಪ್ರದೇಶದಲ್ಲಿ ಇಸ್ಲಾಮಿಕ್ ರಾಜ್ಯದ ಸ್ಥಾಪನೆಯಾದರೆ ಅಸ್ಥಿರತೆಗೆ ಮೂಲ ಮತ್ತು ಅಮೆರಿಕದ ಹಿತಾಸಕ್ತಿಗಳಿಗೆ ಧಕ್ಕೆಯಾಗುವುದು ನಿಜ. ಈಗಾಗಲೇ ಹಲವು ಪ್ರದೇಶಗಳನ್ನು ಆಕ್ರಮಿಸಿಕೊಂಡಿರುವ ಇಸ್ಲಾಮಿಕ್ ರಾಜ್ಯಸ್ಥಾಪನೆಯ ಪಡೆಗಳನ್ನು ಮಣಿಸುವುದು ಸುಲಭವೇನಲ್ಲ. ಬರಾಕ್ ಒಬಾಮಾ ನಡೆಸಲಿರುವ ಬಾಂಬ್ ದಾಳಿ ಮಾರಕವಾಗುವುದು ಅಮಾಯಕ ನಾಗರಿಕರಿಗೆ. ಅದು ಅನೇಕ ಸಹಸ್ರ ಜನರನ್ನು ಆಹುತಿ ತೆಗೆದುಕೊಳ್ಳಲಿದೆ. ಅಲ್‌ಖೈದಾ ಭಯೋತ್ಪಾದಕರ ಮೇಲೆ ದಾಳಿ ನಡೆಸುವ ಹೆಸರಿನಲ್ಲಿ ಆಫ್ಘಾನಿಸ್ಥಾನ ಮತ್ತು ಪಾಕಿಸ್ತಾನದ ಗಡಿಯಲ್ಲಿ ನಡೆಸಿದ ರಾಕೆಟ್ ದಾಳಿ ಅದಕ್ಕೆ ಉದಾಹರಣೆ. ಅಮೆರಿಕದ ಅಧ್ಯಕ್ಷ ನಿಕ್ಸನ್ ಆಡಳಿತ ಕಾಲದಲ್ಲಿ ೧೯೭೫ರಿಂದ ನಾಲ್ಕು ವರ್ಷಗಳು ಪೋಲ್ ಪಾಟ್ ಆಡಳಿತವನ್ನು ಅಂತ್ಯಗೊಳಿಸಲು ಕಾಂಬೋಡಿಯದ ಮೇಲೆ ನಡೆಸಿದ ಬಾಂಬ್ ದಾಳಿಯಲ್ಲಿ ಆರು ಲಕ್ಷ ಜನ ಅಸುನೀಗಿದರು. ೨೦೦೩ರಲ್ಲಿ ಇರಾಕ್‌ನಲ್ಲಿ ಸದ್ದಾಮ್ ಹುಸೇನ್ ಅನ್ನು ಪದಚ್ಯುತಗೊಳಿಸಲು ನಡೆಸಿದ ದಾಳಿಯಲ್ಲಿ ಸತ್ತವರ ಸಂಖ್ಯೆ ಏಳು ಲಕ್ಷಕ್ಕೂ ಹೆಚ್ಚು. ಅಮೆರಿಕ ನಡೆಸಿದ ಈ ದುರಾಕ್ರಮಣದ ನಂತರದ ಅನಾಹುತಗಳ ಬಗ್ಗೆ ಇಲ್ಲಿ ವಿವರ ಅನಗತ್ಯ. ಮೊದಲನೇ ಇರಾಕ್ ಯುದ್ಧದ ನಂತರ, ಇಪ್ಪತ್ತಮೂರು ವರ್ಷಗಳ ಹಿಂದೆ ಇರಾಕ್ ಆಕ್ರಮಿಸಿಕೊಂಡ ಕುವೈತ್‌ಅನ್ನು ಮುಕ್ತಗೊಳಿಸಲು ಕೈಗೊಂಡ ಕಾರ್ಯಾಚರಣೆಯ ನಂತರ ಇರಾಕಿನ ಮೇಲೆ ವಿಧಿಸಿದ ಆರ್ಥಿಕ ದಿಗ್ಬಂಧನದ ಪರಿಣಾಮವಾಗಿ ಸಂಭವಿಸಿದ ದುರಂತ ಅವರ್ಣನೀಯ. ವಿಶ್ವಸಂಸ್ಥೆಯ ಅಂಗವಾದ ಯೂನಿಸೆಫ್ ಸಮೀಕ್ಷೆಯ ಪ್ರಕಾರ ಸರಿಯಾದ ಪೋಷಣೆ ಮತ್ತು ಅಗತ್ಯವಾದ ಔಷಧ ಸಾಮಗ್ರಿಗಳ ಕೊರತೆಯಿಂದ ಸುಮಾರು ಐದು ಲಕ್ಷ ಮಕ್ಕಳು ಸಾವಿಗೀಡಾದುವು. ಅಮೆರಿಕ ನಡೆಸುವ ಇಂಥ ದಾಳಿಗಳಿಂದ ತೊಂದರೆಗೆ ಒಳಗಾಗುವುದು ಜನಸಾಮಾನ್ಯರು ಎನ್ನುವುದಕ್ಕೆ ಈ ಉದಾಹರಣೆಗಳೇ ಸಾಕ್ಷಿ.

ಸಿರಿಯಾ ಮತ್ತು ಇರಾಕ್‌ಗಳಲ್ಲಿ ಪ್ರಬಲವಾಗಿ ಬೆಳೆದಿರುವ ಐಎಸ್ಐಎಸ್ ವಿರುದ್ಧ ಅಮೆರಿಕ ಮತ್ತು ಪಾಶ್ಚಾತ್ಯ ರಾಷ್ಟ್ರಗಳು ಸಾರಿರುವ ಸಮರ ಸಾಕಷ್ಟು ದೀರ್ಘಕಾಲದ್ದಾಗುವುದರಲ್ಲಿ ಸಂಶಯವಿಲ್ಲ. ಭಯೋತ್ಪಾದನೆಯ ವಿರುದ್ಧವಾಗಿ ಈ ಶತಮಾನದ ಪ್ರಾರಂಭದಲ್ಲಿ ಘೋಷಿಸಿದ ಸಮರ ನಿರಂತರ. ಅದು ಭಯೋತ್ಪಾದನೆಯನ್ನು ಮತ್ತಷ್ಟು ವರ್ಧಿಸಿದೆಯೇ ಹೊರತು ಕುಂಠಿತಗೊಳಿಸಿಲ್ಲ. ಪಶ್ಚಿಮ ಏಶಿಯದಲ್ಲಿ ಅಮೆರಿಕ ಅನುಸರಿಸುತ್ತ ಬಂದಿರುವ ನೀತಿ ಇಸ್ಲಾಮ್ ಧರ್ಮೀಯರೇ ಅಧಿಕ ಸಂಖ್ಯೆಯಲ್ಲಿರುವ ಈ ಪ್ರದೇಶದ ಜಾತ್ಯತೀತತೆಯ ಚೌಕಟ್ಟನ್ನೇ ಮುರಿದಿದೆ. ಇರಾಕ್ ಯುದ್ಧಾನಂತರ ಸುನ್ನಿ, ಷಿಯಾ ಪಂಗಡಗಳ ನಡುವೆ ವೈಷಮ್ಯ ವಿಪರೀತಕ್ಕೆ ಹೋಗಿದೆ. ಇರಾಕ್‌ನಲ್ಲಿ ಸುನ್ನಿ, ಷಿಯಾ ಮತ್ತು ಕುರ್ದಿಷ್ ಜನಾಂಗಗಳ ನಡುವೆ ಘರ್ಷಣೆಗಳು ಅಧಿಕಗೊಂಡಿವೆ. ಇಸ್ಲಾಮಿಕ್ ರಾಜ್ಯ ಸ್ಥಾಪನೆಗೆ ಹೊರಟಿರುವ ಪಡೆಯಲ್ಲಿ ಸುನ್ನಿ ತಂಡದವರದ್ದೇ ಮೇಲುಗೈ. ಈ ಪಡೆ ಐರೋಪ್ಯ ರಾಷ್ಟ್ರಗಳಲ್ಲಿರುವ ಇಸ್ಲಾಮಿಕ್ ಮೂಲಭೂತವಾದಿಗಳನ್ನೂ ಆಕರ್ಷಿಸುತ್ತದೆ. ಹಾಗಾಗಿ, ಈ ಪ್ರದೇಶದಲ್ಲಿ ಸುದೀರ್ಘ ಕಾಲ ಅಸ್ಥಿರತೆ ಕಟ್ಟಿಟ್ಟದ್ದು.

ತೈಲ ಸಂಪದ್ಭರಿತ ಪಶ್ಚಿಮ ಏಶಿಯಾದಲ್ಲಿ ಮೇಲುಗೈ ಸಾಧಿಸಲು ಎರಡನೇ ಮಹಾಯುದ್ಧದ ನಂತರ ಅಮೆರಿಕ ನಡೆಸಿರುವ ಹುನ್ನಾರಗಳೇ ಇಂದಿನ ಪರಿಸ್ಥಿತಿಗೆ ಕಾರಣ. 'ವಿಭಜಿಸಿ ಆಳು' ಧೋರಣೆಯಲ್ಲಿ ಪರಿಣತವಾಗಿರುವ ಬ್ರಿಟನ್ ವಿಶ್ವಸಂಸ್ಥೆಯ ಆಣತಿಯನ್ನು ಮೀರಿ ತನ್ನ ಸುಪರ್ದಿನಲ್ಲಿದ್ದ ಪ್ರದೇಶದಲ್ಲಿ



ಯೆಹೂದ್ಯರಿಗಾಗಿ ಇಸ್ರೇಲ್ ರಾಜ್ಯವನ್ನು ಸ್ಥಾಪಿಸಿ, ಪ್ಯಾಲಸ್ತೀನಿಯನ್ನರನ್ನು ಅತಂತ್ರಗೊಳಿಸಿದ್ದು ಆಕಸ್ಮಿಕವೇನಲ್ಲ. ಅರಬ್ ದೇಶಗಳ ಐಕ್ಯತೆಯನ್ನು ಮುರಿಯುವುದೇ ಅದರ ಹಿಂದಿನ ಉದ್ದೇಶ. ಅಮೆರಿಕದ ನೇತೃತ್ವದಲ್ಲಿ ಪಾಶ್ಚಾತ್ಯ ದೇಶಗಳು ಆ ಗುರಿಯನ್ನು ಮುಟ್ಟಿವೆ. ಇಸ್ರೇಲ್ ಸ್ಥಾಪನೆಯಾದಾಗ ಇದ್ದ ಅರಬ್ ಐಕ್ಯತೆ ಇಂದು ಇಲ್ಲವಾಗಿದೆ. ಅರಬ್ ರಾಷ್ಟ್ರಗಳು ಒಡೆದ ಮನೆಯಾಗಿರುವುದರಿಂದಲೇ ಅಮೆರಿಕಾಗೆ ಒಂದರ ಮೇಲೆ ಒಂದು ರಾಜ್ಯವನ್ನು ಎತ್ತಿಕಟ್ಟಲು ಅವಕಾಶವಾಗಿದೆ. ಐಎಸ್ಐಎಸ್‌ನಂಥ ಸಂಘಟನೆಯನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ಸದ್ಯಕ್ಕಂತೂ ಈ ಪ್ರದೇಶದಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ಕಾಣುವುದು ಸಾಧ್ಯವಾಗದು. ಅಮೆರಿಕದ ಹಸ್ತಕ್ಷೇಪವನ್ನು ಖಂಡಿಸಿ, ಈ ಪ್ರದೇಶದಿಂದ ಅಮೆರಿಕ ಕಾಲ್ತೆಗೆಯುವಂತೆ ಮಾಡುವುದು ಎಲ್ಲ ಶಾಂತಿಪ್ರಿಯರ ಕರ್ತವ್ಯ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫



# ಅವಳ ಅವ್ಯಕ್ತ ಅಭಿವ್ಯಕ್ತಿ ಸ್ವಾತಂತ್ರ್ಯ!

**'ಹೆ**ಣ್ಣುಮಕ್ಕಳು ತುಂಬ ಮಾತಾಡ್ತಾರೆ' ಎಂದು ನಮ್ಮ ಮೇಲೆ ಆರೋಪವಿದೆ. ಆದರೆ ಅದಕ್ಕೆ ಪ್ರತಿಯಾಗಿ ನಾವು ನಮ್ಮೊಳಗೇ ಗುಸುಗುಟ್ಟಿಕೊಳ್ಳುತ್ತಿರುತ್ತೇವೆ... 'ಏನು ಮಾತಾಡಬೇಕೋ ಅದನ್ನ ಒಳಗೇ ಅದುಮಿಟ್ಟು ಬೇರೆಲ್ಲಾ ಬೇಡದ್ದು ಮಾತಾಡ್ತಿವಿ' ಅಂತ. 'ಹೆಣ್ಣುಮಕ್ಕಳು ಯಾಕೆ ತುಂಬ ಅಳುತ್ತಾರೆ?' ಎಂಬುದಕ್ಕೆ ಗೆಳೆಯನೊಬ್ಬ ಹೇಳುತ್ತಿದ್ದ, ಏನನ್ನು ಹೇಳಬೇಕೋ ಅದನ್ನ ಹೇಳಲಾಗದೆ ಅಳುತ್ತಾರೆ ಅಂತ. ನಿಜವಿರಬಹುದು. ಆಡಬೇಕಾದ್ದನ್ನು ಬಲವಂತದಿಂದ ಒಳಗೇ ಇರಿಸಿ ಮೌನವಾಗಿಸಿದ ವ್ಯವಸ್ಥೆಯೊಂದಿಗೆ ಹೆಣ್ಣುಕುಲ ಹೊಂದಿಕೊಳ್ಳುತ್ತಲೇ ಬಂದಿದೆ.

'ನೀರಿನಲ್ಲಿ ಮೀನಿನ ಹೆಜ್ಜೆ ಗುರುತನ್ನಾದ್ರೂ ಅಳೆಯಬಹುದು. ಆದರೆ ಹೆಣ್ಣಿನ ಮನಸ್ಸಿನ ಆಳವನ್ನು ಅರಿತವರಿಲ್ಲ' ಎಂದು ಯಾರು ಹೇಳಿದರೋ ತಿಳಿದಿಲ್ಲ. ಈ ಸುಂದರ ಸುಳ್ಳನ್ನು ನಂಬಿ 'ಅವಳ'ನ್ನು ಅರ್ಥಮಾಡಿಕೊಳ್ಳುವ ಗೋಜಿಗೆ ಹೋಗಿದ್ದೇ ಕಡಿಮೆ ನಮ್ಮ ಸಮಾಜ. 'ಹೆಣ್ಣು ಸ್ವಾತಂತ್ರ್ಯಕ್ಕೆ ಅನರ್ಹ'ಳೆಂದ ಮನು, 'ಹೆಣ್ಣು ಸುಕೋಮಲೆ. ಅವಳನ್ನು ರಕ್ಷಿಸು, ಕಾಪಾಡು' ಎಂದು ಕಟ್ಟಳೆ ಬರೆದಿಟ್ಟ ಶಾಸ್ತ್ರಗಳು, ಹೆಣ್ಣೆಂದರೆ 'ಕ್ಷಮಯಾಧರಿತ್ರಿ, ಸಹನಾಮಯಿ, ಮಾಯೆ, ಶಕ್ತಿ, ಪ್ರಕೃತಿ ದೇವತೆ, ...' ಎಂದೆಲ್ಲಾ ವರ್ಣಿಸುವ ಕವಿಗಳ ಅತಿ ವೈಭವೀಕರಣಗಳ ಮಧ್ಯೆ ಸಿಕ್ಕು ತನ್ನದಲ್ಲದ ನೂರಾರು ಮುಖವಾಡಗಳನ್ನು ಹೊತ್ತು 'ನಿಜಕ್ಕೂ ನಾನೆಂದರೆ ಏನು? ಮನುಷ್ಯಳಲ್ಲವೇ?' ಎಂಬ ಗೊಂದಲ ಸ್ವತಃ ಹೆಣ್ಣಿಗೇ ಮೂಡಿ ಚಡಪಡಿಸುತ್ತಿದ್ದಾಳೆ.

ಅವಳ ತೀವ್ರ ಸಂವೇದನಾಶೀಲ ಸ್ವಭಾವ ಮತ್ತು ಪ್ರವೃತ್ತಿ ಪುರುಷನದಕ್ಕಿಂತ ಭಿನ್ನವಾದದ್ದು ಮಾತ್ರವಲ್ಲ, ಸೂಕ್ಷ್ಮತರವಾದದ್ದೂ ಹೌದು, ಗಾಢವಾದದ್ದೂ ಹೌದು. ವಸ್ತು, ವಿಷಯ, ಘಟನೆ ಮತ್ತು ಸಂಬಂಧಗಳನ್ನು ಪುರುಷನಿಗಿಂತ ಭಿನ್ನವಾದ ಭಾವನಾತ್ಮಕ ನೆಲೆಯಲ್ಲಿ ಹಿಡಿಯಬಲ್ಲ ಇಂದ್ರಿಯ ಸಂವೇದನೆ ಮತ್ತು ಸಂವಹನತೆ ಸರಳ, ಸೂಕ್ಷ್ಮವಾಗಿರುವುದರ ಜೊತೆಗೇ ಸಂಕೀರ್ಣವಾದದ್ದೂ ಆಗಿದೆ. ಆದರೆ ಇವೆಲ್ಲವೂ ಅವಳ ಅವ್ಯಕ್ತ ಭಾವನಾ ಪ್ರಪಂಚದೊಳಗೆ ವ್ಯಕ್ತವಾಗದೆ ಹಾಗೆಯೇ ಉಳಿದುಬಿಡುವುದೇ ಹೆಚ್ಚು. ಅವಳ ಮೌನ ಪ್ರಪಂಚದೊಳಗೆ ಒಂದು ಬಾರಿ ಸುತ್ತಿ ಬಂದರೆ ಹಲವು ವಿಸ್ಮಯಗಳ ಅದ್ಭುತ ಲೋಕವೊಂದು ತೆರೆದುಕೊಳ್ಳಲು ಸಾಧ್ಯವಿದೆ.

ನಮ್ಮ ಪುರುಷಪ್ರಧಾನ ವ್ಯವಸ್ಥೆ, ಹೆಣ್ಣೆಂದರೆ ಯಶಸ್ವೀ ಪುರುಷನ ಹಿಂದೆ ನಿಂತು ಅವನ ಎಲ್ಲ ಕಾರ್ಯಗಳಿಗೂ ಸಹಕರಿಸಿ, ಕೃತಜ್ಞತಾ ಭಾವದಿಂದ ಬೀಗುವ ದಾಸಿಯಾಗಿರಬೇಕೆಂದೇ ಬಯಸುವುದು ಹಲವು ಬಾರಿ ಢಾಳಾಗಿ ಗೋಚರಿಸುತ್ತಿರುತ್ತದೆ. ಇಂದು ಹೆಣ್ಣು ಎಲ್ಲ ಕ್ಷೇತ್ರಗಳಲ್ಲೂ ದಾಪುಗಾಲಿಡುತ್ತಿದ್ದಾಳೆ. ವಿದ್ಯಾಭ್ಯಾಸ ಹಾಗೂ ಉದ್ಯೋಗ ಪ್ರಮಾಣದಲ್ಲಿ ಸ್ತ್ರೀಯರ ಸಂಖ್ಯೆ ಗಣನೀಯವಾಗಿ ಹೆಚ್ಚಳವಾಗಿರುವುದು ದಾಖಲಾಗಿದ್ದರೂ ಉನ್ನತ ಅಧಿಕಾರ ಸ್ಥಾನಗಳಲ್ಲಿ, ಮಹತ್ವದ ನಿರ್ಧಾರ-ನಿರ್ಣಯಗಳನ್ನು ತೆಗೆದುಕೊಳ್ಳಬೇಕಾದ ಸ್ಥಾನಗಳಲ್ಲಿ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರದ ಪ್ರಮುಖ ಹುದ್ದೆಗಳಲ್ಲಿ ಅವಳಿಗಿನ್ನೂ ಗಮನಾರ್ಹವಾದ ಸ್ಥಾನ ದೊರಕಬೇಕಿದೆ. ಅವಳ ಬುದ್ಧಿವಂತಿಕೆ, ಸಾಮರ್ಥ್ಯ, ಪ್ರತಿಭೆ, ಜಾಣ್ಮೆಗಳೆಲ್ಲವೂ ಪರೋಕ್ಷವಾಗಿ ಉಪಯೋಗಿಸಲ್ಪಟ್ಟು, ಅವಳು ಶೋಷಣೆಗೊಳಪಡುವುದೇ ಹೆಚ್ಚು. ಹೀಗಾಗದಂತೆ ಎಚ್ಚರವಹಿಸಬೇಕಾದ ಅವಶ್ಯಕತೆ ಅವಳ ಮುಂದಿದೆ.

ಮಹಿಳೆಯರಲ್ಲಿ ಯಾಕೆ ಒಬ್ಬ ಪಂಪ, ಒಬ್ಬ ಕುಮಾರವ್ಯಾಸ, ಒಬ್ಬ ಕುವೆಂಪು, ಒಬ್ಬ ಬೇಂದ್ರೆ... ಹುಟ್ಟಲಿಲ್ಲಾ? ಎನ್ನುವ ಪ್ರಶ್ನೆ ಗೇಲಿ ಮಾಡುವ ಹಾಗೆ ಅನೇಕ ಸಂದರ್ಭಗಳಲ್ಲಿ ನಮ್ಮ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಕೇಳಿಬರುತ್ತಾ ಇರುತ್ತದೆ. ಇಂತಹ ದೊಡ್ಡ ವ್ಯಕ್ತಿಗಳು ಮಹಿಳೆಯರಲ್ಲಿ ಹುಟ್ಟಿಬರಲಿಲ್ಲ ಎನ್ನುವುದು ನಿಜವಾದ ವಿಷಯವೆ! ಆದರೆ ಮಹಿಳೆಯರಿಗೆ ಬರೆಯುವಂಥ ಅವಕಾಶಗಳು ತೆರೆದುಕೊಂಡಿದ್ದು ಯಾವಾಗ ಎಂದು ನಾವು ಯೋಚಿಸಬೇಕು. ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸವನ್ನೇ ನಿರಾಕರಿಸಿದಂತಹ ಕಾಲವೂ ಕೂಡ ಇತ್ತು. ವಚನ ಯುಗವನ್ನು ಬಿಟ್ಟರೆ, ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಉಚ್ಚವರ್ಗದ ಕೆಲವು ಹೆಣ್ಣುಮಕ್ಕಳಿಗೆ ಶಿಕ್ಷಣದ ಅವಕಾಶ ದೊರಕಲಾರಂಭಿಸಿದರೂ ಉನ್ನತ ಶಿಕ್ಷಣವನ್ನು ಪಡೆದು ತನ್ನ ವ್ಯಕ್ತಿತ್ವದ ಪರಿಧಿಯನ್ನು ಹಿಗ್ಗಿಸಿಕೊಂಡು ಯೋಚಿಸುವಂತಹ ಅವಕಾಶಗಳು ಹೆಚ್ಚಿನ ಪ್ರಮಾಣದಲ್ಲಿ ಸೃಷ್ಟಿಯಾಗಲಾರಂಭಿಸಿದ್ದು ೧೯ನೇ ಶತಮಾನದ ೨೦ರ ದಶಕದಲ್ಲಿ. ಹೀಗೆ ಶತಮಾನಗಳ ಕಾಲ ವಿದ್ಯೆಯಿಂದ ವಂಚಿತಳಾದ ಹೆಣ್ಣು ತಾನೇ ತನಗನಿಸಿದ್ದರಲ್ಲಿ ಕೆಲವಷ್ಟನ್ನಾದರೂ ಅಭಿವ್ಯಕ್ತಿಸುವಂತಹ ಅವಕಾಶಗಳು ಸಿಕ್ಕಿದ್ದು ಇತ್ತೀಚೆಗಷ್ಟೆ. ಅದರಲ್ಲೂ ತಮ್ಮೆಲ್ಲಾ ಆಗುಹೋಗುಗಳ ಬಗೆಗೆ ನಿರೀಕ್ಷಿಸಿದ ಮಟ್ಟದಲ್ಲಿ ಇಂದಿಗೂ ಮುಕ್ತವಾಗಿ ಹೆಣ್ಣುಮಕ್ಕಳು ಬರೆಯಲು ಸಾಧ್ಯವಾಗಿಲ್ಲ ಎನ್ನುವುದು ಅಷ್ಟೇ ಸತ್ಯವಾದ ಮಾತು.

ಅಭಿವ್ಯಕ್ತಿಯಲ್ಲಿ ಪುರುಷ ಮತ್ತು ಸ್ತ್ರೀ ಎಂಬ ವಿಭಾಗಗಳಿವೆ ಎಂಬ ಕಲ್ಪನೆಯೇ ತಪ್ಪು. ಅಭಿವ್ಯಕ್ತಿ ಯಾವಾಗಲೂ ಒಂದೇ ಎಂಬ ವಾದ ಆಗೀಗ ಕೇಳಿಬರುತ್ತಿರುತ್ತದೆ. ಆದರೆ ಪುರುಷರ ಮತ್ತು ಸ್ತ್ರೀಯರ ಆಲೋಚನಾ ಕ್ರಮಗಳಲ್ಲಿ ಅನನ್ಯತೆ ಹಾಗೂ ವಿಭಿನ್ನತೆಗಳಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಸ್ವಲ್ಪ ವಿವೇಚಿಸಿ ನೋಡಿದರೆ ತನ್ನತನದ ಅರಿವಿನಿಂದ ಬರೆಯುವ ಮಹಿಳೆಯ ಕೃತಿಗಳ ಹಿಂದೆ ಒಂದು ಬಗೆಯ ಹೆಣ್ಣುತನ ಇರುವುದು ಗೋಚರಿಸುತ್ತದೆ. ಹೆಣ್ಣುತನ ಅಂದರೆ ಮತ್ತೆ ಸಾಂಪ್ರದಾಯಿಕವಾಗಿ ಹೇಳುವ ಹಾಗೆ ತ್ಯಾಗ, ಔದಾರ್ಯ, ಕ್ಷಮಾಶೀಲತೆ, ಮಾರ್ದವತೆ, ಮಾಗುವಿಕೆ ಎಂದಷ್ಟೇ ಅರ್ಥವಲ್ಲ. ನಿಜಾರ್ಥದಲ್ಲಿ ಹೆಣ್ಣುತನ ಎಂದರೆ ಪುರುಷ ಪ್ರಧಾನ ಮೌಲ್ಯಗಳನ್ನೊಳಗೊಂಡ ಗಂಡುತನದ ಅಭಿವ್ಯಕ್ತಿಯನ್ನು ನಿರಾಕರಿಸಿ, ಅದಕ್ಕೆ ಎದುರಾಗಿರುವಂತಹ ಒಂದು ಸಹಜ ಅಭಿವ್ಯಕ್ತಿಯನ್ನು ರೂಪಿಸಿಕೊಳ್ಳುವುದೇ ಆಗಿದೆ.

ಪುರುಷನಿಗೆ ತಾನು ಮಹಿಳೆಗಿಂತ ಶ್ರೇಷ್ಠ, ಅನನ್ಯ ಎನ್ನುವಂಥ ಪ್ರಬಲವಾದ ನಂಬಿಕೆ ಇರುತ್ತದೆ. ಆದರೆ ಪುರುಷ ನಿರ್ಮಿತ ಈ ಸಮಾಜದಲ್ಲಿ ಮಹಿಳೆ ಕೂಡ ವಿಭಿನ್ನ, ಅನನ್ಯ ಎನ್ನುವಂಥ ಸಣ್ಣ ಸೂಕ್ಷ್ಮವೂ ಹಲವು ಬಾರಿ ಜಾಣಮರೆವಿಗೆ ಸಿಕ್ಕಿ, ಪುರುಷ ಪ್ರಪಂಚಕ್ಕೆ ಬೇಕೆಂದಂತೆಯೇ ಅವಳು ಮಾತನಾಡಬೇಕು, ಬರೆಯಬೇಕು, ಬದುಕಬೇಕು ಎಂಬ ಒತ್ತಾಯ ಮತ್ತು ಒತ್ತಡಗಳು ಹೇರಲ್ಪಡುತ್ತವೆ. ಜೊತೆಗೆ ಕೆಲವೊಮ್ಮೆ ಮಹಿಳೆ ಕೂಡ ತಾನು ಪುರುಷನ ಪ್ರತಿರೂಪ, ಪಡಿಯಚ್ಚು ಆಗುವುದರಲ್ಲೇ ತನ್ನ ಸಾರ್ಥಕತೆ ಇದೆ ಎಂದು ಭಾವಿಸುವಂತೆ ಸಮಾಜ ಅವಳನ್ನು

**ರೂಪ ಹಾಸನ**

ನಿರ್ದೇಶಿಸುತ್ತದೆ. ಆದರೆ ಅವಳು ಅವನಂತೆಯೇ ಇರಬೇಕಿಲ್ಲ, ಯೋಚಿಸಬೇಕಿಲ್ಲ, ಮಾತನಾಡಬೇಕಿಲ್ಲ, ಬರೆಯಬೇಕಿಲ್ಲ.

ತಾವು ನಿಜವಾಗಿ ಏನು ? ತಮ್ಮ ಅನನ್ಯತೆ, ಸೃಷ್ಟಿ, ಸಹಜತೆಗಳೇನು ? ಎನ್ನುವುದನ್ನು ಹಲವು ಬಾರಿ ಮಹಿಳೆಯರು ರೂಢಿಗತವಾಗಿಯೋ, ಪ್ರಜ್ಞಾಪೂರ್ವಕವಾಗಿಯೋ, ಇಲ್ಲವೆ ಅರಿವಿಲ್ಲದೇ ಅಳಿಸಿಹಾಕಿರುತ್ತಾರೆ. ಆದರೆ ತನ್ನ ನಿಜ ಆಂತರಿಕ ಸ್ವರೂಪವನ್ನು ಕಂಡುಕೊಂಡ ಮಹಿಳೆ ಮಾತ್ರ ತನ್ನ ಉತ್ಕಟ ಜೀವನಪ್ರೀತಿ, ಭಾವತೀವ್ರತೆಯೊಂದಿಗೆ, ತನ್ನ ಸಹಜತೆಯಲ್ಲಿಯೇ ಬದುಕುತ್ತಾಳೆ ಮತ್ತು ಬರೆಯುತ್ತಾಳೆ. ಪುರುಷನಿಗೆ ಮುಖ್ಯವಾಗುವಂತಹ ಯುದ್ಧ, ರಾಜಕಾರಣ, ತಂತ್ರಗಾರಿಕೆ, ಬೌದ್ಧಿಕ ಶ್ರೇಷ್ಠತೆ, ಪೌರುಷ ಪ್ರದರ್ಶನ, ಪ್ರಾಬಲ್ಯ ವಿಸ್ತರಣೆ... ಎಲ್ಲವೂ ಮಹಿಳೆಗೆ ಅಮುಖ್ಯ ಎನ್ನಿಸುತ್ತವೆ. ಆಪ್ತ ಸಂಬಂಧಗಳು, ಜೀವಂತಿಕೆಗೆ ಮುಖಾಮುಖಿಯಾಗುವಂತಹ ತುಡಿತಗಳು, ಅದರೊಂದಿಗಿನ ತನ್ನ ಗಾಢ ಹೊಂದಾಣಿಕೆ, ಚಿಕ್ಕ–ಪುಟ್ಟ ವಿಷಯವೂ ನೀಡುವ ಬೆರಗು, ಸಂತಸ ಅವಳಿಗೆ ಮುಖ್ಯವೆನಿಸುತ್ತವೆ. ಅದನ್ನು ಕುರಿತೇ ಮಹಿಳೆ ಬರೆಯುತ್ತಾಳೆ. ಆದರೆ ಸಮಾಜಕ್ಕೆ ಅದೆಂದೂ ಮುಖ್ಯ ಆಗುವುದಿಲ್ಲ. ಏಕೆಂದರೆ, ಶ್ರೇಷ್ಠ ಮಾದರಿ ಹಾಗೂ ಅಂತಿಮ ಮಾನದಂಡದ ತಕ್ಕಡಿಗಳಿರುವುದು ಪುರುಷರ ಕೈಯಲ್ಲಿ ! ನಮ್ಮ ಸಮಾಜ ನಿರ್ಮಾಣಗೊಂಡಿರುವುದೇ ಪುರುಷಕೇಂದ್ರಿತ ಏಕಪಕ್ಷೀಯ ನಿರ್ಣಯಗಳಿಂದ ! ಅಲ್ಲಿ ಅವಳ ಭಾವನೆಗಳು ನಗಣ್ಯ.




ಈ ಹಿನ್ನೆಲೆಯಲ್ಲಿ ನೋಡಿದಾಗ ಮಹಿಳೆ ಹಲವು ಬಾರಿ ತನ್ನ ಅಭಿವ್ಯಕ್ತಿಗೆ ಸ್ವಯಂ ನಿಯಂತ್ರಣ ಹಾಕಿಕೊಂಡಿರುವುದು ಕಾಣುತ್ತದೆ. ಮುಖ್ಯವಾಗಿ ಧರ್ಮ ಮತ್ತು ಗಂಡು–ಹೆಣ್ಣಿನ ಸಂಬಂಧದ ಕುರಿತು ಮುಕ್ತವಾಗಿ ಅಭಿವ್ಯಕ್ತಿಸಿದಾಗ, ಪ್ರಶ್ನಿಸಿದಾಗ, ಮರುಚಿಂತಿಸಿದಾಗ ಬಹಳಷ್ಟು ಬಾರಿ ಮಹಿಳೆಯನ್ನು ದಮನಿಸುವ ಪ್ರಯತ್ನಗಳಾಗುತ್ತವೆ. ಹೀಗೆಂದೇ ಅದನ್ನು ಮುಚ್ಚಿಟ್ಟು, ರೂಪಕಾತ್ಮಕವಾಗಿ, ಸಂಕೇತಗಳ ಮೂಲಕ ಬರೆಯುವುದನ್ನು ಕಾಣುತ್ತೇವೆ. ಅದನ್ನು ಮೀರಿ ಖುಲ್ಲಂಖುಲ್ಲಾ ಆಗಿ ಬರೆದರೆ, ಮಾತನಾಡಿದರೆ ಅವಳ ಅಭಿವ್ಯಕ್ತಿ ಸ್ವಾತಂತ್ರ್ಯ ಹಲ್ಲೆಗೊಳಗಾಗುತ್ತಲೇ ಇರುತ್ತದೆ. ಹೀಗೆಂದೇ ಅವಳು ತನ್ನನ್ನು ತಾನು ಈ ಸಮಾಜದಿಂದ ರಕ್ಷಿಸಿಕೊಳ್ಳುವುದಕ್ಕೆ ಒಂದು ಮುಖವಾಡವನ್ನು ಹಾಕಿಕೊಂಡೇ ಬಹಳಷ್ಟು ಬಾರಿ ಅಭಿವ್ಯಕ್ತಿಸುತ್ತಾ ಇರುತ್ತಾಳೆ. ಮಹಿಳೆಯನ್ನು ಸದಾ ಒಂದು 'ಗುಡ್ ಗರ್ಲ್ ಸಿಂಡ್ರೋಮ್' ಆವರಿಸಿರುತ್ತೆ. ಅದು ಈ ಸಮಾಜಕ್ಕೆ ಒಪ್ಪಿತವಾಗಿದ್ದನ್ನೇ ಬರೆದು ಒಳ್ಳೆಯವಳು ಎನ್ನಿಸಿಕೊಳ್ಳಬೇಕು ಎನ್ನುವ ಭಾವನೆ. ಅದು ಮಹಿಳೆಯನ್ನು ತನ್ನ ಪೂರ್ವ ನಿರ್ಧಾರಿತ ಚೌಕಟ್ಟನ್ನು ಮೀರಿಹೋಗುವುದಕ್ಕೆ ಬಿಡುವುದಿಲ್ಲ. ಹೀಗಾಗಿಯೇ ಮುಕ್ತವಾಗಿ ಬರೆಯುವಂತಹ ಅವಕಾಶಗಳಿದ್ದಾಗಲೂ ಹಾಗೆ ಬರೆಯುವ ಪ್ರಯತ್ನ ಮಾಡದಿರುವ ಮಹಿಳೆಯರೂ ಇಲ್ಲದಿಲ್ಲ. ಇಂತಹ ಮಿತಿಗಳನ್ನು ಮೀರಿದಾಗ ಮಾತ್ರ ಮಹಿಳೆ ಮುಕ್ತವಾಗಿ ಅಭಿವ್ಯಕ್ತಿಸುವುದಕ್ಕೆ ಸಾಧ್ಯ.

ಹೆಣ್ಣೆಂದರೆ ಹೀಗೇ... ಅವಳೆಂದರೆ ಇಷ್ಟೇ... ಎಂದು ಅವಳ ಗುಣಸ್ವಭಾವಗಳಿಗೆ ಕವಚ ತೊಡಿಸಿ ಇರಿಸಿದ್ದಾಗಲೂ ಹೆಣ್ಣಿನ ಅಭಿವ್ಯಕ್ತಿಗಳು ಆ ಚೌಕಟ್ಟನ್ನೂ ಮೀರಿ ದಿಟ್ಟವಾಗಿ ಹೊರಬಿದ್ದಿವೆ. ಹಾಗೇ ಸಂಘರ್ಷಕ್ಕೂ ಗುರಿಯಾಗಿವೆ. 'ಗಿಡವೆಂದು ತಿಳಿದೆಯೋ ಹೆಣ್ಣು ಜನ್ಮದ ಒಡಲ, ಫಲಗಳನ್ನು ಮನಬಂದಂತೆ ಸೃಜಿಸುವುದಕೆ ?' ಎಂದು ಪ್ರಶ್ನಿಸಿದ ಬೆಳಗೆರೆ ಜಾನಕಮ್ಮ, 'ಹೊಟ್ಟೆಯ ಈ ಕಿಚ್ಚು ಮುಟ್ಟಲಾಗದ ಬೆಂಕಿ ನನ್ನ ಸಿಟ್ಟೋಗಿ ತಟ್ಟಲಿ ಆ ಪರಶಿವನ ಮಡದಿಗೆ' ಎಂದು ಶಪಿಸಿದ ಜಾನಪದ ಕವಯಿತ್ರಿ 'ಆರೂ ಇಲ್ಲದವಳೆಂದು ಅಳಿಗೊಳಲು ಬೇಡ ಕಂಡಯ್ಯ, ಏನ ಮಾಡಿದಡೆಯೂ ನಾನಂಜುವಳಲ್ಲ, ತರಗೆಲೆಯ ಮೆಲಿದು ನಾನಿಹೆನು, ಸುರಗಿಯ ಮೇಲೆರಗಿ ನಾನಿಹೆನು ಚೆನ್ನಮಲ್ಲಿಕಾರ್ಜುನಯ್ಯ ಕರಕರ ಕಾಡಿ ನೋಡಿದರೆ ಒಡಲನೂ ಪ್ರಾಣವನು ನಿಮಗೊಪ್ಪಿಸಿ ಶುದ್ಧಳಿಹೆನು' ಎಂದು ದಿಟ್ಟವಾಗಿ ಹೇಳಿದ ಅಕ್ಕಮಹಾದೇವಿ, ತಮ್ಮ ಕಾಲಗಳಲ್ಲಿ ನಿಜ ಸಂಘರ್ಷಕ್ಕೆ ಗುರಿಯಾಗಿದ್ದಾರೆ. ಅವರು ಆತ್ಮಚರಿತ್ರೆಗಳನ್ನು ಬರೆದಿಟ್ಟಿದ್ದರೆ ಅವುಗಳು ಈಗ ದಾಖಲೆಗಳಾಗುತ್ತಿದ್ದವು. ಮಹಿಳೆಯ ಇತಿಹಾಸ ಅವಳಿಂದಲೇ ಬರೆಯಲ್ಪಟ್ಟಿದ್ದರೆ ಇಂದಿನವರೆಗಿನ ಹಾದಿಯಲ್ಲಿನ ಹೋರಾಟ, ನೋವು, ನಲಿವುಗಳು ಸ್ಪಷ್ಟವಾಗಿ ಅಭಿವ್ಯಕ್ತಿಗೊಳ್ಳುತ್ತಿದ್ದವು.

ಇತ್ತೀಚಿನ ದಿನಗಳಲ್ಲಿ ಸ್ತ್ರೀ ಸಂವೇದನೆಗಳಿಗೆ ಹೆಚ್ಚಿನ ಮಹತ್ವ ಬಂದಿರುವುದು ಒಂದು ಆರೋಗ್ಯಕರ ಬೆಳವಣಿಗೆ. ಅವಳೇನೆನ್ನುತ್ತಾಳೆ ? ಎಂಬ ಕುತೂಹಲ, ಅವಳೂ ನಮ್ಮಂತೆಯೇ, ನಮಗೆ ಸಮಾನಳು, ಅವಳೂ ಮಾತಾಡಲಿ ಸಾಮಾಜಿಕವಾಗಿ ಪಾಲ್ಗೊಳ್ಳಲಿ ಎಂಬ ಸಮನ್ವಯ ಭಾವ, ಅವಳ ವಿಚಾರಕ್ಕೂ ಬೆಲೆ ಕೊಡಬೇಕೆಂಬ ಗೌರವದ ನಿಲುವುಗಳು ಒಂದಿಷ್ಟಾದರೂ ಕಾಣುತ್ತಿರುವುದು ಅವಳ ಭವಿಷ್ಯದ ಬಗೆಗೆ ಕೊಂಚ ಆಶಾದಾಯಕವಾದ ದೃಷ್ಟಿ ಇರಿಸಿಕೊಳ್ಳುವಂತೆ ಪ್ರೇರೇಪಿಸುತ್ತದೆ. ಆದರೆ ಇಂದಿಗೂ ಹೆಣ್ಣಿಗೆ ತನ್ನ ಮನಸ್ಸಿನ ಎಲ್ಲ ಮುಖಗಳನ್ನೂ ಪ್ರಪಂಚದೆದುರು ಮುಕ್ತವಾಗಿ ತೆರೆದಿಡಲು ಸಾಧ್ಯವಾಗಿಲ್ಲ. ಅವಳು ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಪ್ರಬುದ್ಧಳಾಗುವಷ್ಟು ವೇಗದಲ್ಲಿ ನಮ್ಮ ಪುರುಷಪ್ರಧಾನ ಸಮಾಜ ಬದಲಾಗಲು ಸಾಧ್ಯವಿಲ್ಲ. ಇವೆರಡರ ನಡುವಿನ ಅಂತರವನ್ನು ಗಮನದಲ್ಲಿಟ್ಟುಕೊಂಡು ಇಂದಿನ ಮಹಿಳೆ ತನ್ನ ನಿಲುವುಗಳನ್ನು ಅತ್ಯಂತ ಎಚ್ಚರಿಕೆಯಿಂದ, ಘನತೆಯಿಂದ ಮಂಡಿಸಬೇಕಿರುವುದು ಇಂದಿನ ಅನಿವಾರ್ಯತೆ. ಜೊತೆಗೆ, ತನ್ನ ನಿಗೂಢ ಅವ್ಯಕ್ತ ಲೋಕದ ವಿಶಿಷ್ಟತೆಯನ್ನು ದಿಟ್ಟತನದಿಂದ ಪ್ರತಿಪಾದಿಸಲು ಹೊರಟಾಗಲೆಲ್ಲಾ ಸೂಕ್ಷ್ಮಗ್ರಹಿಕೆಗಳಿಲ್ಲದ ಸಮಾಜದಿಂದ ವಿವಾದಗಳು, ಸಂಘರ್ಷಗಳು ಉಂಟಾಗುತ್ತವೆ. ಹೀಗಾಗಿ ಅವಳು ಪುರುಷ ನಿರ್ಮಿತ ಪೂರ್ವಗ್ರಹಗಳ ಗೋಡೆಯನ್ನು ಒಡೆಯುತ್ತಾ, ಮೊದಲು ತನಗೆ ತಾನು ಸರಿಯಾಗಿ ಅರ್ಥವಾದ ನಂತರ ಹೊರ ಜಗತ್ತಿಗೆ ತೆರೆದುಕೊಳ್ಳುವುದು ಮುಖ್ಯ.

ಮುಖ್ಯವಾಗಿ, ಮಹಿಳೆಯರು ಬರವಣಿಗೆಯನ್ನು ಇನ್ನೂ ಹೆಚ್ಚು ಗಂಭೀರವಾಗಿ ಪರಿಗಣಿಸಬೇಕಿದೆ. ಸಾಂಸ್ಕೃತಿಕವಾಗಿ, ವೈಚಾರಿಕವಾಗಿ, ಮುಕ್ತವಾಗಿ ಸವಾಲುಗಳನ್ನು ಎದುರಿಸುವುದಕ್ಕೆ ಅವರು ಸಜ್ಜಾಗಬೇಕಿದೆ. ತನ್ನ ಬದುಕಿನ ಎಲ್ಲ ಸೂಕ್ಷ್ಮಗಳನ್ನೂ, ಮುಖಗಳನ್ನೂ ಅವಳೇ ಯಾವುದೇ ಬಾಹ್ಯ ಒತ್ತಡ, ನಿರ್ಬಂಧವಿಲ್ಲದೆ, ಪೂರ್ವ ನಿರ್ಧಾರಿತ ಮೌಲ್ಯಗಳ ಗೋಜಲು ಗದ್ದಲಗಳಿಲ್ಲದೆ, ಮುಕ್ತವಾಗಿ ತೆರೆದಿಡುವಂತಹ ಸಾಮಾಜಿಕ ಸ್ಥಿತಿ ನಿರ್ಮಾಣಗೊಂಡರೆ, ಮಹಿಳೆಯ ಬರಹಗಳು ಅವಳ ಮನಸ್ಸು, ಪುರುಷನ ವರ್ತನೆ ಹಾಗೂ ಸಾಮಾಜಿಕ ಬದಲಾವಣೆಯ ಮೈಲಿಗಲ್ಲುಗಳಾಗುತ್ತವೆ. ಅವಳ ಸಂಘರ್ಷಗಳು ಅವಳದೇ ಅಭಿವ್ಯಕ್ತಿಯಲ್ಲಿ ದಾಖಲಾದಾಗ, ನಿಧಾನವಾಗಿಯಾದರೂ ಸಮಾಜ ಅಂತರ್ಮುಖಿಯಾಗಿರುವ ಅವಳ ಸೂಕ್ಷ್ಮ ಬಹುಮುಖೀ ಭಾವಗಳನ್ನ, ವಿಚಾರಗಳನ್ನ ಸ್ವಾಗತಿಸಬಹುದು.

ಈ ಹಿನ್ನೆಲೆಯಲ್ಲಿಯೇ ಸಾಂಸ್ಕೃತಿಕ, ಸಾಮಾಜಿಕ, ಸಾಹಿತ್ಯಿಕ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಅನಿಯಂತ್ರಿತವಾಗಿ, ಪೂರ್ಣಪ್ರಮಾಣದಲ್ಲಿ ತೊಡಗಿಕೊಂಡಂತಹ ಮಹಿಳೆಯರ ಆತ್ಮಕಥೆಗಳು ಹೆಚ್ಚು ಸ್ವಾಗತಾರ್ಹವಾದುವು. ತನ್ನ ಬದುಕಿನ ಎಲ್ಲ ಸೂಕ್ಷ್ಮಗಳನ್ನು ಅವಳೇ ಯಾವುದೇ ಒತ್ತಡ, ನಿರ್ಬಂಧವಿಲ್ಲದೆ ಮುಕ್ತವಾಗಿ ತೆರೆದಿಡುವ ಸಾಮಾಜಿಕ ಸ್ಥಿತಿ ಇಂದಿಗೂ ನಿರ್ಮಾಣಗೊಂಡಿಲ್ಲವಾದರೂ ಈ ರೀತಿಯ ದಾಖಲೆಗಳು ಮಹಿಳೆಯ ಹಾಗೂ ಸಾಮಾಜಿಕ ಬದಲಾವಣೆಯ ಮೈಲಿಗಲ್ಲುಗಳಾಗುತ್ತವೆ. ಅವಳ ಸಂಘರ್ಷಗಳು ಅವಳದೇ ದಾಖಲೆಗಳ ಮೂಲಕ ಬಿಂಬಿಸಲ್ಪಟ್ಟಾಗ ನಿಧಾನವಾಗಿಯಾದರೂ ಸಮಾಜ, ಅಂತರ್ಮುಖಿಯಾಗಿರುವ ಅವಳ ಬಹುಮುಖೀ ಭಾವಗಳನ್ನು, ವಿಚಾರಗಳನ್ನು ಸ್ವಾಗತಿಸುತ್ತದೆ.

**ರೂಪ ಹಾಸನ**
'ಪ್ರೇರಣ', ಸೇಂಟ್ ಜೋಸೆಫ್ ಶಾಲೆ ರಸ್ತೆ, ಉತ್ತರ ಬಡಾವಣೆ, ಹಾಸನ – ೫೭೩ ೨೦೧

ನಾನು ಓದಿದ ಪುಸ್ತಕ




ಕೃತಿಯ ಹೆಸರು : **ಷಾಜಹಾನರ 'ನಖಾಬ್'**
ಕನ್ನಡಕ್ಕೆ : **ಸ. ರಘುನಾಥ**
ಪುಟಗಳು : ೬೪ ಬೆಲೆ : ರೂ. ೫೦/-
ಪ್ರಕಾಶಕರು
**ವಿಹಾ ಪುಸ್ತಕ,** ಬೆಂಗಳೂರು

# ಧಾರ್ಮಿಕ ಪ್ರತಿರೋಧ ಮತ್ತು ಅನುವಾದ ಷಾಜಹಾನರ 'ನಖಾಬ್'

**ಶ್ರೀಧರ ಪಿಸ್ಸೆ**

**ಧಾ**ರ್ಮಿಕ ಪ್ರತಿವಾದಿಗಳಂತೆ ಕಾಣುವ ಸಲ್ಮಾನ್ ರಶ್ದಿ ಅವರ 'ಸೆಟ್ಯಾನಿಕ್ ವರ್ಸಸ್' ಆಗಲೀ ತಸ್ಲಿಮಾ ನಸ್ರೀನ್ ಅವರ 'ಲಜ್ಜಾ' ಆಗಲೀ ಹೆಚ್ಚು ಜನರ ಗಮನ ಸೆಳೆದದ್ದು ಇವು ಹೊಂದಿರುವ ಧಾರ್ಮಿಕ ನೆಲೆಯನ್ನು ಕಡೆಗಣಿಸಬೇಕಾದ ಆಶಯ ಕುರಿತು ಪುರೋಹಿತ ವರ್ಗದಿಂದ ಉಂಟಾದ ಪ್ರತಿಭಟನೆಯಿಂದಾಗಿ. ಕನ್ನಡದಲ್ಲಿ ಸಂಸ್ಕಾರ, ಘಟಶ್ರಾದ್ಧ ಮೊದಲಾದ ಕಥನ ಕ್ರಮದ ಮೂಲಕ ಈ ಸಾಲಿನಲ್ಲಿ ಅನಂತಮೂರ್ತಿ ಗುರುತಿಸಿಕೊಂಡರೂ ಅವರು ಧಾರ್ಮಿಕ ಪ್ರತಿವಾದಿಯೇನಲ್ಲ.

ಭಾರತದ ಸಂತ ಪರಂಪರೆಯನ್ನು ಇದೇ ಸಾಲಿನಲ್ಲಿಟ್ಟು ನೋಡಬಹುದು. ಆದರೆ ಅವರ ಕೊಡುಗೆ ಬೌದ್ಧಿಕ ಸಾಹಸಕ್ಕಿಂತ ಧರ್ಮದ ಅಧಿಕಾರಿಶಾಹಿ ನೆಲೆಯನ್ನು ಕಡೆಗಣಿಸಿ ಕಂಡಿತು. ಭಕ್ತಿ ಕಲ್ಪನೆಯ ಮೂಲಕ ಸಾಮರಸ್ಯದ ಕಡೆಗೆ ಗಮನವನ್ನು ಕೇಂದ್ರೀಕರಿಸಿತು. ಅಲ್ಲದೆ, ಅದರ ಕ್ರಾಂತಿಕಾರಿ ಸಾಮಾಜಿಕ ಆಶಯಗಳು ಧಾರ್ಮಿಕ ಅಧೀನತೆಯಲ್ಲಿಯೇ ಮೂಡಿದವು. ಆದ್ದರಿಂದ ಜ್ಞಾನದ ನಿರಂಕುಶತ್ವ ಸಾಧಿಸಲಾಗದೆ ಧರ್ಮವು ರಾಜಕಾರಣದ ಭಾಗವಾಯಿತು. ಸಾಧಿತವಾದ ಅಷ್ಟಿಷ್ಟು ಬೌದ್ಧಿಕ ಸಾಧನೆಯೂ ಇದರಿಂದ ಮಸುಕಾಯಿತು.

ಇಲ್ಲಿ ನಾನು ಹೇಳುತ್ತಿರುವುದು ಸಮುದಾಯವೊಂದಕ್ಕೆ ಸೇರಿದ ಲೇಖಕ ತನ್ನ ಸಮುದಾಯದ ಆಲೋಚನಾ ಮತ್ತು ಭಾವನಾ ಸ್ಥರಗಳನ್ನು ಪರಿಷ್ಕರಿಸುವ ಕಾರ್ಯವೆ ಸಮುದಾಯದ ಮಟ್ಟದಲ್ಲಿ ಸವಾಲಿನದೂ ವ್ಯಕ್ತಿ ಮಟ್ಟದಲ್ಲಿ ತನ್ನನ್ನೇ ತಾನು ತಿದ್ದಿಕೊಂಡು ಹೊಸ ಮನುಷ್ಯನಾಗುವ ಬಗೆಯದೂ ಆಗಿರುತ್ತದೆ ಎಂದು.

ಬಹು ಸಮುದಾಯಗಳ ಸಮಾಜವಿರುವ ಭಾರತದಲ್ಲಿ ಸಮುದಾಯದೊಳಗಿನ ಈ ಬೆಳವಣಿಗೆ ಆ ಸಮುದಾಯದ ಆಲೋಚನೆಯ ಮಂತು ಕಡೆದು ಮತ್ತಷ್ಟು ವಿವೇಕವನ್ನು ಹೆಚ್ಚಿಸುತ್ತದೆ.

ಡಿವಿಜಿ ಉಮರನನ್ನು ಕನ್ನಡಕ್ಕೆ ತಂದಾಗ ಜೀವನವನ್ನು ಧಾರ್ಮಿಕ ನಂಬಿಕೆಯ ಚೌಕಟ್ಟಿನಾಚೆ ನಿಂತು ಶುದ್ಧ ಸಾಮಾಜಿಕ ನೆಲೆಯ ವಾಸ್ತವಿಕ ದೃಷ್ಟಿಕೋನದಿಂದ ನೋಡಲು ಉದ್ದೀಪಿಸಿತು. ಅಲ್ಲದೆ ಪಾರಂಪರಿಕ ಮೌಲ್ಯಗಳ ಪ್ರತಿಪಾದಕರಂತೆ ಕಾಣುವ ಸ್ವತಃ ಡಿವಿಜಿಯವರನ್ನೆ ಮಂಕುತಿಮ್ಮನ ಕಗ್ಗದೆಡೆಗೆ ಸೆಳೆಯಿತು. 'ಬದುಕು ಜಟಕಾ ಬಂಡಿ ವಿಧಿಯದರ ಸಾಹೇಬ' ಎಂದು ಉದ್ಗಾರ ತೆಗೆಯುವಂತೆ ಮಾಡಿ ಪಾರಂಪರಿಕ ಜೀವನ ಮೌಲ್ಯ ಕಲ್ಪನೆಯೊಂದಿಗೆ ನಿರೀಶ್ವರವಾದಿ ತಾತ್ವಿಕತೆಯನ್ನು ಬೆರೆಸುವಂತೆ ಮಾಡಿತು. ಅಂದರೆ ಹೊರ ಸಮುದಾಯವೊಂದರ ಆಲೋಚನಾ ಕ್ರಮದೊಂದಿಗೆ ನಡೆಸಿದ ಮುಖಾಮುಖಿಯಿಂದಾಗಿ ತನ್ನ ಸಮುದಾಯದ ಚಿಂತನಾಕ್ರಮದಲ್ಲಿ ಬೆಳವಣಿಗೆ ತರಲು ಸಾಧ್ಯವಾಯಿತು. ಭಿನ್ನ ಸಮುದಾಯಗಳ ನಡುವಿನ ಅಸ್ತಿತ್ವದ ಪ್ರಶ್ನೆಯಾಗಲೀ ರಾಜಕಾರಣದ ಪ್ರಶ್ನೆಯಾಗಲೀ ಅಡ್ಡಗೋಡೆಯಾಗಿ ಮುಂದುಮಾಡಿಕೊಳ್ಳದೆ, ಒಟ್ಟಾರೆಯಾಗಿ ಮಾನವನ ಮನಸ್ಸು ಅರಳಿಸುವ ಕ್ರಮದಲ್ಲಿ ಸಾಗಿದ ಕಾರ್ಯವಿಧಾನವಿದು.

ಆದರೆ ಒಂದು ಸಮುದಾಯದ ಅರೆಕೊರೆಗಳನ್ನು ಕುರಿತು ಮತ್ತೊಂದು ಸಮುದಾಯದ ಲೇಖಕ ದನಿಯೆತ್ತಿದರೆ ಅಲ್ಲಿ ಅನಗತ್ಯ ಸ್ವಸಮರ್ಥನೆ ಮತ್ತು ಪರರ ಖಂಡನೆ ವಸ್ತುವೂ ವಿಧಾನವೂ ಆಶಯವೂ ಆಗಿ ಕಾರ್ಯ ನಿರ್ವಹಿಸುತ್ತದೆ. ಕ್ರಮೇಣ ಅದು ಭೌತಿಕ ಸಂಘರ್ಷಕ್ಕೂ ಮೂಲವಾಗಬಹುದು. ಇಂಥದ್ದೊಂದು ಎಳೆಯೂ ಪ್ರಸ್ತುತ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ 'ಪ್ರತಿ ಸಂಸ್ಕೃತಿ' ಚಿಂತನಾ ಕ್ರಮದಲ್ಲಿ ಅಪ್ರಧಾನವಾಗಿ ಕಾರ್ಯಪ್ರವೃತ್ತವಾಗಿದೆ.

ಈಗ ಆಂಧ್ರದ ಮುಸ್ಲಿಂ ಮಹಿಳೆ ಷಾಜಹಾನ್ ತೆಲುಗಿನಲ್ಲಿ ಪ್ರಕಟಿಸಿದ ಕವನ ಸಂಕಲನದ ಕನ್ನಡ ಅನುವಾದವನ್ನು ಗೆಳೆಯ ಸ. ರಘುನಾಥ ಹೊರತಂದಿದ್ದಾರೆ. 'ಉಮರನ ಒಸಗೆ'ಯಂತೆ ಇಲ್ಲಿಯೂ ಲೇಖಕ ಮತ್ತು ಅನುವಾದಕರು ಭಿನ್ನ ಸಮುದಾಯಗಳಿಗೆ ಸೇರಿದವರಾಗಿದ್ದಾರೆ. ಈ ಇಬ್ಬರ ವಸ್ತು, ಆಶಯ, ವಿಧಾನಗಳು ಹೇಗೆ ಕೆಲಸ ಮಾಡಿವೆ ಎಂಬುದು ಕುತೂಹಲಕಾರಿ ಅಂಶ.

ವಿಶ್ವದ ಪ್ರಮುಖ ಧರ್ಮಗಳಲ್ಲಿ ಇಸ್ಲಾಂ ಧರ್ಮ ಮಾತ್ರ ಹೆಣ್ಣಿನ ಮೇಲೆ ಹೆಚ್ಚು ನಿರ್ಬಂಧಗಳನ್ನು ಹೇರದೆ ಅವಳಿಗೆ ಸ್ವಾತಂತ್ರ್ಯವನ್ನು ನೀಡಿ ಉದಾರವಾಗಿ ನಡೆದುಕೊಂಡಿದೆ ಎಂದು ಹೇಳಲಾಗುತ್ತದೆ. ಇಂಥ ಅಭಿಪ್ರಾಯಗಳ ವಿರುದ್ಧ ಸೆಡ್ಡುಹೊಡೆದು ನಿಂತಿರುವ ಷಾಜಹಾನ್ ಹೇಳುತ್ತಾರೆ : "ನಿರ್ಬಂಧಗಳ ಸರಹದ್ದುಗಳಲ್ಲಿ ಗುಲಾಮಳಾಗಿ ಬೆಳೆದ ಹೆಣ್ಣು" *(ಪರದೆ ಸರಿಸಿ ನೋಡು)*.

ಮುಸ್ಲಿಂ ಮಹಿಳೆ ಹಲವು ನಿರ್ಬಂಧಗಳ ನಡುವೆ ಬಂಧಿಯಾಗಿದ್ದಾಳೆ. ಆಕೆ ಸ್ವಂತಿಕೆಯೆ ಇಲ್ಲದ ಗುಲಾಮಳು. ಮಾನವನು ಪ್ರಕೃತಿಯ ಮಗುವಾಗಿದ್ದರೂ ಆಕೆ ನಿಸರ್ಗದೊಂದಿಗೆ ಸಂಪರ್ಕ ಪಡೆದಿಲ್ಲ. ಹಾಗಾಗಿ ಅನ್ಯಳಾಗಿ, ಅನಾಥಳಾಗಿ ಬೆಳೆದಿದ್ದಾಳೆ. ಪ್ರಕೃತಿಯಲ್ಲಿನ ಬದಲಾವಣೆಗಳು ಮಾನವನಲ್ಲಿ ಉಂಟುಮಾಡುವ ಅಚ್ಚರಿ, ವಿಸ್ಮಯ, ಬೆರಗುಗಳ ಸಂಸರ್ಗದಿಂದ ದೂರವಾಗಿ ನಲಿವು ಕಾಣದ ಸೆರೆಯಲ್ಲಿ ಉಳಿದಿದ್ದಾಳೆ.

ಜೀವನ ಸಂಗಾತಿಯಾಗಿ ಅರ್ಧಾಂಗಿಯಾದ ಗಂಡಸು ಆಕೆಯ ಮೋಹದಲ್ಲಿ ತನ್ನನ್ನೆ ಮರೆತುಬಿಟ್ಟಿದ್ದಾನೆ, ತನ್ನ ಹಿತಾಸಕ್ತಿಯಲ್ಲಿ ಮುಳುಗಿಹೋಗಿದ್ದಾನೆ. ಅವನಿಗೆ ಹೆಣ್ಣಿನ ಮನದಾಳದಲ್ಲಿ ಮಡುಗಟ್ಟಿರುವ ದುಃಖದ ಸೆಲೆಯನ್ನು ಅರಿಯುವ, ನಿವಾರಿಸುವ ಕಣ್ಣಿಲ್ಲ. ಇಂಥ ಇಂಗಿತವನ್ನು ಹೇಳುವ ಈ ಕ್ರಮದಲ್ಲಿ ಹೊಸತನವಿದೆ : ಕಾಡಿಗೆ ಕಣ್ಣಿನಮಲಿನಲ್ಲಿ ತಣಿವ ಒಬ್ಬನೂ ಕಾಡಿಗೆಯ ಮರೆಯ ಕಣ್ಣೀರ ಸ್ಪರ್ಶಿಸುವುದಿಲ್ಲ *(ಅನಾರ್ಕಲಿ)*. ಸಹಜೀವಿಯಾದ ಗಂಡಸು ಆಕೆಯನ್ನು ಕಡೆಗಣಿಸಿ ನೋಡುತ್ತಿರುವ ಸಮಸ್ಯೆ ಇಂದಿನ ಹೊಸ ತಲೆಮಾರಿಗೆ ಮಾತ್ರ ಸೀಮಿತವಲ್ಲ. ಅದು ತನಗಿಂತ ಹಿಂದಿನ ಮತ್ತು ಹಿರಿಯ ತಲೆಮಾರಿನಿಂದ ಬಳುವಳಿಯಾಗಿ ಬಂದದ್ದು ಎಂಬುದನ್ನು ಈ ಮುಂದಿನ ಸಾಲುಗಳು ಹೇಳುತ್ತಿವೆ :

*ದಾರಿದ್ರ್ಯದ ಮಕಮಲ್ಲಿನಲ್ಲಿ ಸುತ್ತಿ ನಿನ್ನ ನವಾಬ*
*ಅಬ್ಬಜಾನನ ಬಡೀ ಬೀವಿಯಾಗಿ*
*ಅವನ ಚಟಗಳ ಆಸಿಡ್ಡಿನಲ್ಲಿ ಅದ್ದಿ ಎತ್ತಿದ ಅಸ್ಥಿಪಂಜರದಂತೆ*
*ಮೂಳೆಗಳ ನಿನ್ನ ರೂಪ (ಭಾವಚಿತ್ರ).*

ಯಾರಿಗೇ ಆಗಲಿ ತಾಯಿ ಎಂಬುದು ಅಭಿಮಾನದ ವಸ್ತು. ಅಂಥ ತಾಯಿ ಜೀವ ಕೂಡ ತಂದೆ/ಗಂಡಸಿನ ಹಲವು ಹೆಂಗಸರಲ್ಲಿ ಒಬ್ಬಳಾಗಿದ್ದಾಳೆ. ಅವನ ಮೂಗಿನ ನೇರದಲ್ಲಿ ಜೀವನ ರೂಪಿಸಿಕೊಂಡು ಜೀವಚ್ಛವದಂತಾಗಿದ್ದಾಳೆ. ಹಿಂದಿನ ಈ ಜೀವನಕ್ರಮದ ನಿದರ್ಶನಗಳು ಮುಂದಿನ ಜನತೆಯ ಜೀವನಕ್ರಮವನ್ನು ನಿರ್ಧರಿಸುತ್ತವೆ. ಅಂದರೆ ಹೊಸ ಪೀಳಿಗೆಯ ಯುವತಿಯರು ಪುರುಷ ಅಧೀನತೆ ಮೀರಬಾರದೆಂದು ಇದುವರೆಗೂ ನಡೆದು ಬಂದ ಸಂಪ್ರದಾಯ ಸೂಚಿಸುತ್ತಿದೆ. ಇದರಿಂದ ಆಧುನಿಕ ಮಹಿಳೆಯರ ಉಸಿರು ಕಟ್ಟುತ್ತಿದೆ.

ಅನೂಚಾನವಾಗಿ ನಡೆಸಿಕೊಂಡು ಬಂದಿರುವ ಹೆಣ್ಣಿನ ಕತ್ತು ಹಿಸುಕಿದಂಥ ಈ ಸಂಪ್ರದಾಯ, ಪದ್ಧತಿಗಳನ್ನು ಹೀಗೆಯೇ ಮುನ್ನಡೆಸಬೇಕೆಂಬ ಸಮುದಾಯದ ಇಂಗಿತವೆ ಮಾನವ ಜೀವಿಯ ಆಜನ್ಮವಾದ ಹಕ್ಕು ಮತ್ತು ಸ್ವಾತಂತ್ರ್ಯದ ಬಗ್ಗೆ ಚಿಂತಿಸುವಂತೆ ಮಾಡುತ್ತದೆ. ಸಂಪ್ರದಾಯದ ಇತಿಮಿತಿಗಳು ಅರಿವಿಗೆ ಬರುತ್ತವೆ.

ಮನುಷ್ಯ ನಿರ್ಮಿತ ಕಟ್ಟುಪಾಡುಗಳು ಮನುಷ್ಯನನ್ನೆ ಕಟ್ಟಿಹಾಕಬಲ್ಲವು; ಜೀವ ವಿರೋಧಿಯಾಗಿ ಪರಿಣಮಿಸಬಲ್ಲವು. ಈ ಎಲ್ಲ ಕಟ್ಟುಪಾಡುಗಳು ಮಾನವನೇ ಜಾರಿಗೆ ತಂದ ಕಲ್ಪನಾ ಮೌಲ್ಯಗಳಷ್ಟೆ ಎಂಬ ಅರಿವು ಕವಯಿತ್ರಿಯದು. ಹಾಗಾಗಿಯೆ ಸಂಪ್ರದಾಯದ ಬಿಗಿ ನಿಲುವು ನಗೆಪಾಟಲಿನದಾಗಿ ಕಂಡಿದೆ.

ಮತಧರ್ಮಗಳ ಸೀಮೆ ಸೀಳಿ ಹೊರ ಬಂದಿರುವ ಕವಯಿತ್ರಿಯ ಶುದ್ಧ ಮಾನವ ಪ್ರೀತಿಗೆ ಸಮುದಾಯದಲ್ಲಿ ಬೆಂಬಲದ ಬಲವಿಲ್ಲ. ಈ ಅನುಭವವನ್ನು ಸಿರಿತನ–ಬಡತನ, ದರ್ಪ–ಅಸಹಾಯಕತೆ, ಅಟ್ಟಹಾಸ–ಪೆಚ್ಚುಮುಖಗಳ ವೈರುಧ್ಯದ ಚಿತ್ರವನ್ನು ಕಟ್ಟಿಕೊಡಲಾಗಿದೆ. ಜೀವನ ಪ್ರೀತಿ ಪರವಾದ ದನಿ ಅಸಹಾಯಕವಾಗಿದ್ದರೂ ಧೃತಿಗೆಟ್ಟ ಸ್ಥಿತಿಯಲ್ಲಿಲ್ಲ. ಹಾಗಾಗಿ ಪುರೋಹಿತಶಾಹಿ ಮತ್ತು ಪುರುಷಶಾಹಿ ಕುರಿತ ಭಿನ್ನಾಭಿಪ್ರಾಯ ಅಸಹನೆಯಾಗಿ ಗಟ್ಟಿಗೊಳ್ಳುತ್ತದೆ. ಸಂಪ್ರದಾಯದ ಕಟ್ಟುಪಾಡುಗಳು ಬಿಗಿಗೊಂಡಂತೆಲ್ಲ ಅಸಹನೆ ಪ್ರತಿರೋಧವಾಗಿ ಮಾರ್ಪಾಟು ಹೊಂದುತ್ತದೆ. ಅದು ಪುರೋಹಿತಶಾಹಿ ಮತ್ತು ಪುರುಷಶಾಹಿಯ ಕೈಯಲ್ಲಿ ಅನುಭವಿಸಿದ ಕ್ರೂರ ದೌರ್ಜನ್ಯದಲ್ಲಿ ನಲುಗಿದ ನೋವಿನ ನೆನಪುಗಳನ್ನು ದಟ್ಟಗೊಳಿಸುತ್ತದೆ.

ದಮನಿತ ಸ್ಥಿತಿಯಲ್ಲಿರುವ ಮಾನವಜೀವಿಗಳು ಘನತೆಯನ್ನು ಕಳೆದುಕೊಂಡು ಬಿಡುತ್ತಾರೆ. ಅವರು ಮತ್ತೊಬ್ಬರ ಹಂಗಿನಲ್ಲಿ, ಆ ಮತ್ತೊಬ್ಬರ ಗುರಿ, ಉದ್ದೇಶಗಳನ್ನು ಸಾಧಿಸುತ್ತ ಅವರಿಗೆ ಬಲಿಯಾಗುವಂಥ ಸ್ವಾತಂತ್ರ್ಯಹೀನ ಪಶುಪಕ್ಷಿಗಳಂತೆ ಸ್ವಂತಿಕೆಯ ಆಲೋಚನಾ ಬಲವಿಲ್ಲದ ಕುರುಡರಾಗುತ್ತಾರೆ. ಮುಸ್ಲಿಂ ಮಹಿಳೆಯರು ಅಂಥ ಸ್ಥಿತಿಯಲ್ಲಿರುವವರೆಂದು ಮರುಕಪಡಲಾಗಿದೆ. ಪರದೆಗಳು, ಬುರ್ಖಾಗಳನ್ನು ಯಾವುದೇ ಜೀವಿ ತನ್ನ ಹುಟ್ಟಿನಿಂದ ತಾನು ಜೀವಿಸಲು ತನ್ನ ಆಜನ್ಮ ಹಕ್ಕಾಗಿ ಪಡೆದಿರುವ ಸಹಜ ಸ್ವಾತಂತ್ರ್ಯವನ್ನು ಕಸಿದಿರುವ ಸೂಚಕವಾಗಿ ಕಾಣಿಸಲಾಗಿದೆ. ಇಂಥ ಮುಸ್ಲಿಂ ಮಹಿಳೆಯರ ಬದುಕು ನಿರ್ದಿಷ್ಟ ಉದ್ದೇಶ, ಗುರಿ ಇಲ್ಲದೆ ನಿರುಪಯೋಗವಾಗಿದೆ. ಹಳೆ ಬಟ್ಟೆ ಹರಿದು ಹೊಸ ಬಟ್ಟೆ ಧರಿಸುವುದು ದಿನನಿತ್ಯದ ಸಾಮಾನ್ಯ ವಿಷಯವಾಗಿದ್ದರೂ ಅದು ಇಂಥವರ ಬಾಳಿನಲ್ಲಿ ವಿಶೇಷ ಅರ್ಥ ಪಡೆದು ದಾರುಣತೆಯ ರೂಪ ಧರಿಸುತ್ತದೆ. ಹಾಗಾಗಿ ಕವಯತ್ರಿ ಪುರೋಹಿತಶಾಹಿ ಮತ್ತು ಪುರುಷಶಾಹಿಯೊಂದಿಗಿನ ಮುಸ್ಲಿಂ ಮಹಿಳೆಯರ ಸಂಬಂಧವನ್ನು ಪ್ರಿಯೆ–ಪ್ರಿಯತಮ ಸಂಬಂಧದಲ್ಲಿರಿಸಿ ಪ್ರಿಯೆಯಾಗಿ ಹೀಗೆ ಕೇಳಿದ್ದಾಳೆ. ಭಾರತೀಯ ಮುಸ್ಲಿಂ ಮಹಿಳೆಯರು ಅರಬ್ ಮುಸ್ಲಿಂ ಪುರುಷರಿಗೆ ಭೋಗದ ಮತ್ತು ಮೋಜಿನ ವಸ್ತು ಆಗಿರುವುದು ಕೂಡ ಇದೇ ವ್ಯಾಪ್ತಿಯಲ್ಲಿ ಸೇರಿದೆ. ಪುರುಷರ ಸ್ವಾತಂತ್ರ್ಯ ಮತ್ತು ಮಹಿಳೆಯರ ಸ್ವಾತಂತ್ರ್ಯಹೀನತೆಯನ್ನು ಅರಬ್ ಪುರುಷರ ಸಿರಿವಂತಿಕೆ ಮತ್ತು ಭಾರತೀಯ ಮುಸ್ಲಿಂ ಮಹಿಳೆಯರ ದಾರಿದ್ರ್ಯದೊಂದಿಗೆ ಸಮೀಕರಿಸಲಾಗಿದೆ. ಮಾನವನ ಬದುಕಿನಲ್ಲಿನ ಸ್ತ್ರೀಪುರುಷರ ನಡುವಿನ ತಾರತಮ್ಯ ಅಪರಿಮಿತವಾಗಿ ಬೆಳೆದಿದೆಯೆಂದೂ ಕಾಣಿಸಿದೆ. ಇದರಿಂದ ಭಾರತೀಯ ಮುಸ್ಲಿಂ ಮಹಿಳೆ ಅಸ್ತಿತ್ವವಿಲ್ಲದವಳಾಗಿ ಉಳಿದಿದ್ದಾಳೆಂಬ ಆಕ್ರೋಶ ಮನೆಮಾಡಿದೆ. ಕವಯಿತ್ರಿ ಅಂಥ ಮಾತುಗಳಿಗೆ ಬಾಯಿಯಾಗಿದ್ದಾಳೆ ಇಲ್ಲಿ. ಹೆಣ್ಣಿಗೆ ಗಂಡಿನ ಬೆತ್ತಲೆ ಎಷ್ಟು ಹಳೆಯದೊ ಅರಾಜಕತೆ, ಅಮಾನುಷತೆ, ಕ್ರೂರತ್ವವೂ ಅಷ್ಟೇ ಹಳತು. ಹೆಣ್ಣಲ್ಲದೆ ಗಂಡನ್ನು ಕ್ಷಮಿಸುವವರು ಯಾರು ?

ಪುರೋಹಿತಶಾಹಿ ಮತ್ತು ಪುರುಷಶಾಹಿಗಳು ಅಧಿಕಾರಶಾಹಿ ನಾಣ್ಯದ ಎರಡು ಮುಖಗಳಾಗಿ ಇಲ್ಲಿ ಪರಿಣಮಿಸಿವೆ. ಅದರ ಎಲ್ಲ ಬಲಗಳನ್ನು ಜೀವನಾನುಭವದಲ್ಲಿ ಮಿತಿಗೆ ಒಳಪಡಿಸಲಾಗಿದೆ ಮತ್ತು ಅದನ್ನು ನಕಾರಾತ್ಮಕ ಚೌಕಟ್ಟಿಗೆ ಅಳವಡಿಸಲಾಗಿದೆ. ಅಧಿಕಾರಕ್ಕಿಂತ ಅನುಭವ ಮಾನವನನ್ನು ಮಾಗಿಸುವ ಕ್ರಮವನ್ನೂ ಹೇಳಿದೆ. ಅಲ್ಲದೆ ಹೆಣ್ಣಿನ ಕ್ಷಮಾಗುಣ ಮತ್ತು ಪೋಷಕ ಶಕ್ತಿಯ ಮುಂದೆ ಗಂಡಿನ ಎಲ್ಲ ಅಧಿಕಾರ ಶಕ್ತಿಗಳು ಕಳೆಗುಂದುವ ಸಾರ್ವಕಾಲಿಕ ಸಂಗತಿಯನ್ನು ಮನಗಾಣಿಸಿ ಅಭಿವ್ಯಕ್ತಿಸಿದೆ. ಕೃತಿಯು ಈ ಮೂಲಕ ಇಂದಿನ ಸ್ತ್ರೀವಾದಿ ಮನೋಧರ್ಮದ ಪ್ರತಿಪಾದನೆಯನ್ನು ಮಾಡಿದೆ. ಅಲ್ಲದೆ, ಪ್ರಕೃತಿಯಲ್ಲಿ ಜೀವಜನಾಂಗಗಳು ಸತತವಾಗಿ ಮುಂದುವರಿಯುವಲ್ಲಿ ಸ್ತ್ರೀ ವಹಿಸುವ ಹಿರಿಯ ಪಾತ್ರದ ಮಹತ್ವದ ಗುಣಲಕ್ಷಣಗಳನ್ನು ಎತ್ತಿ ಹೇಳಿದೆ. ಆದರೂ ಸ್ತ್ರೀ ಪುರುಷ ಸಂಬಂಧ ಮತ್ತು ಅಸ್ತಿತ್ವಗಳ ಸ್ವರೂಪವನ್ನು ಆರೋಗ್ಯಕರವಾಗಿ ಕಂಡಿದೆ ಮತ್ತು ಕಾಣಿಸಿದೆ. *(ದರ್ಗಾ ದಾರಿಗೆ ಮೈಲಿಗೆ ಇಲ್ಲ)*

ಈ ತೆಲುಗು ಕವಿತೆಗಳು ಆಂಧ್ರ ಸಾಹಿತ್ಯ ಸಂದರ್ಭಕ್ಕೆ ಅನುಗುಣವಾಗಿ ಮೈತಳೆದಿದ್ದರೂ ಕನ್ನಡದ ಸಂದರ್ಭದಲ್ಲೂ ತಾಜಾತನದಿಂದ ಕೂಡಿವೆ. ಹೀಗಿದ್ದರೂ ತೆಲುಗು ಮತ್ತು ಕನ್ನಡ ಸಾಹಿತ್ಯ ಸಂದರ್ಭಗಳು ಒಂದೇ ಅಲ್ಲ. ವಿಶೇಷವಾಗಿ ತೆಲುಗಿನಲ್ಲಿ ಶ್ರೀ ಶ್ರೀ ಮತ್ತು ಕನ್ನಡದಲ್ಲಿ ಅಡಿಗರು ತಮ್ಮ ಕೃತಿಗಳ ಮೂಲಕ ರೂಪಿಸಿದ ಮನಃಸ್ಥಿತಿ ಒಂದೇ ಎಂದು ಹೇಳಲು ಬರುವುದಿಲ್ಲ. ಆದರೂ ಇವೆರಡೂ ಭಾಷೆಗಳಲ್ಲೇ ಅಲ್ಲದೆ, ಇಡೀ ಭಾರತೀಯ ಸಾಹಿತ್ಯದ ಆಧುನಿಕ ಸಂದರ್ಭದಲ್ಲಿ ನವೋದಯ, ನವ್ಯ, ಪ್ರಗತಿಶೀಲ, ದಲಿತ ಬಂಡಾಯ ಹಾಗೂ ಸ್ತ್ರೀವಾದದಂಥ ಆಧುನಿಕ ವಿಚಾರಧಾರೆಗಳು ಏಕಪ್ರಕಾರವಾಗಿ ಪ್ರಭಾವಿತವಾಗಿರುವುದು ಬೇರೆ.

ಷಾಜಹಾನರು ತಮ್ಮ ಅನುಭವ ವಿಚಾರವನ್ನು ಕವಿತೆಯನ್ನಾಗಿಸುವ ಕ್ರಮದಲ್ಲಿ ತಮ್ಮ ಕಾವ್ಯದ ಆಶಯ ಮತ್ತು ವಿಧಾನವನ್ನು ಒಂದಾಗಿ ಹೊಸೆದಿದ್ದಾರೆ. ಹಾಗಾಗಿ ಅವರು ನೀಡಿರುವ ಚಿತ್ರಗಳು ಅನುಭವಮೂಲದಿಂದ ಬಂದಿರುವುದು ಓದುಗರ ಗಮನಕ್ಕೆ ಥಟ್ಟನೆ ಬರುತ್ತದೆ. ಕಾವ್ಯವನ್ನು ಸಾಮಾನ್ಯವಾಗಿ 'ನುಡಿಗೆಟ್ಟ ನುಡಿ' ಎಂದು ಹೇಳಲಾಗುತ್ತದೆ. ಇಲ್ಲಿ 'ಜೀವನಗೆಟ್ಟ ಜೀವನ'ವೆ ಮೈತಳೆದಿರುವುದರಿಂದ 'ಜೀವನಗೆಟ್ಟ ಜೀವನ', 'ನುಡಿಗೆಟ್ಟ ನುಡಿ'ಯಾಗಿ ಮೈಪಡೆದಿದೆ. ಹಾಗಾಗಿಯೆ ಓದುಗನಿಗೆ ತಾಜಾತನ ದಟ್ಟವಾಗಿ ಅನುಭವಕ್ಕೆ ಬರುತ್ತದೆ. ಇಲ್ಲಿನ ನುಡಿಚಿತ್ರಗಳು ಅಲಂಕಾರವಾಗಿ ಮೂಡದೆ ಜೀವನಾನುಭವದ ಭಾಗವಾಗಿ ಜೀವ ತಳೆದಿವೆ, ತಮ್ಮ ಸಾಚಾತನದಿಂದ ಅನುಭವದ ಆಳಕ್ಕೆ ಓದುಗನನ್ನು ಕೈ ಚಾಚಿ ಸೆಳೆಯುತ್ತವೆ.

ಒಂದು ಭಾಷಾಸಂಸ್ಕೃತಿಗೆ 'ಅಪರಿಚಿತ'ವಾದ ಕೃತಿಯನ್ನು 'ಸುಪರಿಚಿತ'ವನ್ನಾಗಿ ಮಾಡುವುದೆ ಅನುವಾದ ಎಂದು ಹೇಳಲಾಗಿದೆ. ಹಾಗಾಗಿಯೆ ಅನುವಾದಗಳು ರೂಪಾಂತರ, ಭಾಷಾಂತರ, ಪ್ರೇರಣೆ, ಮರು ಬರವಣಿಗೆ ಮೊದಲಾದ ವಿವಿಧ ರೂಪಗಳಲ್ಲಿ ಕಾಣಿಸಿಕೊಂಡಿವೆ. ಅದೇನೆ ಇರಲಿ, ಉಭಯಭಾಷಾ ಕವಿಗಳೆಂದು ಒಪ್ಪಿತರಾಗಿರುವ ಮಿತ್ರರಾದ ಸ. ರಘುನಾಥ ಅವರ ಶ್ರಮ ಈ ನಿಟ್ಟಿನಿಂದ ಯಶಸ್ಸು ಕಂಡಿದೆ. ಆದರೂ ಕಾವ್ಯ ಸೌಷ್ಟವದಲ್ಲಿ ಸಡಿಲತೆ ಮತ್ತು ವೈಚಾರಿಕತೆಯ ಭಾರ ಈ ಸಂಕಲನದಲ್ಲಿ ಓದುಗನನ್ನು ವಿಕರ್ಷಿಸುವ ಅಂಶಗಳು ಎಂದೇ ಹೇಳಬೇಕು. ಇದು ಮೂಲ ಕಾವ್ಯದಲ್ಲಿರುವ ದೋಷವೋ ಅನುವಾದದಲ್ಲಿ ಉಂಟಾದ ದೋಷವೋ ತಿಳಿಯದು. ಅನುವಾದಕರು ಮೂಲಕ್ಕೆ ತೋರಿರುವ ನಿಷ್ಠೆ ಮತ್ತು ತೆಗೆದುಕೊಂಡಿರುವ ಸ್ವಾತಂತ್ರ್ಯವನ್ನು ಉಭಯಭಾಷಾ ಪರಿಣತರು ಪರಿಶೀಲಿಸಬೇಕು. ಹಾಗೆಯೇ ಅನುವಾದವನ್ನು ಒಂದು 'ಓದು', 'ವ್ಯಾಖ್ಯಾನ' ಎಂದೂ ಹೇಳಲಾಗುತ್ತದೆ. ಈ ಹಿನ್ನೆಲೆಯಲ್ಲಿ "ನಿರ್ಬಂಧಿತ ಸಮುದಾಯದ ಯಾತನಾಮಯ ಬದುಕಿನ ಎಳೆಗಳು" ಎಂಬುದಾಗಿ ಕಂಡಿರುವ ಈ ಸಂಕಲನವನ್ನು ಅನುವಾದಕರು "ಇಲ್ಲಿನ ಸಂವೇದನೆ ಮುಸ್ಲಿಂ ಸ್ತ್ರೀ ಸಂವೇದನೆ ಎಂಬುದನ್ನು ಪ್ರತ್ಯೇಕಿಸಿ ನೋಡದಿದ್ದರೆ, ಕೆಲವು ಸಾಂಸ್ಕೃತಿಕ ಅಂಶಗಳ ಭಿನ್ನತೆಯನ್ನು ಪಕ್ಕಕ್ಕಿಟ್ಟರೆ ಇಡೀ ಸ್ತ್ರೀ ವರ್ಗದ ಸಂವೇದನೆಯೇ ಆಗಿದೆ" ಎಂದು ಕನ್ನಡಕ್ಕೆ ತಂದಿದ್ದಾರೆ.

**ಶ್ರೀಧರ ಪಿಸ್ಸೆ**
ಪಿಟಿ.೨ಎಫ್/೨೩–ಎ, ೭ನೇ ವಾರ್ಡ್
ಹಂಪಿ ಪವರ್ ಹೌಸ್ – ೫೮೩ ೨೧೫, ಕಮಲಾಪುರ, ಹೊಸಪೇಟೆ ತಾಲೂಕು

# ಕಾರಂತರ ದೃಷ್ಟಿಯಲ್ಲಿ ವಾಸ್ತು

**ಶಿವಕುಮಾರ್ ಜಿ. ಎನ್.**

ನವೋದಯ ಸಾಹಿತ್ಯ ಸಂದರ್ಭದ ಬಹುಮುಖಿ ನೆಲೆಯ ವೈಚಾರಿಕ ಚಿಂತಕರಾದ ಶಿವರಾಮ ಕಾರಂತರು ತಮ್ಮ ಅಣ್ಣ ವಾಸುದೇವ ಕಾರಂತರ ವಾಸ್ತು ಬಗೆಗಿನ ಲೇಖನ, ಇ. ಬಿ. ಹ್ಯಾವೆಲ್, ಆನಂದಕುಮಾರ ಸ್ವಾಮಿಯವರ ಕೃತಿಗಳಿಂದ ಪ್ರಭಾವಿತರಾಗಿ ವಾಸ್ತುಕಲೆಯಲ್ಲಿ ಆಸಕ್ತಿ ಮೂಡಿಸಿಕೊಂಡರು. ತತ್ಪರಿಣಾಮ ಭಾರತದಾದ್ಯಂತ ಪ್ರವಾಸ ಮಾಡಿ ಜನರ ಸಂಸ್ಕೃತಿ, ಇತಿಹಾಸ, ಜೀವನ ಕ್ರಮಗಳ ಸಂಕೇತವಾದ ವಾಸ್ತು ಕೃತಿಗಳನ್ನು ಅಧ್ಯಯನ ಮಾಡಿ ವಾಸ್ತುವಿಗೆ ಸಂಬಂಧಿಸಿದ ಮಾಹಿತಿ ಒದಗಿಸುವುದರ ಮೂಲಕ ಅದಕ್ಕೆ ಸ್ಪಷ್ಟ ರೂಪ ಕಲ್ಪಿಸಿಕೊಟ್ಟಿದ್ದಾರೆ. ಆ ನಿಟ್ಟಿನಲ್ಲಿ ಗೆದ್ದ ದೊಡ್ಡಸ್ತಿಕೆ, ಇನ್ನೊಂದೇ ದಾರಿ, ಕೇವಲ ಮನುಷ್ಯರು, ಒಡಹುಟ್ಟಿದವರು, ಕನ್ನಡಿಯಲ್ಲಿ ಕಂಡಾತ, ಗೊಂಡಾರಣ್ಯ ಮೊದಲಾದ ಕಾದಂಬರಿಗಳು ಬಹುಮುಖ್ಯ ಪಾತ್ರವಹಿಸುತ್ತವೆ. ಕಾರಂತರು ಪ್ರಸ್ತುತ ಕಾದಂಬರಿಗಳಲ್ಲಿ ಜ್ಯೋತಿಷಿ, ರಾಜಕಾರಣಿ ಗುತ್ತಿಗೆದಾರ, ಸಮಾಜದ ಪ್ರಭಾವಿ ವ್ಯಕ್ತಿ ಮೊದಲಾದವರ ಪ್ರತಿಷ್ಠೆ, ಸ್ವಾರ್ಥ ಸಾಧನೆಗೆ ಒಳಗಾಗಿ ವಾಸ್ತು ಮೌಢ್ಯ ಕಲೆಯಾಗಿ ಬೆಳೆಯುತ್ತಿರುವುದನ್ನು ವಿಡಂಬಿಸಿ, ವೈಚಾರಿಕತೆಯ ನೆಲೆಗಟ್ಟಿನಲ್ಲಿ ವಿಶ್ಲೇಷಿಸುವರು. ಕಾರಂತರು ವಿವಿಧ ಪ್ರದೇಶ, ಧರ್ಮಗಳ ವಾಸ್ತುಕೃತಿಗಳನ್ನು ಸೂಕ್ಷ್ಮವಾಗಿ ಪರಿವೀಕ್ಷಿಸಿ, ವಾಸ್ತುವನ್ನು ಕೇವಲ ಮನರಂಜನೆ, ಆತ್ಮ ಸಂತೋಷದ ಹಿನ್ನೆಲೆಯಲ್ಲಿ ಮಾತ್ರ ಚಿತ್ರಿಸದೆ ಮನುಷ್ಯರ ಜೀವನದಲ್ಲಿ ನಡೆಯುವ ಪ್ರತಿಯೊಂದು ವಿಷಯದಲ್ಲಿ ಅಡಗಿರುವ ಒಳ್ಳೆಯ ಅಂಶಗಳನ್ನು ಶೋಧಿಸಿ ಒರೆಗೆ ಹಚ್ಚಿದ್ದಾರೆ. ಆ ಮೂಲಕ ವಾಸ್ತುವಿನ ವಿಷಯದಲ್ಲಿ ಜನರ ಮನಸ್ಸಿನಲ್ಲಿದ್ದ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ ವಾಸ್ತುಕಲೆಯ ಬಗ್ಗೆ ಹೊಸ ವ್ಯಾಖ್ಯೆ ನೀಡಿದ್ದಾರೆ. ಅವರ ದೃಷ್ಟಿಯಲ್ಲಿ 'ನಾವು ನಿರ್ಮಿಸುವ ಕಟ್ಟಡ ದೀರ್ಘ ಬಾಳಿಕೆಗೆ ಬರುವಂತಿದ್ದು, ಗಾಳಿ–ಬೆಳಕುಗಳಂತಹ ಮೂಲಭೂತ ಅಗತ್ಯಗಳಿಗೆ ತೊಂದರೆಯಾಗದೆ ನಿರ್ಮಿಸುವ ಸುಂದರ ಆಕೃತಿಗಳೇ ವಾಸ್ತು'. ಅಲ್ಲದೆ ವಾಸ್ತು ಕೇವಲ ಮನೆ, ಅರಮನೆ, ದೇವಾಲಯಗಳಂಥ ಕಟ್ಟಡಗಳ ಕಲೆಗೆ ಮಾತ್ರ ಸೀಮಿತವಾಗದೆ ಇಂದು ತನ್ನ ಬಾಹುಗಳನ್ನು ಕೆರೆ, ಕುಂಟೆ, ಅಣೆಕಟ್ಟು , ರಸ್ತೆ ನಿರ್ಮಾಣ, ಸಿನಿಮಾ ಮಂದಿರ, ಕ್ರೀಡಾಂಗಣ, ನಾಟಕದ ರಂಗವೇದಿಕೆ ಇತ್ಯಾದಿ ಕ್ಷೇತ್ರಗಳ ಕಡೆಗೂ ವಿಸ್ತರಿಸಿ ತನ್ನ ಪ್ರಭಾವವನ್ನು ವಿಸ್ತರಿಸಿಕೊಳ್ಳುತ್ತಿದೆ.

ಆಧುನಿಕ ಯುಗದಲ್ಲಿ ವಾಸ್ತು ಸಂಪ್ರದಾಯಸ್ಥ ಜ್ಯೋತಿಷಿಗಳ, ಪಟ್ಟಭದ್ರರ ಹಿತಾಸಕ್ತಿಗೆ ಒಳಗಾಗಿ ಕೆಲವು ಸಮಸ್ಯೆಗಳನ್ನು ಸೃಷ್ಟಿಸುತ್ತಿರುವುದು ವಿಪರ್ಯಾಸದ ಸಂಗತಿ. ಮನೆ ಕಟ್ಟಡದ ಒಂದಿಷ್ಟು ಸ್ಥಳವನ್ನು ಕುಬೇರನ ಮೂಲೆ, ದೇವಮೂಲೆ, ಅಗ್ನಿಮೂಲೆಗಳನ್ನಾಗಿ ಪರಿಭಾವಿಸಿಕೊಂಡು, ಒಂದೊಂದು ಜಾಗದಲ್ಲಿ ನಿರ್ದಿಷ್ಟಪಡಿಸಿದ ಕೆಲಸ–ಕಾರ್ಯಗಳಿಗೆ ಮೀಸಲಿಡಬೇಕು, ಇಲ್ಲವಾದಲ್ಲಿ ಅಂತಹ ಮನೆಗಳಲ್ಲಿ ವಾಸಿಸುವವರು ಹಲವು ಬಗೆಯ ಸಂಕಷ್ಟಗಳಿಗೆ ಸಿಲುಕಿಕೊಳ್ಳುತ್ತಾರೆಂಬ ಭಯವನ್ನು ಹುಟ್ಟಿಸುತ್ತಾರೆ. ಸಾಕಷ್ಟು ಜನ ಅಂಥ ತಿಳಿಗೇಡಿ ವಿಚಾರಗಳಿಗೆ ಬಲಿಯಾಗುತ್ತಿದ್ದಾರೆ. ಆಕಸ್ಮಿಕವಾಗಿ ನಡೆಯುವ ಪ್ರತಿಯೊಂದು ಅವಘಡಕ್ಕೆ ಜ್ಯೋತಿಷಿಗಳ ಬಳಿ ಹೋಗಿ ಶಾಸ್ತ್ರ ಕೇಳಿ ಕಟ್ಟಿರುವ ಮನೆಯನ್ನು ಒಡೆಯುವ, ಹಲವು ಬದಲಾವಣೆಗಳನ್ನು ಮಾಡುವ ಗೀಳು ಅವಿದ್ಯಾವಂತರಿಗಿಂತ ಹೆಚ್ಚಾಗಿ ವಿದ್ಯಾವಂತರಲ್ಲಿರುವುದು ವಿಚಿತ್ರ ಸಂಗತಿ. ಕಷ್ಟ–ಸುಖಗಳು ಮನುಷ್ಯರಿಗೆ ಸಾಮಾನ್ಯ. ವಾಸ್ತು ನಿಯಮಗಳಿಗೆ ಬದ್ಧವಾಗಿ ನಿರ್ಮಿಸಿದವರಾರೂ ಕಷ್ಟಗಳಿಗೆ ಸಿಕ್ಕಿಕೊಳ್ಳುವುದಿಲ್ಲವೆ ? ಎಂಬ ಪ್ರಶ್ನೆಯನ್ನು ಪ್ರಜ್ಞಾವಂತರಾದ ನಾವು ಕೇಳಿಕೊಳ್ಳಬೇಕು. ಅಲ್ಲದೆ ಮನೆಯ ವಾಸ್ತು ವಾಸಿಸುವುದಕ್ಕೆ ಸೂಕ್ತವಾಗಿರಬೇಕೆ ಹೊರತು ಮೂಲೆಗಳ ಅನಗತ್ಯ ಲೆಕ್ಕಾಚಾರಕ್ಕಾಗಿ ಅಲ್ಲ. 'ಕಟ್ಟಡ ನಿರ್ಮಿಸಬೇಕಾಗಿರುವ ಸ್ಥಳದ ಪರೀಕ್ಷೆ ಮಾಡಿ, ಗುಣಮಟ್ಟದ ಇಟ್ಟಿಗೆ, ಸಿಮೆಂಟ್, ಜಲ್ಲಿ, ಕಬ್ಬಿಣ ಇತ್ಯಾದಿ ವಸ್ತುಗಳನ್ನು ಬಳಸಿಕೊಂಡು, ಕಟ್ಟಡದ ಎಲ್ಲ ಕೋಣೆಗಳಿಗೂ ಗಾಳಿ–ಬೆಳಕು ಚಲಿಸಲು ಅಗಲವಾದ ಕಿಟಕಿ–ಬಾಗಿಲುಗಳನ್ನು ಇಟ್ಟು ನಿರ್ಮಿಸುವುದೇ ನಿಜವಾದ ವಾಸ್ತು'. ಪುರಾತನ ಕಾಲದ ದೇವಾಲಯ, ಅರಮನೆಗಳಂತಹ ಯಾವುದೇ ಕಟ್ಟಡಗಳನ್ನು ವೀಕ್ಷಿಸಿದರೂ ಅವು ಬಹು ವಿಸ್ತಾರವಾದ ಕಟ್ಟಡಗಳಾಗಿದ್ದು, ಅಷ್ಟೇ ಪ್ರಮಾಣದ ಕಿಟಕಿ–ಬಾಗಿಲುಗಳಿಂದ ಕೂಡಿ ನೋಡಲು ಸೌಂದರ್ಯ ಭರಿತವಾಗಿ, ಗಟ್ಟಿ–ಮುಟ್ಟಾಗಿ ಕಲಾತ್ಮಕವಾಗಿಯೂ ನಿರ್ಮಿಸಲ್ಪಟ್ಟಿವೆ. ಅದಕ್ಕೆ ಬದಲಾಗಿ ಇರುವ ತುಂಡು ಜಾಗದಲ್ಲಿ ದಿಕ್ಕುಗಳಿಗನುಗುಣವಾಗಿ ದೇವರ ಕೋಣೆ, ಅಡುಗೆಮನೆಗಳನ್ನು ನಿರ್ಮಿಸಲು ಹೋಗಿ ಮನೆಯಿಂದ ಹೊರ ಹೋಗಲಾಗದ ಹೊಗೆಯನ್ನು ಸೇವಿಸಿ ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗಗಳು ಮುತ್ತಿಕೊಳ್ಳುವಂಥ ಕಟ್ಟಡಗಳ ನಿರ್ಮಾಣ ವಾಸ್ತುವಲ್ಲ.

ಕಾರಂತರು ಭಾರತದ ವಾಸ್ತುಕಲೆಯ ಮೂಲ ನೆಲೆಗಳಾದ ದೇವಾಲಯಗಳಲ್ಲಿನ ಹಲವು ವಿಧದ ವಾಸ್ತುಶೈಲಿಗಳನ್ನು ಗಮನಿಸಿ, ಪ್ರಧಾನವಾಗಿ ವೇಸರ, ದ್ರಾವಿಡ ಮತ್ತು ನಾಗರ ಶೈಲಿಗಳನ್ನು ಹೆಸರಿಸುತ್ತಾರೆ. ವೇಸರದ ಶೈಲಿ ಬೆಳವಣಿಗೆಯಾಗದ, ವೈವಿಧ್ಯತೆಯನ್ನು ಪಡೆಯದ ಕಾರಣ ಬಂಗಾಳಕ್ಕೆ ಮಾತ್ರ ಸೀಮಿತವಾಯಿತು. ನಾಗರ ಮತ್ತು ದ್ರಾವಿಡ ವಾಸ್ತು ಶೈಲಿಗಳು ಹಲವು ಕವಲುಗಳಾಗಿ ಭಾರತದಾದ್ಯಂತ ಪ್ರಸಿದ್ಧಿ ಪಡೆದಿವೆ. ಈ ಎರಡೂ ಶೈಲಿಗಳು ಕರ್ನಾಟಕದ



**ಮನೆಯ ವಾಸ್ತು ವಾಸಿಸುವುದಕ್ಕೆ ಸೂಕ್ತವಾಗಿರಬೇಕೆ ಹೊರತು ಮೂಲೆಗಳ ಅನಗತ್ಯ ಲೆಕ್ಕಾಚಾರಕ್ಕಾಗಿ ಅಲ್ಲ. 'ಕಟ್ಟಡ ನಿರ್ಮಿಸಬೇಕಾಗಿರುವ ಸ್ಥಳದ ಪರೀಕ್ಷೆ ಮಾಡಿ, ಗುಣಮಟ್ಟದ ಇಟ್ಟಿಗೆ, ಸಿಮೆಂಟ್, ಜಲ್ಲಿ, ಕಬ್ಬಿಣ ಇತ್ಯಾದಿ ವಸ್ತುಗಳನ್ನು ಬಳಸಿಕೊಂಡು, ಕಟ್ಟಡದ ಎಲ್ಲ ಕೋಣೆಗಳಿಗೂ ಗಾಳಿ-ಬೆಳಕು ಚಲಿಸಲು ಅಗಲವಾದ ಕಿಟಕಿ-ಬಾಗಿಲುಗಳನ್ನು ಇಟ್ಟು ನಿರ್ಮಿಸುವುದೇ ನಿಜವಾದ ವಾಸ್ತು'. ಪುರಾತನ ಕಾಲದ ದೇವಾಲಯ, ಅರಮನೆಗಳಂತಹ ಯಾವುದೇ ಕಟ್ಟಡಗಳನ್ನು ವೀಕ್ಷಿಸಿದರೂ ಅವು ಬಹು ವಿಸ್ತಾರವಾದ ಕಟ್ಟಡಗಳಾಗಿದ್ದು, ಅಷ್ಟೇ ಪ್ರಮಾಣದ ಕಿಟಕಿ-ಬಾಗಿಲುಗಳಿಂದ ಕೂಡಿ ನೋಡಲು ಸೌಂದರ್ಯಭರಿತವಾಗಿ, ಗಟ್ಟಿ-ಮುಟ್ಟಾಗಿ ಕಲಾತ್ಮಕವಾಗಿಯೂ ನಿರ್ಮಿಸಲ್ಪಟ್ಟಿವೆ. ಅದಕ್ಕೆ ಬದಲಾಗಿ ಇರುವ ತುಂಡು ಜಾಗದಲ್ಲಿ ದಿಕ್ಕುಗಳಿಗನುಗುಣವಾಗಿ ದೇವರ ಕೋಣೆ, ಅಡುಗೆಮನೆಗಳನ್ನು ನಿರ್ಮಿಸಲು ಹೋಗಿ ಮನೆಯಿಂದ ಹೊರ ಹೋಗಲಾಗದ ಹೊಗೆಯನ್ನು ಸೇವಿಸಿ ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗಗಳು ಮುತ್ತಿಕೊಳ್ಳುವಂಥ ಕಟ್ಟಡಗಳ ನಿರ್ಮಾಣ ವಾಸ್ತುವಲ್ಲ.**



*ವಾಸ್ತುಕಲೆ ಶೈಲಿಯ ದೇವಾಲಯಗಳಲ್ಲಿ ದ್ರಾವಿಡ, ವೇಸರ ಮತ್ತು ನಾಗರ ದೇವಾಲಯಗಳು*

ಬಾದಾಮಿ, ಪಟ್ಟದ ಕಲ್ಲು, ಐಹೊಳೆಗಳಲ್ಲಿ ವಿಕಾಸ ಪಡೆದವು. ದ್ರಾವಿಡ ಶೈಲಿಯ ಮೂಲ ನೆಲೆ ಐಹೊಳೆ ಮತ್ತು ಬಾದಾಮಿ. ಚಚ್ಚೌಕ ಪಾಯದ ಮೇಲೆ ಗೋಡೆಗಳು ಏರಿ ತುದಿಯಲ್ಲಿ ಒಂದುಗೂಡುತ್ತವೆ. ಪಾಯದ ಚೌಕ ನಕ್ಷತ್ರದಂತೆ ಹಲವು ಏಣುಗಳಾಗಿ ನಿರ್ಮಿತವಾದ ಕಾರಣ ಗೋಡೆಗಳು ಅದೇ ರೀತಿ ಏಣುಗಳಾಗಿ ಏರಿ ಶಿಖರದಂತೆ ಕಾಣುತ್ತವೆ. ಇದರ ಎದುರಿಗೆ ಬಾಗಿಲು, ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣೆ ಬರಲು ಸ್ವಲ್ಪ ಜಾಗವಿರುತ್ತದೆ. ಚೌಕಾಕಾರದ ಗರ್ಭಗೃಹದ ಮುಂದೆ ಮಂಟಪವಿದ್ದು, ಆಧಾರವಾಗಿ ಕಂಬಗಳನ್ನು ನಿರ್ಮಿಸಲಾಗುತ್ತದೆ. ಇದಕ್ಕೆ ಉತ್ತಮ ನಿದರ್ಶನ ಐಹೊಳೆಯ ಲಡಖಾನ ದೇವಾಲಯ. ನಾಗರ ಶೈಲಿಯ ಕಟ್ಟಡಗಳು ಚೌಕಾಕಾರದ ಗೋಡೆಗಳ ಮೇಲೆ ನಿಂತಿರುತ್ತವೆ. ಅದರ ನಾಲ್ಕು ಭಾಗಗಳು ವಕ್ರರೇಖೆಯಿಂದ ಏರಿ ತುದಿಯಲ್ಲಿ ಒಂದುಗೂಡುತ್ತವೆ. ತುದಿಯ ಶಿಖರ ದೊಡ್ಡದಾದಂತೆ ಅದರ ಏಣುಗಳೂ ಹೆಚ್ಚುತ್ತಾ ಹೋಗುತ್ತವೆ. ಇದಕ್ಕೆ ಉತ್ತಮ ಉದಾಹರಣೆ ಭುವನೇಶ್ವರದ ಲಿಂಗರಾಜ ದೇವಾಲಯ. ಈ ಎರಡೂ ಶೈಲಿಗಳ ಪಾಯ, ಗೋಡೆಗಳಲ್ಲಿ ಸಾಮ್ಯತೆ ಇದ್ದರೂ ಭಿನ್ನತೆ ಅವುಗಳ ಗೋಪುರದಿಂದ ಮಾತ್ರ ತಿಳಿಯುತ್ತದೆ. ಹೀಗೆ ಶಾಸ್ತ್ರಬದ್ಧವಾದ ನಿಯಮಗಳನ್ನು ಪರಿಪಾಲಿಸಿ ನಿರ್ಮಾಣವಾದ ಸಾಕಷ್ಟು ದೇವಾಲಯಗಳು ಮೂಲೆ, ದಿಕ್ಕುಗಳನ್ನು ಪರಿಪಾಲಿಸದಿದ್ದರೂ ಯಾವುದೇ ದೋಷ ಕಂಡುಬರದೆ ಇಂದು, ಮುಂದೆಯೂ ಸೌಂದರ್ಯವನ್ನು ಹೊರಸೂಸುವಂಥ ಲಕ್ಷಣಗಳಿಂದ ಕೂಡಿ ಕಲಾಭಿಮಾನಿಗಳ ಮನ ಗೆದ್ದಿವೆ.

ಕಾರಂತರು ವಾಸ್ತುವನ್ನು ಜ್ಯೋತಿಷಿಗಳ, ಪಟ್ಟಭದ್ರರ ಮೌಢ್ಯತೆಯಿಂದ ವಿಮುಕ್ತಿಗೊಳಿಸಿ ವೈಚಾರಿಕತೆಯ ದೃಷ್ಟಿಕೋನದ ಹಿನ್ನೆಲೆಯಲ್ಲಿ ಸರ್ವವ್ಯಾಪಕ ಕಲೆಯನ್ನಾಗಿ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. 'ಗೆದ್ದ ದೊಡ್ಡಸ್ತಿಕೆ' ಕಾದಂಬರಿಯಲ್ಲಿ ಕಟ್ಟಡ ಮಾಲೀಕರ ಆಸೆಬುರುಕುತನ, ತಿಳುವಳಿಕೆ ಹೀನತೆ, ರಾಜಕಾರಣಿ ಮತ್ತು ಗುತ್ತಿಗೆದಾರ ನಾಗಾನಂದನಂತಹವರ ನಯವಂಚಕತನ, ಮೋಸಗಾರಿಕೆಯನ್ನು ವಾಸ್ತು ತಜ್ಞ ಶಿವಶಂಕರನ ಮೂಲಕ ವಿಡಂಬಿಸಿ, ವಿಚಾರಶೀಲತೆಗೆ ಆಹ್ವಾನ ನೀಡುತ್ತಾರೆ. ವಾಸ್ತುಶಾಸ್ತ್ರದಲ್ಲಿ ಪದವಿ ಪಡೆದ ಶಿವಶಂಕರ ಜನರ ಮೌಢ್ಯ, ಆಸೆಬುರುಕುತನ ಗಳಿಂದಾಗುವ ಅನಾಹುತವನ್ನು ವಿಶ್ಲೇಷಿಸಿ, ವಾಸ್ತುವಿನ ಗುಣಲಕ್ಷಣಗಳನ್ನು ವೈಚಾರಿಕವಾಗಿ ಪರಿಚಯಿಸುವ ಪ್ರತಿನಿಧಿಯಾಗಿ ನಿಲ್ಲುತ್ತಾನೆ. ಪ್ರವಾಸಿ ಸ್ಥಳವಾದ ಉಡುಪಿಯಲ್ಲಿ ಪ್ರವಾಸಿಗರ ಸಂಖ್ಯೆ ಹೆಚ್ಚಾಗುತ್ತಿದ್ದಂತೆ ದೇಶ–ವಿದೇಶಗಳ ವಾಸ್ತುಶೈಲಿಗಳನ್ನು ಸಂಕರಣಗೊಳಿಸಿಕೊಂಡು ನವೀನ ಮಾದರಿಯ ಕಟ್ಟಡಗಳು ನಿರ್ಮಾಣವಾಗಿ ಪ್ರವಾಸಿಗರ ಮನಸೂರೆ ಮಾಡುತ್ತಿರುವುದು ಸರಿಯಷ್ಟೆ. ಆ ಕಟ್ಟಡಗಳು ನೋಡಲು ವಿಭಿನ್ನ ಬಗೆಯ ಕಣ್ಣು ಕುಕ್ಕುವ ಬಣ್ಣ, ನಮೂನೆಗಳಿಂದ ಸುಂದರವಾಗಿದ್ದವು. ಆದರೆ ಮನೆಗಳಲ್ಲಿ ಮೂಲಭೂತ ಅಗತ್ಯಗಳಾದ ಗಾಳಿ–ಬೆಳಕು ಒಂದು ಕಡೆಯಿಂದ ಮತ್ತೊಂದೆಡೆ ಸರಾಗವಾಗಿ ಚಲಿಸಲಾಗದೆ ಉಸಿರುಕಟ್ಟಿಸುವಂತಹ ಕಟ್ಟಡಗಳನ್ನು ನಿರ್ಮಿಸಿ, ಬಾಡಿಗೆಯ ರೂಪದಲ್ಲಿ ಹಣ ಸಂಪಾದಿಸುವ ಮಾಲೀಕರ ಚಾಣಾಕ್ಷತನವನ್ನು ವಿಶ್ಲೇಷಣೆ ಮಾಡಲಾಗಿದೆ.

ವಾಸ್ತುವಿನ ನಿಯಮಗಳಿಗೆ ಅನುಸಾರವಾಗಿ ಕಟ್ಟಡಗಳನ್ನು ಕಟ್ಟಿಸಿದರೆ ಮೂಲಭೂತ ಸಮಸ್ಯೆಗಳಿಲ್ಲದೆ ಸುಂದರವಾಗಿ ಕಾಣಿಸುವುದರ ಜೊತೆಗೆ ದೀರ್ಘಕಾಲ ಬಾಳಿಕೆ ಬರುತ್ತವೆ. ಒಮ್ಮೆ ಕಟ್ಟಿಸಿದ ಮನೆ ಅಥವಾ ಕಟ್ಟಡ ಕೊನೆಯ ಪಕ್ಷ ಒಂದೆರಡು ತಲೆಮಾರಿಗಾದರೂ ಸುಭದ್ರವಾಗಿರುತ್ತದೆ. ಅದಕ್ಕೆ ಬದಲಾಗಿ ಸ್ವ–ಹಿತಾಸಕ್ತಿ ಅಥವಾ ತಿಳುವಳಿಕೆ ಹೀನತೆಗೆ ಒಳಗಾಗಿ ನಿರ್ಮಿಸಿದ ಕಟ್ಟಡಗಳು ಹಲವು ಸಮಸ್ಯೆಗಳ ಮಡುವಾಗಿರುತ್ತವೆ. ಅಂತಹ ಮನೆಗಳನ್ನು ಕಂಡ ಶಿವಶಂಕರ ಜೈಲುಗಳ ಉಪಮೆ ಕೊಡುತ್ತಾನೆ. ಬೆಂಗಳೂರು, ಮುಂಬಯಿಗಳಂತಹ, ಮಹಾನಗರಗಳಲ್ಲಿ ಭೂಮಾಲೀಕರು ಬಾಡಿಗೆಯ ಆಸೆಗೆ ಬಲಿಯಾಗಿ ನಿಸರ್ಗದ ಸೋಂಕಿಲ್ಲದೆ ಒತ್ತೊತ್ತಾಗಿ ಮನೆಗಳನ್ನು ನಿರ್ಮಿಸುವರು. ಇಂತಹ ಮನೆಗಳಿಗೆ ವಾಸಕ್ಕೆ ಬಂದವರು ಕೃತಕ ಗಾಳಿಯನ್ನು ಸೇವಿಸಿ ಹಲವು ಕಾಯಿಲೆಗಳಿಗೆ ಗುರಿಯಾಗಬೇಕಾಗುತ್ತದೆ. ಸಮಸ್ಯೆಗಳು ಎದುರಾದಾಗ ವಾಸ್ತುವಿನ ಬಗ್ಗೆ ಅನುಮಾನಿಸಿ, ಜ್ಯೋತಿಷಿಗಳ ಮೊರೆಹೋಗುತ್ತಾರೆ. ಅವರು ಕವಡೆ ಹಾಕಿಯೋ ಪಂಚಾಂಗ ನೋಡಿಯೋ ಸ್ವಲ್ಪವೂ ಅಳುಕಿಲ್ಲದೆ ವಾಸ್ತುದೋಷದ ವಿಚಾರವನ್ನೋ, ದೈವಶಕ್ತಿಯ ಕೆಟ್ಟ ಪರಿಣಾಮಗಳನ್ನೋ ಸೂಚಿಸಿ, ಪರಿಹಾರಾರ್ಥವಾಗಿ ವಾಸ್ತುವಿನ ಬದಲಾವಣೆ ಅಥವಾ ತೀರ್ಥಯಾತ್ರೆ ಮಾಡುವಂತೆ ಸೂಚಿಸುತ್ತಾರೆ. ಇದಕ್ಕೆ ಕಾರಣ ವಾಸ್ತುಶಾಸ್ತ್ರದ ನೈಜ ಅರಿವಿಲ್ಲದ, ಹೆಸರಿಗೆ ಮಾತ್ರ ವಾಸ್ತು ತಜ್ಞರೆನಿಸಿಕೊಂಡಿರುವವರೇ ಇಂದಿಗೂ ಅಧಿಕ ಸಂಖ್ಯೆಯಲ್ಲಿದ್ದಾರೆ. ಇವರಿಂದ ವಾಸ್ತು ವಿಕಾಸವಾಗುವುದಕ್ಕೆ ಬದಲು ಹಲವು ಗೊಂದಲಗಳ ಗೂಡಾಗುವುದರಲ್ಲಿ ಸಂಶಯವಿಲ್ಲ.

'ಗೆದ್ದ ದೊಡ್ಡಸ್ತಿಕೆ' ಕಾದಂಬರಿಯ ಮತ್ತೊಂದು ನಯವಂಚಕ ವರ್ಗ ರಾಜಕಾರಣಿ ಮತ್ತು ಗುತ್ತಿಗೆದಾರರದ್ದು. ನಿಸ್ವಾರ್ಥ ಸೇವಾ ಮನೋಭಾವನೆಯನ್ನು ಹೊಂದಿರಬೇಕಾದ ಬಹುತೇಕ ರಾಜಕಾರಣಿಗಳು ಚುನಾವಣೆಯ ಕಾಲ ಸಮೀಪಿಸುತ್ತಿದ್ದಂತೆ ಮತದಾರರ ಮನ ಗೆಲ್ಲುವ ತಂತ್ರಗಾರಿಕೆಗೆ ಮೊರೆಹೋಗುವುದು ಮಾಮೂಲಿನ ಸಂಗತಿ. ಇಂದಿನ ರಾಜಕೀಯ ವ್ಯಕ್ತಿಗಳೂ ಅದಕ್ಕೆ ಹೊರತಲ್ಲ. ತಾವು ಮಂಜೂರು ಮಾಡಬೇಕಾದ ಕಾಮಗಾರಿಗಳ ಸ್ಥಳವನ್ನು ಪರೀಕ್ಷೆ ಮಾಡಿ ಅದಕ್ಕೆ ಅನುಗುಣವಾದ ಕಾರ್ಯ ಯೋಜನೆಗಳನ್ನು ರೂಪಿಸಬೇಕಾದ ರಾಜಕಾರಣಿಗಳು ರಸ್ತೆ, ಸೇತುವೆ, ಕಟ್ಟಡ, ಅಣೆಕಟ್ಟುಗಳಂತಹ ಯೋಜನೆಗಳನ್ನು ತಮ್ಮ ಅನುಕೂಲಕ್ಕೆ ತಕ್ಕ ಸ್ಥಳಗಳಲ್ಲಿ ನಿರ್ಮಿಸಲು ತರಾತುರಿಯಲ್ಲಿ ಅನುಮತಿ ನೀಡುವರು. ಗುತ್ತಿಗೆದಾರ ನಾಗಾನಂದ ಸಹ ಅಧಿಕಾರಿಗಳ ಮತ್ತು ರಾಜಕಾರಣಿಗಳ ಬಲದಿಂದ ಎಲ್ಲ ಯೋಜನೆಗಳನ್ನು ಗುತ್ತಿಗೆಗೆ ಪಡೆದು, ಕಳಪೆ ಗುಣಮಟ್ಟದ ವಸ್ತುಗಳನ್ನು ಬಳಸಿಕೊಂಡು, ಕಾಮಗಾರಿಗಳನ್ನು ಅಲ್ಪಾವಧಿಯಲ್ಲಿ ಮುಗಿಸಿ ಕೈ ತೊಳೆದುಕೊಳ್ಳುತ್ತಾನೆ. ಇಂತಹ ಕಳಪೆ ಕಾಮಗಾರಿಗಳು ಆದಷ್ಟು ಬೇಗ ದುರಸ್ತಿಗೆ ಬರುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ರಸ್ತೆಗಳಿಗೂ ಗುಂಡಿಗಳಿಗೂ ವ್ಯತ್ಯಾಸವಿರದ ನಮ್ಮ ನಗರದ ಅಥವಾ ರಾಜ್ಯದ ಹಲವು ರಸ್ತೆಗಳನ್ನು ನೋಡಿದರೆ ಹೆಚ್ಚಿನ ವಿವರಣೆ ಬೇಕಿಲ್ಲವೆನಿಸುತ್ತದೆ. ಶಿವಶಂಕರ ರಾಜಕಾರಣಿಗಳ ಇಂಥ ತಂತ್ರಗಾರಿಕೆಯನ್ನು ವಿಡಂಬಿಸುವನು. ಆದರೆ ನಾಗಾನಂದನ ಮೋಸಗಾರಿಕೆ, ಕಳಪೆ ಗುಣಮಟ್ಟದ ವಸ್ತುಗಳ ಬಳಕೆಯನ್ನು ಕಣ್ಣಾರೆ ಕಂಡರೂ ಅದನ್ನು ಪ್ರತಿಭಟಿಸಲಾಗದ ಸ್ಥಿತಿ ಅವನದು. ಬಾಲ್ಯದಲ್ಲಿ

ಪ್ರಾಣಾಪಾಯದಿಂದ ಕಾಪಾಡಿ ವಿದ್ಯಾಭ್ಯಾಸಕ್ಕೆ ಸಹಾಯ ಹಸ್ತ ನೀಡಿದ್ದವನು ನಾಗೇಂದ್ರ. ಹಾಗಾಗಿ ವಿದ್ಯಾಭ್ಯಾಸ ಮುಗಿದ ನಂತರ ಅವನ ಬಳಿಯೇ ಕೆಲಸ ಮಾಡುತ್ತಿದ್ದ. ಆದರೂ ನಾಗಾನಂದನ ಮೋಸದ ಕೆಲಸಗಳನ್ನು ಸಹಿಸಲಾಗದ ಶಿವಶಂಕರ ಅವನ ಕಂಪನಿಯಿಂದ ಹೊರಬಂದು ಸಣ್ಣ ಪ್ರಮಾಣದ ಗುತ್ತಿಗೆ ಕೆಲಸ ಮಾಡುವನು. ಇದು ಶಿವಶಂಕರನ ಕಾರ್ಯನಿಷ್ಠೆ, ವೃತ್ತಿ ಗೌರವವನ್ನು ಸಂಕೇತಿಸುತ್ತದೆ. ಕಾರಂತರು ಶಿವಶಂಕರನ ಮೂಲಕ ತನ್ನ ಬಳಿ ಬಂದ ಜನರಿಗೆ ವಾಸ್ತುವಿನ ಗುಣಲಕ್ಷಣಗಳ ಬಗ್ಗೆ ಅರಿವು ಮೂಡಿಸಿ, ವಾಸ್ತುವಿನ ಹೆಸರಲ್ಲಿ ನಡೆಯುತ್ತಿದ್ದ ತಿಳಿಗೇಡಿತನವನ್ನು ವಿಡಂಬಿಸುವರು.

ಇಂದಿನ ದಿನಗಳಲ್ಲಿ ಹಳೆಯ ನೀತಿ-ನಿಯಮ, ಪದ್ಧತಿಗಳನ್ನು ಕಡೆಗಣಿಸಿ, ಹೊಸ ಮಾದರಿಯ ಪದ್ಧತಿಗಳನ್ನು ರೂಢಿಸಿಕೊಳ್ಳುವುದು ಹೆಚ್ಚುಗಾರಿಕೆಯಾಗಿದೆ. ಹಳೆಯ ಕಾಲದವು ಎಂದ ಕೂಡಲೆ, ಅವುಗಳಲ್ಲಿ ಹುರುಳಿಲ್ಲವೆಂದು ತಿರಸ್ಕರಿಸುವುದಾಗಲಿ, ಈಗಿನ ಕಾಲದ ಎಲ್ಲ ನಿಯಮಗಳು ಸರಿಯಾಗಿರುತ್ತವೆಂದು ಪುರಸ್ಕರಿಸುವುದಾಗಲಿ ಮಾಡದೆ ಪ್ರತಿಯೊಂದು ಕಾಲದ ವಿಷಯಗಳಲ್ಲಿ ಸತ್ಯಾಂಶಗಳು ಅಡಗಿರುತ್ತವೆ, ಅಂತಹ ಕೆಲಸಕ್ಕೆ ನಾವು ತಲೆಬಾಗಲೇಬೇಕೆಂಬ ಸಂಗತಿಯನ್ನು ಕಾರಂತರು 'ಇನ್ನೊಂದೇ ದಾರಿ', 'ಕನ್ನಡಿಯಲ್ಲಿ ಕಂಡಾತ' ಕಾದಂಬರಿಗಳ ಮೂಲಕ ಸಮರ್ಥಿಸುತ್ತಾರೆ. 'ಇನ್ನೊಂದೇ ದಾರಿ'ಯ ನರಸಿಂಹಯ್ಯನ ಆರ್ಥಿಕ ಪರಿಸ್ಥಿತಿ ವರ್ಷದಿಂದ ವರ್ಷಕ್ಕೆ ವೃದ್ಧಿಸುತ್ತಿದ್ದಂತೆ ಆದಷ್ಟು ಬೇಗ ಶ್ರೀಮಂತನಾಗುವನು. ಸಂಪತ್ತಿನ ಗಳಿಕೆ ಹೆಚ್ಚಾದಂತೆ ಆತನಲ್ಲಿ ಆಧುನಿಕ ಜೀವನಶೈಲಿ ಲಗ್ಗೆ ಇಡಲಾರಂಭಿಸಿತು. ತತ್ಫಲವಾಗಿ ತನ್ನ ಹಿಂದಿನ ತಲೆಮಾರಿನವರು ಕಟ್ಟಿಸಿದ್ದ ಹಳೆ ನಮೂನೆಯ ಮನೆಯನ್ನು ಕೆಡವಿ ನವೀನ ಮಾದರಿಯ ವಾಸ್ತು ಆಧಾರಿತ ಕಟ್ಟಡವನ್ನು ಕಟ್ಟಿಸುವ ಹಂಬಲ ಅವನಲ್ಲಿ ಮೊಳೆಯಿತು. ಈ ವಿಷಯವಾಗಿ ತನ್ನ ಪತ್ನಿ ಜಾನಕಿಯ ಜೊತೆ ಸಮಾಲೋಚಿಸುವನು. ಬುದ್ಧಿವಂತೆಯಾದ ಜಾನಕಿ, "ಮನೆಯ ಬೋದಿಗೆ, ಗೋಡೆ, ಕಂಬಗಳು ಇನ್ನೂ ಐವತ್ತು ವರ್ಷಗಳ ಕಾಲ ಮುಲಾಜಿಲ್ಲದೆ ಉಳಿದಾವು. ಅಲ್ಲದೆ ಗಾಳಿ ಬೆಳಕಿನಂತಹ ಮೂಲಭೂತ ಕೊರತೆಗಳಿಲ್ಲದೆ, ಸಾಕಷ್ಟು ವಿಶಾಲವಾಗಿವೆ. ಎಷ್ಟೇ ಜನ ಬಂದರೂ ಒಟ್ಟಿಗೆ ಕುಳಿತು ಊಟ ಮಾಡುವುದಕ್ಕೆ ಮತ್ತು ಮನೆಯ ಸಾಮಗ್ರಿಗಳನ್ನು ಶೇಖರಿಸಿಡುವುದಕ್ಕೆ ಸಾಕಷ್ಟು ಸ್ಥಳಾವಕಾಶವಿದೆ. ಹೀಗಿರುವಾಗ ಮನೆಯನ್ನೇಕೆ ಕೆಡವಬೇಕು ?" ಎಂದು ಹೇಳುವ ಈಕೆಗೆ ಹೊಸ ಮನೆಯನ್ನು ಕಟ್ಟಿಸುವ ಇಷ್ಟವಿಲ್ಲವೆಂದಲ್ಲ. ವಿನಾ ಕಾರಣ ದುಂದುವೆಚ್ಚ ಮಾಡಲು ಜಾನಕಿಯ ಮನಸ್ಸು ಒಪ್ಪದು. ತನ್ನ ತವರುಮನೆಯವರು ನಿರ್ಮಿಸಿದ್ದ ನವೀನ ಮಾದರಿಯ ಮನೆಯನ್ನು ನೋಡಿ ಸಂತೋಷಪಡುವಳು. ಕಾರಣ ಈ ಹಿಂದೆ ಸ್ವತಃ ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ್ದ ಪರಿಣಾಮ ಹಣದ ಮಹತ್ವದ ಅರಿವಿದೆ ಆಕೆಗೆ. ಸ್ತ್ರೀ ಸಮಾನತೆಯ ಪ್ರತಿನಿಧಿಯಾದ ನರಸಿಂಹಯ್ಯ ಜಾನಕಿಯ ಸಲಹೆಯನ್ನು ಒಪ್ಪಿ ತನ್ನೂರಿನಲ್ಲಿ ವಾಸ್ತುವನ್ನು ಪ್ರತಿಬಿಂಬಿಸುವ ಭವ್ಯ ಆಸ್ಪತ್ರೆಯೊಂದನ್ನು ಕಟ್ಟಿಸಿ ಸಾರ್ವಜನಿಕ ಸೇವೆಗೆ ಸಮರ್ಪಿಸುತ್ತಾನೆ. ಹಾಗೆಯೇ 'ಕನ್ನಡಿಯಲ್ಲಿ ಕಂಡಾತ' ಕಾದಂಬರಿಯ ಮಂಜಪ್ಪ ಸಹ ವಾಸ್ತು ನಿಯಮಗಳಿಗೆ ಅನುಗುಣವಾಗಿ ಸುಮಾರು ಮೂವತ್ತರಿಂದ ಮುವತ್ತೈದು ಅಂಕಣಗಳ ವಿಶಾಲವಾದ ಮನೆಯನ್ನು ನಿರ್ಮಿಸಿ, ಅದರಲ್ಲಿ ತಮಗೆ ಅನುಕೂಲವಾಗುವಂಥ ಪಡಸಾಲೆ, ಅಟ್ಟ ಮತ್ತು ಮನೆಯ ಸದಸ್ಯರೆಲ್ಲ ಒಟ್ಟಿಗೆ ಕುಳಿತು ಊಟ ಮಾಡಬಹುದಾದ ಹಾಲ್‌ಗಳಂತಹ ಹಲವು ವಿಭಾಗಗಳಿಂದ ಕೂಡಿದ ಮನೆಯನ್ನು ಕಟ್ಟಿಸುವನು. ಈ ಕಟ್ಟಡ ದಿಕ್ಕು, ಮೂಲೆಗಳ ಅವೈಜ್ಞಾನಿಕ ಲೆಕ್ಕಾಚಾರಗಳಿಂದ ಮುಕ್ತವಾಗಿ ಮೂರು ತಲೆಮಾರುಗಳ ಇತಿಹಾಸವನ್ನು ಸಾರುತ್ತಾ ಸುಭದ್ರವಾಗಿತ್ತು. ಹೀಗೆ ಕಾರಂತರು ಜಾನಕಿ, ಮಂಜಪ್ಪರಂಥ ಸಾಮಾನ್ಯ ಪಾತ್ರಗಳಿಂದ ಅನಗತ್ಯ ನಿಯಮಗಳನ್ನು ಪ್ರಶ್ನಿಸಿ ಪ್ರತಿಯೊಂದು ವಿಷಯವನ್ನೂ ವೈಚಾರಿಕತೆಯ ಹಿನ್ನೆಲೆಯಲ್ಲಿ ಚರ್ಚಿಸಿ ನಿರ್ಧಾರ ತೆಗೆದುಕೊಳ್ಳುವಂಥ ಭಾವನೆಗಳನ್ನು ರೂಢಿಸುವುದರ ಮೂಲಕ ವಾಸ್ತುವಿನಲ್ಲಿದ್ದ ದೋಷಗಳನ್ನು ಪರಿಹರಿಸಿ ಕಲೆಯನ್ನು ಬೆಳೆಸುವರು.

ಒಟ್ಟಾರೆ, ಪುರಾತನ ಕಾಲದ ಪ್ರತಿಯೊಂದು ಧರ್ಮದ ದೇವಾಲಯ, ಅರಮನೆ ಇನ್ನಿತರ ಉದ್ದೇಶಗಳಿಗಾಗಿ ನಿರ್ಮಿಸಿದಂಥ ಕಟ್ಟಡಗಳು ವಾಸ್ತುವಿನ ನಿಚ್ಚಳ ಲಕ್ಷಣಗಳಿಗೆ ಅನುಗುಣವಾಗಿ ರಚನೆಯಾಗಿವೆ. ಅವು ಕಲೆಯ ಹಿನ್ನೆಲೆಯಲ್ಲಿ ಭವ್ಯಾಕೃತಿಗಳಾಗಿದ್ದು ಸುಭದ್ರವಾಗಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಸಂಪ್ರದಾಯವಾದಿ ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಮೂಲ ವಾಸ್ತು ನಿಯಮಗಳನ್ನು ನಿರ್ಲಕ್ಷಿಸಿ, ಮೌಢ್ಯದ ಹಿನ್ನೆಲೆಯಲ್ಲಿ ಬಳಸಿಕೊಳ್ಳುತ್ತಿದ್ದರೆ ರಾಜಕಾರಣಿ, ಗುತ್ತಿಗೆದಾರ, ಕಟ್ಟಡ ಮಾಲೀಕರು, ಸ್ವಾರ್ಥ, ಪ್ರತಿಷ್ಠೆ, ವಂಚನೆ ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಬಳಕೆಮಾಡಿಕೊಳ್ಳುತ್ತಿದ್ದಾರೆ. ಕಾರಂತರು ಇಂತಹ ಅನಗತ್ಯ ಸ್ವಾರ್ಥಪರ ವಿಷಯಗಳನ್ನು ಅಭಿವ್ಯಕ್ತಪಡಿಸಿ, ವಾಸ್ತುಕಲೆಯ ವಿಷಯದಲ್ಲಿ ಜನರನ್ನು ಮಡಿವಂತಿಕೆಯಿಂದ ವಿಮುಕ್ತಿಗೊಳಿಸಿ, ಅವರಲ್ಲಿ ವೈಚಾರಿಕ ಪ್ರಜ್ಞೆ ಮೂಡಿಸುವರು.

**ಶಿವಕುಮಾರ್ ಜಿ. ಎನ್.**
ಸಂಶೋಧನಾ ವಿದ್ಯಾರ್ಥಿ
ಕನ್ನಡ ಭಾಷೆ ಮತ್ತು ಅನುವಾದ ಅಧ್ಯಯನ ವಿಭಾಗ
ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ






# ಮಲಗು ಕಂದಾ...

ಮಲಗು ಕಂದಾ...
ಮಲಗಪ್ಪಾ ...
ಬೆಚ್ಚನೆ ಆಸರೆಯಲಿ

ಬಾರದಿರಲಿ ನಿನ್ನ ಕನಸಿಗೆ
ಟ್ರಾಫಿಕ್ ತುಂಬಿರುವ ರಸ್ತೆ
ಕಾಣದಿರಲಿ ನಿನ್ನ ಕಣ್ಣುಗಳು
ಕೊಲೆ – ಸುಲಿಗೆ
ಕೇಳಬಾರದು ನಿನ್ನ ಕಿವಿ
ಕಿರಿಚಾಟ, ಚೀರಾಟ, ಆಕ್ರಂದನ.

ನಿತ್ಯ ನೀ ನೋಡಿದ
ಈ ಜಗದ ಅಸಲಿ ಕಸುಬು
ತುಂಬದಿರಲಿ ನಿನ್ನ ಮನಸಾ...

ನಿರಾಸೆ, ಕಣ್ಣೀರು, ಬೇಡುವುದು
ಗೊತ್ತೇ ಆಗದಿರಲಿ ಎಳೆಮನಕೆ.

ಹಗಲೆಲ್ಲಾ ಬಣಗುಟ್ಟಿ
ರಾತ್ರಿ ಆದಂತೆಲ್ಲಾ ತಿಳಿಯಾಗಿ
ಮಧ್ಯರಾತ್ರಿ ಹೊತ್ತಿಗಾಗಲೇ
ಶಾಂತವಾಗಿ ನಿದ್ರಿಸಿ,
ಮುಂಜಾನೆ ಆಕಳಿಸುತ್ತಾ
ಮುಖ ತೋರುವ ಆಗಸದಂತೆ
ನಿರಾಳವಾಗಿ, ನಿರ್ಲಿಪ್ತವಾಗಿ
ಮಲಗಿಬಿಡು ಕಂದಾ !

ಇದ್ದೇ ಇದೆಯಲ್ಲಾ
ನಾಳೆಯ ಬದುಕು – ಬವಣೆ ನಾಳೆಗೆ !

**ಡಾ॥ ಸುಜಾತ ಲಕ್ಷ್ಮೀಪುರ**
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು – ೫೬೦ ೦೧೯



ಶ್ರೀನಿವಾಸ್ ಪ್ರತಿಭಾವಂತ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ತನ್ನ ಕಲ್ಪನೆಯನ್ನು ವಾದ್ಯದಲ್ಲಿ ಮೂಡಿಸುವುದಕ್ಕೆ, ವಾದ್ಯದ ಸಾಧ್ಯತೆಯನ್ನು ವಿಸ್ತರಿಸುವುದಕ್ಕೆ, ತನ್ನ ಮನದಲ್ಲಿದ್ದುದು ಬೆರಳುಗಳಲ್ಲಿ ಹೊಮ್ಮಬೇಕಾದರೆ ಅಸಾಧ್ಯ ಪರಿಶ್ರಮ ಮತ್ತು ಸಾಧನೆ ಅವಶ್ಯಕ ಎನ್ನುವುದನ್ನು ಮನಗಂಡಿದ್ದರು ಶ್ರೀನಿವಾಸ್. "ನಾನು ಮ್ಯಾಂಡೊಲಿನ್ ಕಲಿಯಲಾರಂಭಿಸಿದಾಗ ದಿನಕ್ಕೆ ಎಂಟು-ಹತ್ತು ಗಂಟೆಗಳ ಕಾಲ ಅಭ್ಯಾಸ ಮಾಡುತ್ತಿದ್ದೆ. ಈಗ ವಿಶ್ವಪರ್ಯಟನೆಯ ಹಾಗೂ ಕಾರ್ಯಕ್ರಮಗಳ ಒತ್ತಡವಿರುವಾಗಲೂ ಮದ್ರಾಸಿನಲ್ಲಿ ಇರುವಾಗ ಕೊನೇ ಪಕ್ಷ ಐದು ಗಂಟೆಗಳ ಕಾಲ ಅಭ್ಯಾಸ ಮಾಡುತ್ತೇನೆ. ಸರಳೆಗಳನ್ನು ಮಾಯಾಮಾಳವಗೌಳದಲ್ಲಿ ತ್ರಿಕಾಲದಲ್ಲಿ ನುಡಿಸಿ, ನಂತರ ತೋಡಿ, ಕಲ್ಯಾಣಿ, ಶಂಕರಾಭರಣ ಮುಂತಾದ ಮೇಳಕರ್ತ ರಾಗಗಳನ್ನು ನುಡಿಸುತ್ತೇನೆ. ದಿನಕ್ಕೆ ಒಂದು ರಾಗವನ್ನು ನುಡಿಸುತ್ತೇನೆ. ಹಾಗೆ ನುಡಿಸುವಾಗ ಎಲ್ಲ ಗಮಕಗಳೂ ಶುದ್ಧವಾಗಿ ಬರುತ್ತಿವೆ ಎನ್ನುವುದನ್ನು ಖಚಿತಪಡಿಸಿಕೊಳ್ಳುತ್ತೇನೆ" ಎಂದು ಸಂದರ್ಶನವೊಂದರಲ್ಲಿ ಹೇಳಿಕೊಂಡಿದ್ದರು.

# ಉಲ್ಕೆಯಾಗಿ ಉರಿಯದೆ ನಕ್ಷತ್ರವಾದ ಶ್ರೀನಿವಾಸ್

ಮ್ಯಾಂಡೊಲಿನ್ ಶ್ರೀನಿವಾಸ್ ಅಂದ ತಕ್ಷಣ ಹಲವಾರು ವಿಷಯಗಳು ನಮ್ಮ ಮನಸ್ಸಿನಲ್ಲಿ ಬಂದು ಹೋಗುತ್ತವೆ. ಬಾಲ ಪ್ರತಿಭೆ, ಪಾಶ್ಚಾತ್ಯ ವಾದ್ಯವನ್ನು ಸೊಗಸಾಗಿ ನಮ್ಮ ಸಂಗೀತಕ್ಕೆ ಒಗ್ಗಿಸಿಕೊಂಡವರು, ಇತ್ಯಾದಿ, ಇತ್ಯಾದಿ ಏನೇನೊ ಅನ್ನಿಸಿ, ಅಯ್ಯೋ ಇಷ್ಟು ಬೇಗ ಹೋಗಿಬಿಟ್ಟರಾ ? ಎಂಥ ಅನ್ಯಾಯ ! ಅನ್ನಿಸಿಬಿಡುತ್ತದೆ.

ನಮ್ಮಲ್ಲಿ ಹಲವು ಬಾಲಪ್ರತಿಭೆಗಳು ಬಂದು ಹೋಗಿದ್ದಾರೆ. ಆದರೆ ನಿಜವಾದ ಬಾಲಪ್ರತಿಭೆಗಳಾಗಿ ಉಳಿದುಕೊಂಡಿರುವವರು ಕೆಲವರಷ್ಟೆ, ಇನ್ನು ಕೆಲವರು ಬೆರಗು ಮೂಡಿಸಿ, ಮಿನುಗಿದಷ್ಟೇ ಬೇಗ ಕಣ್ಮರೆಯಾಗಿಬಿಡುತ್ತಾರೆ. ಅತಿ ಚಿಕ್ಕ ವಯಸ್ಸಿನಲ್ಲೇ ಅವರಿಗಿರುವ ಜ್ಞಾನವನ್ನೋ, ತಂತ್ರಗಾರಿಕೆಯನ್ನೋ ಕಂಡು ನಾವು ಬೆರಗಾಗಿಬಿಟ್ಟಿರುತ್ತೇವೆ. ಆ ವಯಸ್ಸಿನಲ್ಲೇ ಹಲವು ರಾಗಗಳನ್ನು ಗುರುತಿಸುವುದು, ತುಂಬ ಕ್ಲಿಷ್ಟವಾದ ಕೃತಿಗಳನ್ನು ಪ್ರಸ್ತುತಪಡಿಸುವುದು, ಇವೆಲ್ಲಾ ಮೆಚ್ಚಬೇಕಾದ ವಿಚಾರಗಳೇ. ಆದರೆ ಹೆಚ್ಚಿನವರಿಗೆ ಇವುಗಳಲ್ಲಿ ಇರಬೇಕಾದಷ್ಟು ಪಕ್ವತೆ ಇನ್ನೂ ಬಂದಿರುವುದಿಲ್ಲ ಅಥವಾ ಅದು ಬರುವ ಮೊದಲು ಅವರೇ ಮಾಯವಾಗಿ ಬಿಟ್ಟಿರುತ್ತಾರೆ. ಸಂಗೀತಕ್ಕೆ, ಅದರಲ್ಲೂ ಕರ್ನಾಟಕ ಸಂಗೀತಕ್ಕೇ ನಮ್ಮನ್ನು ಸೀಮಿತಗೊಳಿಸಿಕೊಂಡು ಮಾತನಾಡುವುದಾದರೆ ಟಿ. ಆರ್. ಮಹಾಲಿಂಗಂ, ರಾಜರತ್ನಂ ಪಿಳ್ಳೈ, ರವಿಕಿರಣ್, ಪಾಲ್ಘಾಟ್ ಮಣಿ ಅಯ್ಯರ್, ವೀಣಾ ಬಾಲಚಂದರ್ ಇವರೆಲ್ಲಾ ಬಾಲ ಪ್ರತಿಭೆಗಳಾಗಿ ಬಂದವರು ಮತ್ತು ಮುಂದೆಯೂ ಪ್ರತಿಭೆಗಳಾಗೇ ಉಳಿದುಕೊಂಡವರು. ಇವರ ಸಾಲಿಗೆ ಮ್ಯಾಂಡೊಲಿನ್ ಶ್ರೀನಿವಾಸ್ ಕೂಡ ಸೇರುತ್ತಾರೆ.

ಟಿ. ಆರ್. ಮಹಾಲಿಂಗಂ ತಾವು ಆರಿಸಿಕೊಂಡ ವಾದ್ಯದ ಸ್ವರೂಪವನ್ನೇ ಬದಲಿಸಿಬಿಟ್ಟರು. ಕರ್ನಾಟಕ ಸಂಗೀತದ ಎಲ್ಲಾ ಸೊಗಸುಗಳನ್ನು ಅದರಲ್ಲಿ ತಂದರು. ಜೊತೆಗೆ, ವಾದ್ಯದ ಸಾಧ್ಯತೆಯನ್ನೆಲ್ಲಾ ಶೋಧಿಸಿದರು. ಅವರ ನಂತರದಲ್ಲಿ ಕೊಳಲುವಾದನದ ಸ್ವರೂಪವೇ ಬದಲಾಗಿಬಿಟ್ಟಿತು. ಇದೇ ರೀತಿಯಲ್ಲಿ ರಾಜರತ್ನಂ ಪಿಳ್ಳೈ, ಮಣಿ ಅಯ್ಯರ್ ಇವರೆಲ್ಲಾ ತಮ್ಮ ತಮ್ಮ ವಾದ್ಯಕ್ಕೆ ಒಂದು ವಿಶಿಷ್ಟ ಘನತೆಯನ್ನು ತಂದುಕೊಟ್ಟರು. ಆದರೆ ಶ್ರೀನಿವಾಸ್ ಆರಿಸಿಕೊಂಡದ್ದು ಈ ಹಿಂದೆ ಕರ್ನಾಟಕ ಸಂಗೀತದಲ್ಲಿ ಬಳಸದೇ ಇದ್ದ ವಾದ್ಯವನ್ನು. ಅಷ್ಟೇ ಅಲ್ಲ, ಬಳಸಬಹುದು ಎಂದು ಯಾರೂ ಊಹಿಸದೇ ಇದ್ದ ವಾದ್ಯವನ್ನು. ಇದಕ್ಕೆ ಇಂಥದ್ದೊಂದು ಸಾಧ್ಯತೆಯಿತ್ತು ಎನ್ನುವ ಅರಿವೂ ಯಾರಿಗೂ ಇರಲಿಲ್ಲ. ಇಂತಹ ವಾದ್ಯದ ನಾದವನ್ನು ಮದುವೆಯ ಯಾವುದೋ ಕಾರ್ಯಕ್ರಮವೊಂದರಲ್ಲಿ ಕೇಳಿ ಮರುಳಾಗಿ ಅದನ್ನು ಕೊಡಿಸೆಂದು ಅಪ್ಪನಿಗೆ ದುಂಬಾಲುಬಿದ್ದರು.

ಕೆಲವು ವಾದ್ಯಗಳಿಗೆ ಅವುಗಳದೇ ಆದ ಕೆಲವು ಮಿತಿಗಳಿರುತ್ತವೆ. ಹಾಗಿದ್ದಾಗ್ಯೂ ಅವುಗಳನ್ನು ಈ ಸಂಗೀತಕ್ಕೆ ಒಗ್ಗಿಸಲು ಹೊರಟಾಗ ಈ ಸಂಗೀತದ ಹರವು ಕುಗ್ಗಿಹೋಗುತ್ತದೆ. ಎಷ್ಟೇ ಪ್ರಯತ್ನಿಸಿದರೂ ಇವುಗಳ ಮೂಲಕ ಕರ್ನಾಟಕ ಸಂಗೀತದ ಕಲಾತ್ಮಕತೆಯನ್ನು ಅಭಿವ್ಯಕ್ತಿಸಲು ಆಗುವುದಿಲ್ಲ. ಇದನ್ನು ಕಲಾವಿದನ ಮಿತಿಯೆಂದು ಭಾವಿಸಬಾರದು. ಇದು ವಾದ್ಯದ ಮಿತಿ. ಹಾರ್ಮೋನಿಯಂ, ಜಲತರಂಗ್, ಕೀಬೋರ್ಡ್ ಇವುಗಳಿಗೆಲ್ಲಾ ಇಂತಹ ಮಿತಿ ಇತ್ತು. ಒಬ್ಬ ಪ್ರತಿಭಾವಂತ ಕಲಾವಿದ ಯಾವುದೇ ಒಂದು ವಾದ್ಯದ ಸಾಧ್ಯತೆಯನ್ನು ಸ್ವಲ್ಪ ಮಟ್ಟಿಗೆ ವಿಸ್ತರಿಸಬಲ್ಲ. ಹಾಗಂತ ಅದರಲ್ಲಿ ಬೇಕಾದದ್ದೆಲ್ಲಾ ದಕ್ಕಿಬಿಡುವುದಿಲ್ಲ. ಹೀಗಿದ್ದಾಗ ಇವುಗಳನ್ನು ಹಟದಿಂದ ಒಗ್ಗಿಸಿಕೊಳ್ಳಲು

**ಟಿ. ಎಸ್. ವೇಣುಗೋಪಾಲ್ ಮತ್ತು ಶೈಲಜ**

ಪ್ರಯತ್ನಿಸಿದರೆ ಸೊರಗುವುದು ಸಂಗೀತವೇ.

ಆದರೆ ಯಾವುದೇ ಒಂದು ಸಂಸ್ಕೃತಿಗೆ, ಸಂಗೀತಕ್ಕೆ ಕೆಲವು ವಾದ್ಯಗಳು ಸಂಪೂರ್ಣ ಅನ್ಯವಾಗಿದ್ದಾಗ್ಯೂ ಅವುಗಳಿಗೆ ಅಂತಹ ಸಾಧ್ಯತೆ ಇರುತ್ತದೆ. ಒಂದಿಷ್ಟು ಬದಲಾವಣೆಗಳನ್ನು ಮಾಡಿಕೊಂಡು ಅವುಗಳನ್ನು ಒಗ್ಗಿಸಿಕೊಳ್ಳಬಹುದು. ಹೀಗೆ ರೂಪಾಂತರಗೊಂಡ ವಯೋಲಿನ್ ಇಂದು ಕರ್ನಾಟಕ ಸಂಗೀತದ ಬೇರ್ಪಡಿಸಲಾಗದಂತಹ ಭಾಗವಾಗಿಬಿಟ್ಟಿದೆ. ಕರ್ನಾಟಕ ಸಂಗೀತದ ಘನತೆಗೆ ಧಕ್ಕೆಯಾಗದಂತೆ ಎ. ಕೆ. ಸಿ. ನಟರಾಜನ್ ಅವರು ಕ್ಲಾರಿಯೋನೆಟ್‌ಅನ್ನು ಒಗ್ಗಿಸಿದ್ದಾರೆ. ಸ್ಯಾಕ್ಸೋಫೋನ್ ಬಗ್ಗೆ ಕೆಲವರು ತೀವ್ರವಾಗಿ ಆಕ್ಷೇಪ ವ್ಯಕ್ತಪಡಿಸಿದರೂ ಅದು ಇಂದು ಜನಪ್ರಿಯ ವಾದ್ಯವಾಗಿಬಿಟ್ಟಿದೆ. ಹಿಂದೂಸ್ತಾನಿ ಸಂಗೀತದಲ್ಲಿ ಇಂತಹ ಹಲವು ಪ್ರಯತ್ನಗಳೂ ಆಗಿವೆ. ಅಲ್ಲಾವುದ್ದೀನ್ ಖಾನ್ ಸರೋದ್‌ಅನ್ನು ಹಾಗೆ ಅರ್ಥಪೂರ್ಣವಾಗಿ ಒಗ್ಗಿಸಿದರು. ಅವರ ಕೈಯಲ್ಲಿ ಸಿತಾರ್ ಕೂಡ ಬದಲಾಯಿತು. ಆಲಿ ಅಕ್ಬರ್ ಖಾನ್ ಸರೋದ್‌ನ ಸಾಧ್ಯತೆಯನ್ನೆಲ್ಲಾ ಬಲು ಸೊಗಸಾಗಿ ಹೊರಗೆ ತಂದರು. ಸಿತಾರ್ ಹಾಗೂ ಸುರ್‌ಬಹಾರ್ ಇವೆರಡರ ಸಾಧ್ಯತೆಗಳನ್ನೂ ಮೈಗೂಡಿಸಿಕೊಂಡು ರವಿಶಂಕರ್ ಕೈಯಲ್ಲಿ ಸಿತಾರ್ ಅಪ್ರತಿಮ ವಾದ್ಯವಾಗಿ ಮೆರೆಯಿತು.

ಶ್ರೀನಿವಾಸ್ ಆರಿಸಿಕೊಂಡ ಈ ಪಾಶ್ಚಿಮಾತ್ಯ ವಾದ್ಯಕ್ಕೆ ಅದರ ಮೂಲ ರೂಪದಲ್ಲಿ ಕರ್ನಾಟಕ ಸಂಗೀತದ ಹಲವಾರು ಸಾಧ್ಯತೆಗಳು ಇರಲಿಲ್ಲ. ಕರ್ನಾಟಕ ಸಂಗೀತದ ಎಲ್ಲಾ ಗಮಕಗಳನ್ನು ನುಡಿಸಲು ಅದರಲ್ಲಿ ಸಾಧ್ಯವಿರಲಿಲ್ಲ. ಹಾಗಾಗಿ ತಮಗೆ ಬೇಕಾದ ಸಂಗೀತವನ್ನು ಅದರಲ್ಲಿ ಮೂಡಿಸಲು ಒಂದಿಷ್ಟು ಮಾರ್ಪಾಡುಗಳನ್ನು ಮಾಡಿಕೊಳ್ಳುವುದು ಅನಿವಾರ್ಯ ವಾಯಿತು. ಪಾಶ್ಚಿಮಾತ್ಯ ವಾದ್ಯ ಮ್ಯಾಂಡೊಲಿನ್‌ನಲ್ಲಿ ಎಂಟು ತಂತಿಗಳಿದ್ದವು. ಶ್ರೀನಿವಾಸ್ ಅದನ್ನು ಐದಕ್ಕೆ ಇಳಿಸಿಕೊಂಡರು. ಇದರಿಂದ ಮಂದ್ರಸ್ಥಾಯಿ ನುಡಿಸುವುದಕ್ಕೆ ತುಂಬ ಅನುಕೂಲವಾಯಿತು. ಕರ್ನಾಟಕ ಸಂಗೀತದ ಅಸ್ಮಿತೆ ಇರುವುದೇ ಅದರ ವೈವಿಧ್ಯಮಯ ಹಾಗೂ ಸಂಕೀರ್ಣ ಗಮಕಗಳಲ್ಲಿ. ಕರ್ನಾಟಕ ಸಂಗೀತದ ಜೀವಾಳವೇ ಈ ಗಮಕಗಳು. ಇವು ಕರ್ನಾಟಕ ಸಂಗೀತಕ್ಕೆ ಒಂದು ವಿಶಿಷ್ಟತೆಯನ್ನು ತಂದುಕೊಟ್ಟಿವೆ. ವಿಭಿನ್ನ ರಾಗಗಳಲ್ಲಿ ಹಾಗೂ ಒಂದೇ ರಾಗದೊಳಗೆ ವಿವಿಧ ಸ್ವರಗಳ ನಡುವೆ ಈ ಗಮಕಗಳು ವ್ಯವಹರಿಸುವ ರೀತಿಯೇ ತುಂಬ ಸಂಕೀರ್ಣವಾದದ್ದು. ವಿದ್ವಾನ್ ಟಿ. ಎಂ. ಕೃಷ್ಣನ್ ಹೇಳುವಂತೆ ಇವುಗಳನ್ನು ಅತ್ಯಂತ ಕರಾರುವಾಕ್ಕಾಗಿ ಹೊರಹೊಮ್ಮಿಸುವುದು ಗಾಯನದಲ್ಲಿ ಕೂಡ ತುಂಬ ಕಷ್ಟ. ಇನ್ನು ವಾದನದಲ್ಲಂತೂ ಅದೊಂದು ಸವಾಲೇ ಸರಿ. ಈ ಸೂಕ್ಷ್ಮತೆ ಹಲವು ವಾದ್ಯಗಳಲ್ಲಿ ಸಾಧ್ಯವಾಗುವುದಿಲ್ಲ. ಅಷ್ಟೇ ಅಲ್ಲ, ಕೆಲವು ವಾದ್ಯಗಳು ಇವುಗಳನ್ನು ವಿರೂಪಗೊಳಿಸಿಬಿಡುತ್ತವೆ. ಈ ಸವಾಲಿಗೆ ಅತ್ಯಂತ ಯಶಸ್ವಿಯಾಗಿ, ಸೃಜನಶೀಲವಾಗಿ ಮುಖಾಮುಖಿಯಾಗಿ, ಈ ಪದ್ಧತಿಯ ಅತಿ ಸೂಕ್ಷ್ಮ ಗಮಕವನ್ನೂ ಅತ್ಯಂತ ಸಮರ್ಪಕವಾಗಿ,



ಬಾಲ ಕಲಾವಿದ ಯು. ಶ್ರೀನಿವಾಸ್

ಕರಾರುವಾಕ್ಕಾಗಿ ಮ್ಯಾಂಡೋಲಿನ್‌ನಲ್ಲಿ ಮೂಡಿಸಲು ಯಶಸ್ವಿಯಾದದ್ದು ಶ್ರೀನಿವಾಸ್ ಅವರ ಹೆಚ್ಚುಗಾರಿಕೆ. ಕರ್ನಾಟಕ ಸಂಗೀತದಲ್ಲಿ ಪ್ರತಿಯೊಬ್ಬ ಸಂಗೀತಗಾರನನ್ನು ಒರೆಗೆ ಹಚ್ಚುವ ತೋಡಿ, ಬೇಗಡೆ ಮೊದಲಾದ ರಾಗಗಳು ಶ್ರೀನಿವಾಸರ ಮ್ಯಾಂಡೊಲಿನ್‌ನಲ್ಲಿ ಪರಿಪೂರ್ಣವಾಗಿ ಮೂಡಿ ಬರುತ್ತಿದ್ದವು. ಆಕಾಶವಾಣಿಯಲ್ಲಿ ಶ್ರೀನಿವಾಸ್ ಅವರನ್ನು ಸಂದರ್ಶಿಸುತ್ತಾ, ವೀಣಾ ಎಸ್. ಬಾಲಚಂದರ್ ಅವರು, "ವೀಣೆಯನ್ನು ಯಾರಾದರೂ ಗಮಕವಿಲ್ಲದೆ ನುಡಿಸಿದರೆ ಅವರು ಮ್ಯಾಂಡೊಲಿನ್‌ಅನ್ನು ಹಾಗೆ ವೀಣೆ ನುಡಿಸುತ್ತಿದ್ದಾರೆ ಎಂದು ನಾನು ಲೇವಡಿ ಮಾಡುತ್ತಿದ್ದೆ. ಆದರೆ ನೀನು ಮ್ಯಾಂಡೊಲಿನ್‌ಅನ್ನು ವೀಣೆಯ ಹಾಗೆ ನುಡಿಸುತ್ತೀಯೆ." ಎಂದಿದ್ದು ಶ್ರೀನಿವಾಸ್ ಆ ವಾದ್ಯವನ್ನು ಈ ಸಂಗೀತಕ್ಕೆ ಅದೆಷ್ಟು ಪರಿಪೂರ್ಣವಾಗಿ ಒಗ್ಗಿಸಿದ್ದರು ಎನ್ನುವುದಕ್ಕೆ ಸಾಕ್ಷಿ.

ಶ್ರೀನಿವಾಸ್ ಅವರಿಗಿದ್ದ ಮತ್ತೊಂದು ಸಮಸ್ಯೆಯೆಂದರೆ ಅದನ್ನು ಯಾರ ಬಳಿ ಕಲಿಯುವುದು ಎನ್ನುವುದು. ಯಾರಿಗೂ ಆ ವಾದ್ಯ ಬರುತ್ತಿರಲಿಲ್ಲ. ಮೊದಲ ಗುರು ಅವರ ತಂದೆಯೇ. ತಾವಿಲ್ಲದಿದ್ದಾಗ ಮಗ ತಮ್ಮ ಮ್ಯಾಂಡೊಲಿನ್ ತೆಗೆದು ನುಡಿಸುವುದನ್ನು ಕೇಳಿದ್ದರು. ಮಗನ ಪ್ರತಿಭೆಯ ಅರಿವು ಅವರಿಗಾಗಿತ್ತು. ಆದರೆ ಅವರಿಗಿದ್ದ ಅನುಮಾನವೆಲ್ಲಾ ಮ್ಯಾಂಡೊಲಿನ್ ಬಗ್ಗೆಯೇ. ಇದರಲ್ಲಿ ಕರ್ನಾಟಕ ಸಂಗೀತ ಸಾಧ್ಯವೇ ? ಮಗನ ಪ್ರತಿಭೆ ಅನ್ಯಾಯವಾಗಿ ಹಾಳಾಗಿ ಹೋಗಿ ಬಿಡುತ್ತದಲ್ಲಾ ಎಂಬ ಮುಂತಾದ ಒದ್ದಾಟಗಳು ಅವರನ್ನು ಕಾಡುತ್ತಿದ್ದವು. ಇವರ ಪ್ರತಿಭೆಯನ್ನು ಮೆಚ್ಚಿಕೊಂಡಿದ್ದ ಇತರ ಹಲವರಿಗೂ ಇಂತಹುದೇ ಅನುಮಾನಗಳಿದ್ದವು. ಹಾಗಾಗಿಯೇ ವಾದ್ಯವನ್ನು ಬದಲಿಸುವ ಸಲಹೆಯನ್ನೂ ಬಾಲ ಶ್ರೀನಿವಾಸನಿಗೆ ನೀಡಿದರು. ಆದರೆ ಶ್ರೀನಿವಾಸರ ಮ್ಯಾಂಡೊಲಿನ್ ವ್ಯಾಮೋಹ ಮಾತ್ರ ಸ್ವಲ್ಪವೂ ಕುಗ್ಗಲಿಲ್ಲ. ಪ್ರತಿಯೊಂದು ಅನುಮಾನವನ್ನೂ ಸವಾಲಾಗೇ ಸ್ವೀಕರಿಸಿದರು.

ಕಲಿಯಲು ಪ್ರಾರಂಭಿಸಿದ ನಾಲ್ಕೇ ತಿಂಗಳೊಳಗೆ ಬಾಲ ಪಾಠಗಳನ್ನೆಲ್ಲಾ ಮುಗಿಸಿ ಸಂಗೀತಗಾರರಿಗೆ, ಅದರಲ್ಲೂ ವಾದಕರಿಗೆ ಸವಾಲಾದ ಭೈರವಿ ರಾಗದ ವೀರಿಬೋಣಿ ವರ್ಣವನ್ನು ಮ್ಯಾಂಡೊಲಿನ್‌ನಲ್ಲಿ ನುಡಿಸುವ ಮಟ್ಟಿಗೆ ಬೆಳೆದರು. ಅವರು ಗಂಟೆಗಟ್ಟಲೆ ಅಭ್ಯಾಸ ಮಾಡುತ್ತಿದ್ದುದು ವಾದ್ಯದ ಮೇಲೆ ಹಿಡಿತ ಸಾಧಿಸಿಕೊಳ್ಳಲು ನೆರವಾಯಿತು. ಚೆಂಬೈ ವೈದ್ಯನಾಥ ಭಾಗವತರ ಶಿಷ್ಯರಾಗಿದ್ದ ರುದ್ರರಾಜು ಸುಬ್ಬರಾಜು ಅವರಲ್ಲಿ ಸಂಗೀತದ ಕಲಿಕೆಯನ್ನು ಮುಂದುವರಿಸಿದರು. ಇವರಿದ್ದ ಕಟ್ಟಡದಲ್ಲೇ ಗುರುಗಳ ಮನೆ ಇದ್ದದ್ದರಿಂದ ಇವರಿಗೆ ಗುರುಕುಲ ಮಾದರಿಯಲ್ಲೇ ಸಂಗೀತ ಕಲಿಯುವಂತಾಯಿತು. ಗುರುಗಳಿಗೆ ಈ ವಾದ್ಯ ಸಂಪೂರ್ಣವಾಗಿ ಅಪರಿಚಿತ. ಅವರು ಹಾಡುತ್ತಿದ್ದರು, ಇವರು ವಾದ್ಯ ನುಡಿಸುತ್ತಿದ್ದರು. ವಾದ್ಯದ ತಂತ್ರಗಾರಿಕೆ ಗಳನ್ನು, ಅದರ ಧ್ವನಿಯ ಸಾಧ್ಯತೆಗಳನ್ನು ಹಾಗೂ ಕರ್ನಾಟಕ ಸಂಗೀತದ ಕಲಾತ್ಮಕತೆಯ ಸಾಧ್ಯತೆಗಳನ್ನು ಶ್ರೀನಿವಾಸ್ ತನ್ನ ಕಲ್ಪನೆ ಹಾಗೂ ಸ್ವಪ್ರಯತ್ನದಿಂದ ಕಂಡುಕೊಳ್ಳಬೇಕಿತ್ತು. ಗುರುವಿಗೆ ಶಿಷ್ಯನ ಬಗ್ಗೆ ಅಪಾರ ಹೆಮ್ಮೆ, ಪ್ರೀತಿ. ತಮ್ಮ ಗಾಯನವನ್ನು ಕೇಳಿ ಸಂಗೀತದ ಸೂಕ್ಷ್ಮವನ್ನೆಲ್ಲಾ ಶಿಷ್ಯನು ಗ್ರಹಿಸುತ್ತಿದ್ದ ರೀತಿ, ಶಿಷ್ಯನ ಅಸಾಧಾರಣ ನೆನಪಿನ ಶಕ್ತಿ, ಲಯಜ್ಞಾನ ಇವನ್ನು ವಿವರಿಸುವುದೇ ಅವರಿಗೊಂದು ಖುಷಿ. ಶ್ರೀನಿವಾಸ್‌ಗೆ ಸಂಗೀತದ ಸ್ವರಲಿಪಿ ಓದುವುದಕ್ಕೆ ಬರುತ್ತಿತ್ತು ಆದರೆ ಶ್ರೀನಿವಾಸ್ ನಿಜವಾಗಿಯೂ ಕಲಿತಿದ್ದು ತನ್ನ 'ಕಿವಿ ಮತ್ತು ಮನಸ್ಸಿನ' ಮೂಲಕ ಎಂಬ ಗಮನಾರ್ಹ ವಿಚಾರವನ್ನು ಅವರ ಗುರು ಆಗಾಗ್ಗೆ ಹೇಳುತ್ತಿದ್ದರು. ಶಿಷ್ಯನಿಗೂ ಅವರ ಬಗ್ಗೆ ಅಪಾರ ಗೌರವ. "ಅವರೊಬ್ಬರು ಮಹಾನ್ ಗುರು, ಅವರಂತಹ ಗುರು ಸಿಗುವುದಕ್ಕೆ ಪುಣ್ಯ ಮಾಡಿರಬೇಕು" ಎನ್ನುತ್ತಿದ್ದರು ಶ್ರೀನಿವಾಸ್. ಜೊತೆಗೆ ಶ್ರೀನಿವಾಸ್ ದೊಡ್ಡವರ ಸಂಗೀತವನ್ನು ಗಂಭೀರವಾಗಿ ಕೇಳುತ್ತಿದ್ದರು ಮತ್ತು ಅದನ್ನು ತಮ್ಮ ಸಂಗೀತಕ್ಕೆ ಅಳವಡಿಸಿಕೊಳ್ಳುತ್ತಿದ್ದರು.

ಶ್ರೀನಿವಾಸ್ ಪ್ರತಿಭಾವಂತ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ತನ್ನ ಕಲ್ಪನೆಯನ್ನು ವಾದ್ಯದಲ್ಲಿ ಮೂಡಿಸುವುದಕ್ಕೆ, ವಾದ್ಯದ ಸಾಧ್ಯತೆಯನ್ನು ವಿಸ್ತರಿಸುವುದಕ್ಕೆ, ತನ್ನ ಮನದಲ್ಲಿದ್ದುದು ಬೆರಳುಗಳಲ್ಲಿ ಹೊಮ್ಮಬೇಕಾದರೆ ಅಸಾಧ್ಯ ಪರಿಶ್ರಮ ಮತ್ತು ಸಾಧನೆ ಅವಶ್ಯಕ ಎನ್ನುವುದನ್ನು ಮನಗಂಡಿದ್ದರು ಶ್ರೀನಿವಾಸ್. "ನಾನು ಮ್ಯಾಂಡೊಲಿನ್ ಕಲಿಯಲಾರಂಭಿಸಿದಾಗ ದಿನಕ್ಕೆ ಎಂಟು-ಹತ್ತು ಗಂಟೆಗಳ ಕಾಲ ಅಭ್ಯಾಸ ಮಾಡುತ್ತಿದ್ದೆ. ಈಗ ವಿಶ್ವಪರ್ಯಟನೆಯ ಹಾಗೂ ಕಾರ್ಯಕ್ರಮಗಳ ಒತ್ತಡವಿರುವಾಗಲೂ ಮದ್ರಾಸಿನಲ್ಲಿ ಇರುವಾಗ ಕೊನೇ ಪಕ್ಷ ಐದು ಗಂಟೆಗಳ ಕಾಲ ಅಭ್ಯಾಸ ಮಾಡುತ್ತೇನೆ. ಸರಳೆಗಳನ್ನು ಮಾಯಾಮಾಳವಗೌಳದಲ್ಲಿ ತ್ರಿಕಾಲದಲ್ಲಿ ನುಡಿಸಿ, ನಂತರ ತೋಡಿ, ಕಲ್ಯಾಣಿ, ಶಂಕರಾಭರಣ ಮುಂತಾದ ಮೇಳಕರ್ತ ರಾಗಗಳನ್ನು ನುಡಿಸುತ್ತೇನೆ. ದಿನಕ್ಕೆ ಒಂದು ರಾಗವನ್ನು ನುಡಿಸುತ್ತೇನೆ. ಹಾಗೆ ನುಡಿಸುವಾಗ ಎಲ್ಲ ಗಮಕಗಳೂ ಶುದ್ಧವಾಗಿ ಬರುತ್ತಿವೆ ಎನ್ನುವುದನ್ನು ಖಚಿತಪಡಿಸಿಕೊಳ್ಳುತ್ತೇನೆ" ಎಂದು ಸಂದರ್ಶನ ಒಂದರಲ್ಲಿ ಹೇಳಿಕೊಂಡಿದ್ದರು.

ಹೀಗೆ ಎಲ್ಲವೂ ಒಂದು ಕಡೆ ಮೇಳೈಸಿದ್ದರಿಂದ ತೀರಾ ಸಣ್ಣ ವಯಸ್ಸಿನಲ್ಲಿ ಇವರಿಗೆ ಸಂಗೀತದಲ್ಲಿ ಪ್ರೌಢಿಮೆ ಗಳಿಸಲು ಸಾಧ್ಯವಾಯಿತು. ಕರ್ನಾಟಕ ಸಂಗೀತವನ್ನು ಪರಿಪೂರ್ಣವಾಗಿ ಮೂಡಿಸುವುದಕ್ಕೆ ಸಾಧ್ಯವಾಗುವಂತೆ ಪಾಶ್ಚಾತ್ಯ ವಾದ್ಯವಾದ ಮ್ಯಾಂಡೊಲಿನ್‌ಅನ್ನು ಒಗ್ಗಿಸಿಕೊಂಡರು. ಅವರು ಮಾಗಿದಂತೆಲ್ಲಾ ಸಂಗೀತದ ವೇಗ ಕಮ್ಮಿಯಾಗಿ ಅವರ ಸಂಗೀತಕ್ಕೊಂದು ನೆಮ್ಮದಿಯ ಹದ ದಕ್ಕಿತು.

ಮ್ಯಾಂಡೊಲಿನ್‌ಗೆ ಇವರು ಮಾಡಿಕೊಂಡ ಬದಲಾವಣೆಯಿಂದ ಅದರ ಸಾಧ್ಯತೆ ಹೆಚ್ಚಾಯಿತೇ ಹೊರತು ವಾದ್ಯದ ಮೂಲ ಸಾಧ್ಯತೆಗಳಿಗೇನೂ ಧಕ್ಕೆಯಾಗಲಿಲ್ಲ. ಹಾಗಾಗಿಯೇ ಈ ಆವಿಷ್ಕಾರವನ್ನು ಪಾಶ್ಚಾತ್ಯರೂ ಮೆಚ್ಚಿಕೊಂಡಿದ್ದರು. ಇದಕ್ಕೆ ಸಂಬಂಧಿಸಿದ ಘಟನೆಯೊಂದನ್ನು ಹೀಗೆ ನೆನಪಿಸಿಕೊಳ್ಳುತ್ತಿದ್ದರು ಶ್ರೀನಿವಾಸ್: "ವೆಸ್ಟ್ ಬರ್ಲಿನ್ನಿನಲ್ಲಿ ವಿಶೇಷವಾಗಿ ಮ್ಯಾಂಡೊಲಿನ್‌ಗೆಂದೇ ನಡೆದ ಜಾಸ್ ಹಬ್ಬದಲ್ಲಿ ಒಂದು ಗಂಟೆ ನುಡಿಸಲು ನನಗೆ ಅವಕಾಶ ನೀಡಿದ್ದರು. ಕಾರ್ಯಕ್ರಮ ಮುಗಿದ ಮೇಲೆ ಪ್ರೇಕ್ಷಕರು ನನ್ನ ಸಂಗೀತವನ್ನು ಮತ್ತಷ್ಟು ಕೇಳಲು ಬಯಸಿದರು. ಸ್ಥಳೀಯರ ಸಂಗೀತ ಪ್ರಸ್ತುತಿ ಮುಗಿದ ಮೇಲೆ ಮತ್ತೊಂದು ಗಂಟೆ ನುಡಿಸುವಂತೆ ನನ್ನನ್ನು ಕೇಳಿಕೊಂಡರು. ಅಷ್ಟೇ ಅಲ್ಲ, ಮುಕ್ತಾಯದ ಕಾರ್ಯಕ್ರಮವೂ ನನ್ನ ಪಾಲಿಗೇ ಬಂತು. ಆ ಮುಕ್ತಾಯವನ್ನು ಅಲ್ಲಿ ಪಾಲ್ಗೊಂಡಿದ್ದ ಎಲ್ಲ ಕಲಾವಿದರೂ ಒಟ್ಟಾಗಿ ಅದನ್ನು ನುಡಿಸಬೇಕಿತ್ತು. ಇಡೀ ಬ್ಯಾಂಡ್ ನುಡಿಸುವುದಕ್ಕೆಂದು ಕೀರವಾಣಿಯಲ್ಲಿ ಒಂದು ರಚನೆಯನ್ನು ಮಾಡಿದೆ. ಅದು ತುಂಬ ಯಶಸ್ವಿಯಾಯಿತು."

ಈ ಜಾಸ್ ಹಬ್ಬದಲ್ಲಿ ೧೪ ವರ್ಷದ ಈ ಹುಡುಗನ ಪ್ರತಿಭೆಯನ್ನು ನೋಡಿ ಬೆರಗಾದ ಜಾನ್ ಮ್ಯಾಕ್ಲಾಗ್ಲಿನ್ ತಮ್ಮ 'ಶಕ್ತಿ' ತಂಡಕ್ಕೆ ಶ್ರೀನಿವಾಸ್ ಅವರನ್ನು ಆಹ್ವಾನಿಸಿದರು. ಅದರಲ್ಲಿ ಭಾರತದ ಜ಼ಾಕಿರ್ ಹುಸೇನ್, ಶಂಕರ್ ಮಹದೇವನ್, ವಿ. ಸೆಲ್ವ ಗಣೇಶ್ ಮೊದಲಾದ ಖ್ಯಾತನಾಮರೆಲ್ಲಾ ಇದ್ದರು. ಇದರಿಂದ ಶ್ರೀನಿವಾಸ್ ಅವರ ಬದುಕಿನಲ್ಲೊಂದು ಹೊಸ ತಿರುವು ದೊರಕಿತು. ಇವರೊಂದಿಗೆ ಶ್ರೀನಿವಾಸ್ ವಿಶ್ವಪರ್ಯಟನೆ ಮಾಡಿದರು.

ಅವರ ಸಮಕಾಲೀನರಿಗೆ ಹೋಲಿಸಿದರೆ, ಶ್ರೀನಿವಾಸ್‌ಗೆ ಒಂದು ಅನುಕೂಲವಿತ್ತು. ಅವರಿಗೆ ಪಾಶ್ಚಾತ್ಯ ಸಂಗೀತದ ಬಗ್ಗೆ ಒಳ್ಳೆಯ ಜ್ಞಾನವಿತ್ತು. ಗಿಟಾರ್ ವಾದಕರಾದ ವಾಸುರಾವ್ ಅವರಿಂದ ಪಾಶ್ಚಾತ್ಯ ಸಂಗೀತವನ್ನು ಮೊದಲೇ ಕಲಿತಿದ್ದರು. ಹೆಚ್ಚಿನ ಭಾರತೀಯ ಸಂಗೀತಗಾರರು ಪಾಶ್ಚಾತ್ಯರೊಂದಿಗೆ ಫ್ಯೂಷನ್ ಪ್ರಾರಂಭಿಸಿದ್ದು ಜಾಸ್ ಸಂಗೀತದ ಮೂಲಕವೇ. ಏಕೆಂದರೆ ಭಾರತೀಯ ಸಂಗೀತದಂತೆ ಜಾಸ್ ಸಂಗೀತದ ಜೀವಾಳವೂ ಮನೋಧರ್ಮವೇ ಆಗಿತ್ತು. ಒಬ್ಬ ರಾಕ್ ಸಂಗೀತದ ಗಿಟಾರ್ ವಾದಕನಿಗೆ ತೋಡಿ ರಾಗ ಕಷ್ಟವಾಗಬಹುದು. ಆದರೆ ಜಾನ್ ಮ್ಯಾಕ್ಲಾಗ್ಲಿನ್ ಅವರಂತಹ ಜಾಸ್ ಗಿಟಾರ್ ವಾದಕರು ಈ ರಾಗವನ್ನು ನಿಭಾಯಿಸಿದ್ದಾರೆ. ಜಾನ್

ರಸ್ತೆ ಅವ್ಯವಸ್ಥೆ

ಇದು ಮಳೆಗಾಲದಲ್ಲಿ ತೋಡು
ಬೇಸಿಗೆಯಲ್ಲಿ ರೋಡು, ಟೂ-
-ಇನ್- ವನ್ ವ್ಯವಸ್ಥೆ !!!

ಮ್ಯಾಕ್ಲಾಗ್ಲಿನ್ ಅವರಿಗೆ ಎಸ್. ರಾಮನಾಥನ್ ಅವರ ಬಳಿ ಕರ್ನಾಟಕ ಸಂಗೀತದ ಪಾಠವೂ ಆಗಿದೆ. ಜೊತೆಗೆ, ಪಂಡಿತ್ ರವಿಶಂಕರ್ ಅವರಲ್ಲಿಯೂ ಅವರು ಸಂಗೀತ ಕಲಿತಿದ್ದಾರೆ. ಅವರಿಗೆ ಈ ಸಂಗೀತದ ಬಗ್ಗೆ ವಿಶೇಷ ಒಲವು. ಭಾರತೀಯ ಸಂಗೀತದಿಂದ ಅವರ ಗಿಟಾರ್ ಕೂಡ ಒಂದಿಷ್ಟು ಮಾರ್ಪಾಡಾಗಿ ವೀಣೆಯ ಹಾಗಿರುವ ಗಿಟಾರ್ ಆಗಿದೆ ಅನ್ನುವ ಮಾತೂ ಇದೆ. ಅವರು ಇಲ್ಲಿಯವರನ್ನು ಒಟ್ಟುಮಾಡಿಕೊಂಡು 'ಶಕ್ತಿ' ತಂಡವನ್ನು ಕಟ್ಟಿದರು. ಶಂಕರ್ ಮಹದೇವನ್ ಸಿಗುವುದು ತುಂಬ ಕಷ್ಟವಾಗಿದ್ದಾಗ 'ಶಕ್ತಿ' ಮತ್ತೆ ಶಕ್ತಿಯನ್ನು ಪಡೆದದ್ದು ಯು. ಶ್ರೀನಿವಾಸ್ ಆ ತಂಡವನ್ನು ಸೇರಿದಾಗ.

ಇಲ್ಲಿ ಈ ಬೆಳವಣಿಗೆಯ ಮತ್ತೊಂದು ಮಗ್ಗುಲನ್ನೂ ಗಮನಿಸಬೇಕಾಗುತ್ತದೆ. ಫ್ಯೂಷನ್ ಸಂಗೀತದ ಮನಃಸ್ಥಿತಿ ತನಿಯಾಗಿ ನುಡಿಸುವ ಮನಃಸ್ಥಿತಿಗಿಂತ ಖಂಡಿತ ಬೇರೆ. ಅದರೊಂದಿಗೆ ಒಡನಾಡಿರುವ ಪ್ರಭಾವ ಇವರ ಸಂಗೀತದ ಮೇಲೂ ಆಗಿದೆ. ಆ ಬಗ್ಗೆ ಕೆಲವರ ತಕರಾರೂ ಇದೆ. ಹೀಗಾಗಿ ಇವರ ಕಛೇರಿಗಳ ಬಗ್ಗೆ ತೀರಾ ಖಾರವಾದ ವಿಮರ್ಶೆಗಳು ಬಂದವು. ಇದು ಸ್ವಲ್ಪ ಮಟ್ಟಿಗೆ ನಿಜವೂ ಹೌದು. ಆ ತಕರಾರು ಇವರ ಪ್ರತಿಭೆ ಹಾಗೂ ಇವರ ಸಂಗೀತದ ಗುಣದ ಬಗ್ಗೆ ಅಲ್ಲ. ಬದಲಾಗಿ ಪ್ರಖ್ಯಾತ ಸರೋದ್ ವಾದಕ ಪಂಡಿತ್ ರಾಜೀವ್ ತಾರಾನಾಥ್ ಅವರು, "ಪ್ರಮುಖವಾಗಿ ಫ್ಯೂಷನ್‌ನ ಪರಿಣಾಮವು ಪ್ರಾಕೃತಿಕವಾದುದು, ಭಾವನಾತ್ಮಕವಾದುದು. ಆದರೂ ಅದಕ್ಕೆ ಇನ್ನೊಂದು ಆಯಾಮವೂ ಇದೆ. ಸಂಗೀತಕ್ಕೆ ಅತ್ಯುನ್ನತ ಸಂಸ್ಕೃತಿಯ ಹಿನ್ನೆಲೆ, ಪರಂಪರೆ ಇದೆ. ಹಾಗಾಗಿ ಅದಕ್ಕೊಂದು ಅಭಿಜಾತ ಸ್ವರೂಪವಿದೆ. ನನ್ನ ಅಭಿಪ್ರಾಯದಲ್ಲಿ ಫ್ಯೂಷನ್‌ಅನ್ನು ಆ ಮಟ್ಟದಲ್ಲಿ ಬಳಸಲು ಪ್ರಯತ್ನಿಸುವುದು ಸಾಧ್ಯವಾಗದ ಮಾತು," ಎಂದು ಫ್ಯೂಷನ್‌ನ ಬಗ್ಗೆ ಆಡುವ ಮಾತು ಫ್ಯೂಷನ್ ಅಪ್ರಜ್ಞಾಪೂರ್ವಕವಾಗಿಯಾದರೂ ಶ್ರೀನಿವಾಸರ ಸಂಗೀತದ ಮೇಲೆ ಬೀರಿರುವ ಪ್ರಭಾವದತ್ತ ಗಮನ ಸೆಳೆಯುತ್ತದೆ. ಈ ಬಗ್ಗೆ ಸಾಕಷ್ಟು ಚರ್ಚೆಯೂ ಆಗಿದೆ. ಟಿ. ಎಂ. ಕೃಷ್ಣನ್ ಈ ಬಗ್ಗೆ ಮತ್ತೊಂದು ಅಂಶದ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ. ನಮ್ಮ ಸಂಗೀತ ಕ್ಷೇತ್ರ ಹೆಚ್ಚಾಗಿ ವೋಕಲ್ ಸಂಗೀತದ ಕಡೆ ವಾಲುತ್ತಿರುವುದರಿಂದ ವಾದಕರಿಗೆ ಅವಕಾಶಗಳು ಕಡಿಮೆಯಾಗುತ್ತಿವೆ. ವಾದ್ಯ ಸಂಗೀತದ ಬಗ್ಗೆಯೇ ಒಂದು ರೀತಿಯ ನಿರ್ಲಕ್ಷ್ಯ ಇದೆ. ವಾದಕರು ಫ್ಯೂಷನ್‌ನತ್ತ ವಾಲುವುದಕ್ಕೆ ಇದೂ ಒಂದು ಕಾರಣ ಎನ್ನುತ್ತಾರೆ. ಅದೇನೇ ಇರಲಿ, ಈ ವಿಶ್ವಖ್ಯಾತಿಯಿಂದ ಶ್ರೀನಿವಾಸ್ ಈ ನೆಲದ ನಂಟುಗಳನ್ನು ಕಳೆದುಕೊಳ್ಳಲಿಲ್ಲ. ಸ್ಥಳೀಯ ಸಂಗೀತ ಕಾರ್ಯಕ್ರಮಗಳನ್ನು ಇವರು ಎಂದೂ ಕಡೆಗಣಿಸಲಿಲ್ಲ, ಹಿಂದಿನಷ್ಟೇ ತೀವ್ರತೆಯಿಂದ ಅದರಲ್ಲಿ ತೊಡಗಿಕೊಂಡಿದ್ದರು. ಸಣ್ಣಪುಟ್ಟ ಸಭೆ, ದೇವಸ್ಥಾನಗಳಲ್ಲಿಯೂ ಕಾರ್ಯಕ್ರಮಗಳನ್ನು ನೀಡುತ್ತಲೇ ಇದ್ದರು. ಇವರ ಧ್ವನಿಮುದ್ರಣಗಳಿಗೆ ಮಾರುಕಟ್ಟೆಯಲ್ಲಿ ಅಪಾರ ಬೇಡಿಕೆ.

ಸಣ್ಣ ವಯಸ್ಸಿನಲ್ಲೇ ಮೃದಂಗ ವಾದಕ ಉಪೇಂದ್ರನ್ ಇವರನ್ನು ಗುರುತಿಸಿ ತಾವೇ ಪಕ್ಕವಾದ್ಯ ನುಡಿಸಲು ಮುಂದೆ ಬಂದು ಜೊತೆಗೆ ನಿಂತರು. ನಂತರ ಸಂಗೀತ ಕ್ಷೇತ್ರದ ಹಿರಿಯರು ಹಾಗೂ ಮಹಾನ್ ವಿದ್ವಾಂಸರೆಲ್ಲರೂ ಇವರ ಪ್ರೌಢಿಮೆ ಮತ್ತು ಪ್ರತಿಭೆಯನ್ನು ಸರಿಯಾಗಿಯೇ ಗುರುತಿಸಿದ್ದರು. ಈ ಕ್ಷೇತ್ರದ ದಿಗ್ಗಜರೆಲ್ಲರೂ ಇವರಿಗೆ ಬಹು ಪ್ರೀತಿ ಮತ್ತು ಆಸ್ಥೆಯಿಂದ ಪಕ್ಕವಾದ್ಯ ನುಡಿಸಿದರು. ಇವರ ವಾದನವನ್ನು ಮೊದಲ ಬಾರಿ ಕೇಳಿದಾಗ ರೋಮಾಂಚಿತರಾದ ಟಿ. ಎನ್. ಶೇಷಗೋಪಾಲನ್ ಅವರು ವೇದಿಕೆಗೆ ಹೋಗಿ ತಮ್ಮ ಬೆರಳಲ್ಲಿದ್ದ ಬಂಗಾರದ ಉಂಗುರವನ್ನು ಇವರಿಗೆ ತೊಡಿಸಿದರು. ಸ್ಯಾಕ್ಸೋಫೋನ್ ಅನ್ನು ಕಠಿಣವಾಗಿ ಟೀಕಿಸುತ್ತಿದ್ದ ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಅವರು ಶ್ರೀನಿವಾಸರ ಮ್ಯಾಂಡೊಲಿನ್ ವಾದನವನ್ನು ಮೆಚ್ಚಿಕೊಂಡಿದ್ದರು. ಬಹುಶಃ ಚೀನಾ ಒಂದನ್ನು ಬಿಟ್ಟು ಅವರು ಇಡೀ ಲೋಕವನ್ನೇ ಸುತ್ತಿದ್ದರೆನಿಸುತ್ತದೆ.

ಇವರ ಮುಡಿಗೇರಿದ ಪ್ರಶಸ್ತಿಗಳು ಹಲವಾರು – ಪದ್ಮಶ್ರೀ, ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ತಮಿಳುನಾಡು ಸರ್ಕಾರದ ಆಸ್ಥಾನ ವಿದ್ವಾನ್ ಪ್ರಶಸ್ತಿ, ಮೈಸೂರು ಟಿ. ಚೌಡಯ್ಯ ಸ್ಮಾರಕ ರಾಷ್ಟ್ರೀಯ ಪ್ರಶಸ್ತಿ, ಮ್ಯೂಸಿಕ್ ಅಕಾಡೆಮಿಯ ಬೆಸ್ಟ್ ಆರ್ಟಿಸ್ಟ್ ಪ್ರಶಸ್ತಿ, ರಾಜೀವ್ ಗಾಂಧಿ ನ್ಯಾಷನಲ್ ಇಂಟಿಗ್ರೇಷನ್ ಪ್ರಶಸ್ತಿ ಹೀಗೆ... ಹಲವಾರು.

ಇಂದು ಶ್ರೀನಿವಾಸ್ ಇಲ್ಲ. ಆ ಕೊರತೆಯನ್ನು ತುಂಬಿಸುವುದಕ್ಕೆ ಸಾಧ್ಯವೇ ಇಲ್ಲ. ವಿದ್ಯೆ, ಕೀರ್ತಿ, ಸಾವು ಎಲ್ಲವೂ ಇವರ ಪಾಲಿಗೆ ಬೇಗಲೇ ಬಂದುಬಿಟ್ಟವು.

ಶ್ರೀನಿವಾಸ್‌ಗೆ ಸಾವು ಬರಬಾರದಿತ್ತು, ಅದೂ ಇಷ್ಟು ಬೇಗ ಎಂದರೆ ೪೫ರ ಹರೆಯದಲ್ಲಿ.

**ಟಿ. ಎಸ್. ವೇಣುಗೋಪಾಲ್** ಮತ್ತು **ಶೈಲಜ**
ಸಿಎಚ್ ೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ
ಮೈಸೂರು – ೫೭೦ ೦೦೯






# ಡಾ॥ ಜೆ. ಎಸ್. ಖಂಡೇರಾವ್

**ಹೈ**ದ್ರಾಬಾದ್ ಕರ್ನಾಟಕ ಭಾಗದ ಮಹತ್ವದ ಕಲಾವಿದರಾಗಿರುವ ನಾಡೋಜ **ಡಾ॥ ಜೆ. ಎಸ್. ಖಂಡೇರಾವ್** (ಜನನ 01–11–1940 ಗುಲಬರ್ಗಾ ಜಿಲ್ಲೆ) ಮುಂಬೈಯ ಸರ್. ಜೆ. ಜೆ. ಸ್ಕೂಲ್ ಆಫ್ ಆರ್ಟ್‌ದಿಂದ ಉನ್ನತ ಕಲಾ ಶಿಕ್ಷಣ ಪಡೆದ ನಂತರ ಕಲಬುರ್ಗಿಯಲ್ಲಿ ಕೇವಲ ಕಲಾಕೃತಿಯ ನಿರ್ಮಿತಿಯಲ್ಲಿ ತೊಡಗಿಕೊಳ್ಳದೇ ಸಾವಿರಾರು ಕಲಾವಿದರನ್ನು ಸೃಷ್ಟಿಸಿದ ದ ಐಡಿಯಲ್ ಫೈನ್ ಆರ್ಟ್ ಇನ್ಸ್‌ಟ್ಯೂಟ್‌ನಂಥ ಸಂಸ್ಥೆಯನ್ನು ಸ್ಥಾಪಿಸಿದರು. ಸುಂದರವಾದ ಲ್ಯಾಂಡ್‌ಸ್ಕೇಪ್‌ಗಳನ್ನು ನಿರ್ಮಿಸುವುದರಿಂದ ಆರಂಭಿಸಿ, ಭಾವಚಿತ್ರ ಹಾಗೂ ಅಮೂರ್ತ ಚಿತ್ರಗಳ ನಿರ್ಮಿತಿಯಲ್ಲಿ ತಮ್ಮ ಪರಿಣತಿಯನ್ನು ಮೆರೆದ ಕೀರ್ತಿ ಅವರದ್ದಾಗಿದೆ. ಕರ್ನಾಟಕದ ರೆಂಬ್ರಾಂಟ್ ಎನಿಸಿಕೊಳ್ಳುತ್ತಿರುವ ಅವರ ಅನೇಕ ಭಾವಚಿತ್ರಗಳು ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿವೆ. ಅವರ ಅಮೂರ್ತ ಚಿತ್ರಗಳು ರಾಜ್ಯ ಮತ್ತು ರಾಷ್ಟ್ರ ಮಟ್ಟದ ಪುರಸ್ಕಾರಗಳಿಗೆ ಪಾತ್ರವಾಗಿವೆ. ಹಂಪಿ ವಿಶ್ವವಿದ್ಯಾಲಯವು ಅವರಿಗೆ **'ನಾಡೋಜ'** ಅಭಿದಾನ ನೀಡಿ ಗೌರವಿಸಿದೆ.

ಅಶೋಕ ಎಸ್. ಶಟಕಾರ






Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / NOVEMBER 2014 / ₹ 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)

# ಯೌವ್ವನಭರಿತ ತ್ವಚೆಗಾಗಿ
# ಕೋಮಲ ಮೊಯಿಶ್ಚರೈಸಿಂಗ್.




ಅತ್ಯಂತ ಪಾರದರ್ಶಕ ಹೊಸ ಸಂತೂರ್ ಗ್ಲಿಸರಿನ್‌ನ್ನು ಆವಿಷ್ಕರಿಸಿನೋಡಿ. ಇದು ಗ್ಲಿಸರಿನ್‌ನ ಸೌಮ್ಯ ಮೊಯಿಶ್ಚರೈಸಿಂಗ್ ಮತ್ತು ವಿಟಮಿನ್ ಇ–ಯ ಹೆಚ್ಚುವರಿ ಪೋಷಣೆಯ ಆರೈಕೆ ಹೊಂದಿದೆ. ಸಂಪೂರ್ಣ ಹೊಸ ಅನುಭೂತಿಯೊಂದನ್ನು ಆವಿಷ್ಕರಿಸಿ. ಇಂದೇ.




**ಸಂತೂರ್**
ಗ್ಲಿಸರಿನ್